# ಹಂದಿಜೋಗಿಗಳ ಸಂಸ್ಕೃತಿ ಮತ್ತು ಭಾಷೆ

(ಬಳ್ಳಾರಿ, ದಾವಣಗೆರೆ ಮತ್ತು ಚಿತ್ರದುರ್ಗ ಪ್ರದೇಶದಲ್ಲಿ ನೆಲೆಸಿರುವ ಪ್ರಧಾನ ಹಂದಿಜೋಗಿ
ಸಮುದಾಯದ ನೆಲೆಗಳನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು
ಮೇಘರಾಜ ಜಿ.

ಮಾರ್ಗದರ್ಶಕರು
ಡಾ. ಡಿ. ಪಾಂಡುರಂಗಬಾಬು
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ








ಕನ್ನಡ ಭಾಷಾಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೭

# ಹಂಡಿಜೋಗಿಗಳ ಸಂಸ್ಕೃತಿ ಮತ್ತು ಭಾಷೆ

(ಬಳ್ಳಾರಿ, ದಾವಣಗೆರೆ ಮತ್ತು ಚಿತ್ರದುರ್ಗ ಪ್ರದೇಶದಲ್ಲಿ ನೆಲೆಸಿರುವ ಪ್ರಧಾನ ಹಂಡಿಜೋಗಿ ಸಮುದಾಯದ ನೆಲೆಗಳನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು
**ಮೇಘರಾಜ ಜಿ.**

ಮಾರ್ಗದರ್ಶಕರು
**ಡಾ. ಡಿ. ಪಾಂಡುರಂಗಬಾಬು**
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ



**ಕನ್ನಡ ಭಾಷಾಧ್ಯಯನ ವಿಭಾಗ**
ಭಾಷಾ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ-೫೮೩ ೨೭೬
೨೦೧೭



# ಮಾರ್ಗದರ್ಶಕರ ದೃಢೀಕರಣ ಪತ್ರ

**ಮೇಘರಾಜ ಜಿ.** ಅವರು ನನ್ನ ಮಾರ್ಗದರ್ಶನದಲ್ಲಿ **"ಹಂಡಿಜೋಗಿಗಳ ಸಂಸ್ಕೃತಿ ಮತ್ತು ಭಾಷೆ"** (ಬಳ್ಳಾರಿ, ದಾವಣಗೆರೆ ಮತ್ತು ಚಿತ್ರದುರ್ಗ ಪ್ರದೇಶದಲ್ಲಿ ನೆಲೆಸಿರುವ ಪ್ರಧಾನ ಹಂಡಿಜೋಗಿ ಸಮುದಾಯದ ನೆಲೆಗಳನ್ನು ಅನುಲಕ್ಷಿಸಿ) ಎಂಬ ಸಂಶೋಧನಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿರುತ್ತಾರೆ.

ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ಡಿ. ಪಾಂಡುರಂಗಬಾಬು**
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ : 04. 02. 2017.

ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಘೋಷಣಾ ಪತ್ರ

**ಡಾ. ಡಿ. ಪಾಂಡುರಂಗಬಾಬು,** ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ **"ಹಂಡಿಜೋಗಿಗಳ ಸಂಸ್ಕೃತಿ ಮತ್ತು ಭಾಷೆ"** (ಬಳ್ಳಾರಿ, ದಾವಣಗೆರೆ ಮತ್ತು ಚಿತ್ರದುರ್ಗ ಪ್ರದೇಶದಲ್ಲಿ ನೆಲೆಸಿರುವ ಪ್ರಧಾನ ಹಂಡಿಜೋಗಿ ಸಮುದಾಯದ ನೆಲೆಗಳನ್ನು ಅನುಲಕ್ಷಿಸಿ) ಎಂಬ ಸಂಶೋಧನಾ ಪ್ರಬಂಧವನ್ನು ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಸಾದರಪಡಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಣೆಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನಾ ಅಧ್ಯಯನವಾಗಿದೆ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.


ಸಂಶೋಧಕರು

**ಮೇಘರಾಜ ಜಿ.**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬


ದಿನಾಂಕ : 04/02/17.
ಸ್ಥಳ : ವಿದ್ಯಾರಣ್ಯ

# ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ವೈಧಾನಿಕತೆ

೧.೪ ಅಧ್ಯಯನದ ಸ್ವರೂಪ

## ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ

ಕರ್ನಾಟಕದಲ್ಲಿ ನೆಲೆಸಿರುವ ಅಲೆಮಾರಿ ಬುಡಕಟ್ಟು ಸಮುದಾಯಗಳಲ್ಲಿ ಹಂಡಿಜೋಗಿ ಸಮುದಾಯವೂ ಒಂದು. ಮೂಲತಃ ಅಲೆಮಾರಿಗಳಾದ ಇವರು ಇಂದಿಗೂ ವರ್ಷದ ಕೆಲವು ತಿಂಗಳುಗಳು ಸಂಚಾರದಲ್ಲಿಯೇ ಕಳೆಯುವುದು ಕಂಡುಬರುತ್ತದೆ. ಇವರು ಕರ್ನಾಟಕಕ್ಕೆ ಮಹಾರಾಷ್ಟ್ರ ಗಡಿಭಾಗಗಳಿಂದ ವಲಸೆ ಬಂದಿರುವುದು ಕಂಡುಬರುತ್ತದೆ. ಸದಾ ಸಂಚಾರಿಗಳಾದ ಇವರು ಕಳೆದ ೮-೧೦ ದಶಕಗಳಿಂದೀಚೆಗೆ ಕರ್ನಾಟಕದ ಕೆಲವು ಭಾಗಗಳಲ್ಲಿ ಶಾಶ್ವತ ನೆಲೆಗಳನ್ನು ನಿರ್ಮಿಸಿಕೊಂಡು ಜೀವನ ಸಾಗಿಸುತ್ತಿರುವುದು ಕಂಡುಬರುತ್ತದೆ. ಕರ್ನಾಟಕದ ಶಿವಮೊಗ್ಗ, ದಾವಣಗೆರೆ, ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಹಂಡಿಜೋಗಿ ಸಮುದಾಯ ಅಧಿಕ ಸಂಖ್ಯೆಯಲ್ಲಿ ನೆಲೆಸಿರುವುದು ಕಂಡುಬರುತ್ತದೆ. ವಿರಳವಾಗಿ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲೂ ಈ ಸಮುದಾಯವನ್ನು ಕಾಣಬಹುದಾಗಿದೆ. ಜೊತೆಗೆ ನೆರೆಯ ರಾಜ್ಯವಾದ ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆಯ ರಾಯದುರ್ಗ ಮತ್ತು ಕಲ್ಯಾಣದುರ್ಗ ತಾಲೂಕುಗಳಲ್ಲಿ ಹಂಡಿಜೋಗಿಗಳು ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿರುವುದು ಕಂಡುಬರುತ್ತದೆ. ಮೂಲತಃ ಹಾಡುಗಾರರಾದ ಇವರು ಜೀವನ ನಿರ್ವಹಣೆಗಾಗಿ ಹಾಡುಗಳನ್ನು ಹಾಡುತ್ತ ಊರು-ಊರು ಸಂಚರಿಸುವುದು ಕಂಡುಬರುತ್ತದೆ. ಹಂಡಿಜೋಗಿಗಳ ಮೂಲಭಾಷೆ ಮರಾಠಿ. ಇವರು ಕರ್ನಾಟಕದಲ್ಲಿ ನೆಲೆಸಿರುವುದರಿಂದ ಕನ್ನಡ ಭಾಷೆಯಲ್ಲಿ ಹಾಡುಗಳನ್ನು ರಚಿಸಿ ಹಾಡುವುದು ಕಂಡುಬರುತ್ತದೆ. ಕರ್ನಾಟಕಕ್ಕೆ ಇವರ ಪ್ರಸಾರ ಬೆಳಗಾವಿಯ ಖಾನಾಪುರದ ಹಂಡಿಬಡಗನಾಥ ಮಠದ ಮುಖಾಂತರವಾಯಿತು. ಹಂಡಿಜೋಗಿಗಳ ಸಾಹಿತ್ಯವೆಲ್ಲವೂ (ಹಾಡು, ಕತೆ, ಲಾವಣಿ) ಕನ್ನಡ ಭಾಷೆಯಲ್ಲಿರುವುದನ್ನು ಗುರುತಿಸಬಹುದಾಗಿದೆ. ಇವರು ಮೌಖಿಕ ಸಂಪ್ರದಾಯದಲ್ಲಿ ಸಮುದಾಯದ ಪಾರಂಪರಿಕ ವೃತ್ತಿಯಾದ ಹಾಡುಗಾರಿಕೆಯನ್ನು ತಲೆಮಾರಿನಿಂದ ತಲೆಮಾರಿಗೆ ಸಂರಕ್ಷಿಸಿಕೊಂಡು ಬಂದಿರುವುದನ್ನು ಗುರುತಿಸಬಹುದಾಗಿದೆ. ಇವರು ಹಾಡುವ ಸಾಹಿತ್ಯಕ್ಕೆ ಭಾರತ ಕತೆ, ಮಹಾಭಾರತ ಕತೆ, ಅರ್ಜುನ ಜೋಗಿ ಕತೆ, ಪಾಂಡವರ ಕತೆ ಎಂದು ವಿವರಿಸುವುದು ಕಂಡುಬರುತ್ತದೆ. ಮಹಾಭಾರತದ ಕಥಾವಸ್ತುವನ್ನು ಆಯ್ದುಕೊಂಡು ತಮ್ಮದೇ ಧಾಟಿಯಲ್ಲಿ ಅನೇಕ ರಾತ್ರಿಗಳವರೆಗೆ ಹಾಡುವುದನ್ನು ಗುರುತಿಸಬಹುದಾಗಿದೆ. ಇವರು ಮಹಾಭಾರತ

ಕತೆಯ ಜೊತೆಗೆ, ಕೆಲವು ರಮ್ಯ ಹಾಗೂ ಅದ್ಭುತ ವಿಷಯವಸ್ತುವನ್ನುಳ್ಳ ಜನಪದ ಹಾಡು (ಕತೆ)ಗಳನ್ನು ಹಾಡುವುದು ಕಂಡುಬರುತ್ತದೆ. ಜೊತೆಗೆ ಅನೇಕ ಸಾಮಾಜಿಕ ಹಾಗೂ ಚಾರಿತ್ರಿಕ ಲಾವಣಿಗಳನ್ನು ಹಾಡುವುದನ್ನು ಗುರುತಿಸಬಹುದಾಗಿದೆ. ಇವರ ಲಾವಣಿ ಹಾಡುಗಳು ಸ್ಥಳೀಯ ಕನ್ನಡ ಪರಿಸರದಲ್ಲಿ ಹೆಚ್ಚು ಪ್ರಸಿದ್ಧಿ ಪಡೆದಿರುವುದನ್ನು ಗುರುತಿಸಬಹುದಾಗಿದೆ.

ಉದಾ. ಅತ್ತೆ–ಸೊಸೆಯರ ಹಾಡು

ಅಕ್ಕ–ತಂಗಿಯರ ಹಾಡು

ಅಣ್ಣ–ತಮ್ಮರ ಹಾಡು

ಗಂಡ–ಹೆಂಡತಿಯರ ಹಾಡು

ಅಣ್ಣ–ತಂಗಿಯರ ಹಾಡು ಮೊದಲಾದವುಗಳನ್ನು ಹೆಸರಿಸಬಹುದಾಗಿದೆ. ಜೊತೆಗೆ ಹಂಡಿಜೋಗಿಗಳು ಸ್ಥಳೀಯ ಪರಿಸರದಲ್ಲಿ ತಮ್ಮ ಬಣ್ಣ ಬಣ್ಣದ ಉಡುಗೆ ತೊಡುಗೆಗಳಿಂದಲೇ ಹೆಚ್ಚು ಪ್ರಸಿದ್ಧರಾಗಿರುವುದು ಕಂಡುಬರುತ್ತದೆ. ಜೊತೆಗೆ ಇವರು ತಮ್ಮ ಸಮುದಾಯದ ಸಾಂಪ್ರದಾಯಿಕ (ಪಾರಂಪರಿಕ) ವಾದ್ಯವಾದ ಕಿನ್ನೂರಿ ನುಡಿಸುತ್ತಾ ಹಾಡುವುದರಲ್ಲಿ ಹೆಚ್ಚು ಪ್ರಸಿದ್ಧರಾಗಿರುವುದು ಕಂಡುಬರುತ್ತದೆ.

ಹಂಡಿಜೋಗಿಗಳ ಸಾಂಪ್ರದಾಯಿಕ ವೇಷಭೂಷಣಗಳು ಹಾಗೂ ಪಾರಂಪರಿಕ ವೃತ್ತಿಗನುಗುಣವಾಗಿ ಕರ್ನಾಟಕದಲ್ಲಿ ಇವರನ್ನು ಅನೇಕ ಹೆಸರುಗಳಿಂದ ಕರೆಯುವುದು ಕಂಡುಬರುತ್ತದೆ. ಅವುಗಳೆಂದರೆ,

ಹಂಡಿಜೋಗಿ

ಕಿನ್ನರಿಜೋಗಿ (ಕಿಂದರಿ ಜೋಗಿ)

ಹಂದಿಜೋಗಿ

ಮರಾಠಿ ಜೋಗಿ

ಜೋಗಿ

ಜೋಗೇರು

ಜೋಗಪ್ಪ

ಎಂದು ಮೊದಲಾದ ಹೆಸರುಗಳಿಂದ ಕರೆಯುವುದನ್ನು ಗುರುತಿಸಬಹುದಾಗಿದೆ. ಮೇಲೆ ಹೆಸರಿಸಿದ ಪ್ರತಿಯೊಂದು ಹೆಸರೂ ಸಹ ಸಮುದಾಯದ ವೃತ್ತಿ, ಆಚರಣೆ, ಭಾಷೆ ಮೊದಲಾದ ಕುಲ ಕಸುಬುಗಳಿಗೆ ಸಂಬಂಧಿಸಿರುವುದು ಕಂಡುಬರುತ್ತದೆ. ಒಟ್ಟಾರೆ ಕರ್ನಾಟಕದಲ್ಲಿ ನೆಲೆಸಿರುವ ಹಂಡಿಜೋಗಿಗಳು ತಮ್ಮದೇ ಆದ ವಿಶಿಷ್ಟ ಜೀವನಕ್ರಮ ರೂಢಿಸಿಕೊಂಡಿರುವುದು ಕಂಡುಬರುತ್ತದೆ. ಹಂಡಿಜೋಗಿಗಳು ಮೂಲತಃ ಅಲೆಮಾರಿಗಳಾದರೂ ಇಂದಿಗೂ ತಮ್ಮ ಸಮುದಾಯದ ಪಾರಂಪರಿಕ ಆಚರಣೆಗಳು, ರೂಢಿಸಂಪ್ರದಾಯಗಳನ್ನು ಆಚರಿಸಿಕೊಂಡು ಬರುತ್ತಿರುವುದನ್ನು ಗುರುತಿಸಬಹುದಾಗಿದೆ. ಜೊತೆಗೆ ಹಂಡಿಜೋಗಿ ಸಮುದಾಯ ತಮ್ಮದೇ ಆದ ವಿಶಿಷ್ಟ ಸಾಂಪ್ರದಾಯಿಕ ಆಚರಣೆಗಳೊಂದಿಗೆ ಜೀವಿಸುತ್ತಿರುವುದು ಕಂಡುಬರುತ್ತದೆ. ಸಮುದಾಯದಲ್ಲಿನ ಸಾಂಸ್ಕೃತಿಕ ಆಚರಣೆಗಳು ಭಿನ್ನತೆಯಿಂದ

ಕೂಡಿರುವುದು ಕಂಡುಬರುತ್ತದೆ. ಹಂಡಿಜೋಗಿ ಸಮುದಾಯ ತನ್ನದೇ ಆದ ರೀತಿ–ನೀತಿ, (ಸಮುದಾಯದ ನಡವಳಿಕೆಗಳು) ಆಚಾರ–ವಿಚಾರ, ನಂಬಿಕೆ–ಸಂಪ್ರದಾಯಗಳು, ವಿಧಿ–ನಿಷೇಧಗಳು, ಆಹಾರ ಪದ್ಧತಿ, ಪಾರಂಪರಿಕ ಉಡುಗೆ–ತೊಡುಗೆಗಳು, ಕುಲ–ದೈವಗಳ ಆರಾಧನೆ, ಸಾಹಿತ್ಯ ಮತ್ತು ಭಾಷೆ ಮೊದಲಾದವುಗಳನ್ನು ಪಾರಂಪರಿಕವಾಗಿ ಸಂರಕ್ಷಿಸಿಕೊಂಡು ಬಂದಿರುವುದನ್ನು ಗುರುತಿಸಬಹುದಾಗಿದೆ. ಪ್ರಸ್ತುತ ಈ ಅಧ್ಯಯನದಲ್ಲಿ ಹಂಡಿಜೋಗಿಗಳ ಜೀವನಕ್ರಮ, ಸಾಹಿತ್ಯ, ಭಾಷೆ, ಪ್ರದರ್ಶನ ಕಲೆಗಳು ಹೀಗೆ ಮೊದಲಾದ ಸಮುದಾಯದ ಸಾಂಸ್ಕೃತಿಕ ಆಚರಣೆಗಳನ್ನು ಕುರಿತು ವಿವರಿಸಲಾಗಿದೆ.

## ೧.೧. ಅಧ್ಯಯನದ ಉದ್ದೇಶ

ಪ್ರಸ್ತುತ ಈ ಅಧ್ಯಯನದಲ್ಲಿ ಹಂಡಿಜೋಗಿ ಸಮುದಾಯದ ಪಾರಂಪರಿಕ ವೃತ್ತಿ, ವೃತ್ತಿಯ ಬಗೆಗಿನ ನಂಬಿಕೆ ಮತ್ತು ವಿಧಿ–ನಿಷೇಧಗಳನ್ನು ಕುರಿತು ವಿವರಿಸಲಾಗಿದೆ.

* ಸಮುದಾಯದ ಸಂಸ್ಕೃತಿಗೆ ಸಂಬಂಧಿಸಿದಂತೆ ಹಂಡಿಜೋಗಿಗಳ ಜೀವನಕ್ರಮ, ಆಚರಣೆಗಳು, ರೂಢಿ ಸಂಪ್ರದಾಯ ಮೊದಲಾದ ಆಚರಣೆಗಳನ್ನು ಕುರಿತು ವಿವರಿಸಲಾಗಿದೆ.
* ಹಂಡಿಜೋಗಿ ಸಮುದಾಯದ ಸಾಂಪ್ರದಾಯಿಕ ಆಚರಣೆಗಳನ್ನು ಸಮುದಾಯ ಸಂಬಂಧಿ, ವ್ಯಕ್ತಿಸಂಬಂಧಿ, ವೃತ್ತಿಸಂಬಂಧಿ ಹಾಗೂ ದೈವ ಸಂಬಂಧಿಯಾಗಿ ವರ್ಗೀಕರಿಸಿಕೊಂಡು ವಿವರಿಸಲಾಗಿದೆ.
* ಹಂಡಿಜೋಗಿ ಸಮುದಾಯದ ಮೂಲಭಾಷೆಯ ಸ್ವರೂಪವನ್ನು ಕುರಿತು ಈ ಅಧ್ಯಯನದಲ್ಲಿ ವಿವರಿಸಲಾಗಿದೆ.
* ಸಮುದಾಯದ ಭಾಷಿಕ ವಿವರಗಳನ್ನು ತಿಳಿಯಲು ಕುಟುಂಬಗಳಲ್ಲಿ ಬಳಕೆಯಲ್ಲಿರುವ ಭಾಷಿಕ ಘಟಕಗಳಾದ ಸಂಬಂಧವಾಚಕಗಳು, ಸಂಬೋಧನೆಗಳು, ಬಯ್ಗುಳ, ಸಂಖ್ಯಾವಾಚಿಗಳು, ವ್ಯಕ್ತಿನಾಮಗಳು ಮೊದಲಾದವುಗಳನ್ನು ಕುರಿತು ಭಾಷಿಕ ನೆಲೆಯಲ್ಲಿ ವಿವರಿಸಲಾಗಿದೆ.
* ಸಮುದಾಯದ ಮೂಲಭಾಷೆಯ ಮೇಲಾಗಿರುವ ಕನ್ನಡದ ಪ್ರಭಾವವನ್ನು ಕುರಿತು ವಿವರಿಸಲಾಗಿದೆ.
* ಹಂಡಿಜೋಗಿ ಸಮುದಾಯದ ಸಾಂಸ್ಕೃತಿಕ ಆಚರಣೆಗಳು ಮತ್ತು ಭಾಷೆಯ ಅಂತರ್‌ಸಂಬಂಧವನ್ನು ಕುರಿತು ಸಮಾಜೋಭಾಷಿಕ ನೆಲೆಯಲ್ಲಿ ವಿವರಿಸಲಾಗಿದೆ.
* ಹಂಡಿಜೋಗಿ ಸಮುದಾಯದ ಭಾಷೆ, ಭಾಷೆಯ ಸ್ವರೂಪ ಹಾಗೂ ವೈಶಿಷ್ಟ್ಯವನ್ನು ಕುರಿತು ವಿವರಿಸಲಾಗಿದೆ.
* ಸಮುದಾಯದ ಸಾಂಸ್ಕೃತಿಕ ಆಚರಣೆಗಳಿಗೆ ಸಂಬಂಧಿಸಿದ ಸಮುದಾಯದ ಸಾಂಸ್ಕೃತಿಕ ಪದಕೋಶವನ್ನು ಕುರಿತು ವಿವರಿಸಲಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಹಂಡಿಜೋಗಿಗಳ ಸಂಸ್ಕೃತಿ ಮತ್ತು ಭಾಷೆ ಎಂಬ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಕರ್ನಾಟಕದ ದಾವಣಗೆರೆ, ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ನೆಲೆಸಿರುವ ಪ್ರಧಾನ ಹಂಡಿಜೋಗಿ ಸಮುದಾಯದ ನೆಲೆಗಳನ್ನು ಮಾತ್ರ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

ಮೇಲಿನ ಮೂರು ಜಿಲ್ಲೆಗಳಿಗೆ ಅಧ್ಯಯನದ ವ್ಯಾಪ್ತಿಯನ್ನು ಮಿತಿಗೊಳಿಸಿಕೊಳ್ಳಲಾಗಿದೆ.

## ೧.೩. ಅಧ್ಯಯನದ ವೈಧಾನಿಕತೆ

ಪ್ರಸ್ತುತ ಅಧ್ಯಯನವನ್ನು ಕ್ಷೇತ್ರಕಾರ್ಯ ವಿಧಾನದ ಮೂಲಕ ಸಿದ್ಧಪಡಿಸಲಾಗಿದೆ. ಹಂಡಿಜೋಗಿಗಳ ಭಾಷೆ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ವಿವರಗಳನ್ನು ಸಂಗ್ರಹಿಸಲು ಸಮುದಾಯದ ಪ್ರಧಾನ ನೆಲೆಗಳಿಗೆ ಭೇಟಿ ನೀಡಿ ಮಾಹಿತಿ ಸಂಗ್ರಹಿಸಲಾಗಿದೆ. ಹಂಡಿಜೋಗಿ ಸಮುದಾಯದ ಸಾಂಸ್ಕೃತಿಕ ಮತ್ತು ಭಾಷಿಕ ವಿವರಗಳನ್ನು ಸಾಮಾಜಿಕ ಘಟಕಗಳಾದ ಲಿಂಗ, ವಯಸ್ಸು, ವೃತ್ತಿ, ಶಿಕ್ಷಣ, ಅಧಿಕಾರ (ಹುದ್ದೆ) ಮೊದಲಾದ ಸಾಮಾಜಿಕ ಅಂಶಗಳ ಹಿನ್ನೆಲೆಯಲ್ಲಿ ಆನ್ವಯಿಕವಾಗಿ ಸಮಾಜೋಭಾಷಿಕ ನೆಲೆಯಲ್ಲಿ ಈ ಅಧ್ಯಯನವನ್ನು ಸಿದ್ಧಪಡಿಸಲಾಗಿದೆ. ಸಮುದಾಯದ ಸಾಮಾಜಿಕ ಹಾಗೂ ಕೌಟುಂಬಿಕ ಸನ್ನಿವೇಶದಲ್ಲಿ ಬಳಕೆಗೊಳ್ಳುವ ಭಾಷಾರೂಪಗಳನ್ನು ಸಾಮಾಜಿಕ ಅಂಶಗಳ (ಲಿಂಗ, ವಯಸ್ಸು, ವೃತ್ತಿ) ಹಿನ್ನೆಲೆಯಲ್ಲಿ ಮಾಹಿತಿ ಸಂಗ್ರಹಿಸಿ ವಿವರಿಸಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಕನ್ನಡ ಭಾಷಾಧ್ಯಯನ ವಿಭಾಗದ ಕನ್ನಡ ಉಪಭಾಷಾ ಪದಕೋಶದ ಸಿದ್ಧತೆಗೆ ರಚಿಸಿದ ಪ್ರಶ್ನಾವಳಿಯನ್ನು ಬಳಸಿಕೊಂಡು ಹಂಡಿಜೋಗಿ ಸಮುದಾಯದ ಸಾಂಸ್ಕೃತಿಕ ಆಚರಣೆಗಳು ಮತ್ತು ಭಾಷೆಗೆ ಸಂಬಂಧಿಸಿದ ಅನೇಕ ವಿವರಗಳನ್ನು ಸಮುದಾಯದ ವಕ್ತೃಗಳಿಂದ ಪಡೆದುಕೊಳ್ಳಲಾಯಿತು. ಸಮುದಾಯದ ಸಾಂಸ್ಕೃತಿಕ ಆಚರಣೆಗೆ ಸಂಬಂಧಿಸಿದ ಭಾಷಿಕ ಹಾಗೂ ಸಾಂಸ್ಕೃತಿಕ ವಿವರಗಳನ್ನು ಸಮುದಾಯದಲ್ಲಿ ವಯೋಮಿತಿಗನುಗುಣವಾಗಿ ಮಹಿಳೆ ಮತ್ತು ಪುರುಷರಿಂದ ಮಾಹಿತಿ ಸಂಗ್ರಹಿಸಿ ಈ ಅಧ್ಯಯನವನ್ನು ಸಿದ್ಧಪಡಿಸಲಾಗಿದೆ. ಸಮುದಾಯದಲ್ಲಿ ಬಳಕೆಯಲ್ಲಿರುವ, ಸಂಬಂಧವಾಚಕಗಳು, ಸಂಬೋಧನೆಗಳು, ವ್ಯಕ್ತಿನಾಮಗಳು ಮೊದಲಾದ ಸಾಮಾಜಿಕ ಹಾಗೂ ಭಾಷಿಕ ವಿಷಯಗಳಿಗೆ ಸಂಬಂಧಿಸಿದ ಅನೇಕ ವಿವರಗಳಿಂದ ಸಮುದಾಯದ ಭಾಷೆ ಮತ್ತು ಸಂಸ್ಕೃತಿಯನ್ನು ಈ ಅಧ್ಯಯನದಲ್ಲಿ ವಿವರಿಸಲಾಗಿದೆ.

## ೧.೪. ಅಧ್ಯಯನದ ಸ್ವರೂಪ

ಪ್ರಸ್ತುತ ಹಂಡಿಜೋಗಿಗಳ ಸಂಸ್ಕೃತಿ ಮತ್ತು ಭಾಷೆ ಎಂಬ ಈ ಅಧ್ಯಯನದಲ್ಲಿ ಹಂಡಿಜೋಗಿಗಳ ಜೀವನಕ್ರಮ, ನಡವಳಿಕೆ, ರೀತಿ-ನೀತಿ, ರೂಢಿಸಂಪ್ರದಾಯ ಮೊದಲಾದ ಸಾಂಸ್ಕೃತಿಕ ಆಚರಣೆಗಳು ಹಾಗೂ ಸಮುದಾಯದ ಮೂಲಭಾಷೆಗೆ ಸಂಬಂಧಿಸಿದ ವಿವರಗಳನ್ನು ಕುರಿತು ವಿವರಿಸಲಾಗಿದೆ.

**ಅಧ್ಯಾಯ: ಒಂದು: ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ.**

ಪ್ರಸ್ತುತ ಅಧ್ಯಾಯದಲ್ಲಿ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆಯನ್ನು ಸ್ಪಷ್ಟವಾಗಿ ನಿರೂಪಿಸಲಾಗಿದೆ. ಅಧ್ಯಯನದ ಸ್ವರೂಪದ ಭಾಗದಲ್ಲಿ ಅಧ್ಯಯನಕ್ಕೆ ಪೂರಕವಾಗಿ ಯೋಜಿಸಿಕೊಂಡ ಅಧ್ಯಾಯಗಳನ್ನು ಸಂಕ್ಷಿಪ್ತವಾಗಿ ಅರ್ಥೈಸಿಕೊಳ್ಳಲಾಗಿದೆ.

**ಅಧ್ಯಾಯ: ಎರಡು: ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ**

ಪ್ರಸ್ತುತ ಅಧ್ಯಾಯದಲ್ಲಿ ಹಂಡಿಜೋಗಿ ಸಮುದಾಯವನ್ನು ಕುರಿತು ಇದುವರೆಗೆ ನಡೆದಿರುವ ಅಧ್ಯಯನಗಳನ್ನು ಕುರಿತು (ಲೇಖನಗಳು, ಕೃತಿಗಳು) ವಿವರಿಸಲಾಗಿದೆ. ಜೊತೆಗೆ ಈ ಅಧ್ಯಾಯದಲ್ಲಿ ಹಂಡಿಜೋಗಿ ಸಮುದಾಯದ ಮೂಲವನ್ನು ಕುರಿತು ವಿವರಿಸಲಾಗಿದೆ. ಸಮುದಾಯದ ಮೂಲಕ್ಕೆ ಸಂಬಂಧಿಸಿದಂತೆ ಹಂಡಿಜೋಗಿಗಳಲ್ಲಿ ಪ್ರಚಲಿತದಲ್ಲಿರುವ ಪೌರಾಣಿಕ ಹಾಗೂ ಜನಪದ ಕತೆಗಳನ್ನು ಕುರಿತು ವಿವರಿಸಲಾಗಿದೆ.

**ಅಧ್ಯಾಯ: ಮೂರು : ಹಂಡಿಜೋಗಿಗಳ ಬದುಕು ಮತ್ತು ಭಾಷೆ**

ಪ್ರಸ್ತುತ ಅಧ್ಯಾಯದಲ್ಲಿ ಸಮುದಾಯದ ಮೂಲವೃತ್ತಿ, ವೃತ್ತಿಯ ಆಚರಣೆ, ವೃತ್ತಿಯ ಬಗೆಗಿನ ನಂಬಿಕೆ ಮೊದಲಾದವುಗಳನ್ನು ಕುರಿತು ವಿವರಿಸಲಾಗಿದೆ. ಜೊತೆಗೆ ಸಮುದಾಯದ ಹಾಡುಗಾರಿಕೆಯಲ್ಲಿನ ಸಾಹಿತ್ಯ ಮತ್ತು ಭಾಷೆಯನ್ನು ಕುರಿತು ವಿವರಿಸಲಾಗಿದೆ. ನಂತರ ಹಂಡಿಜೋಗಿ ಸಮುದಾಯದ ಪ್ರದರ್ಶನ ಕಲೆ, ಸಮುದಾಯದ ಸಂಸ್ಕೃತಿಯ ನಾಯಕರು, ಹಂಡಿಜೋಗಿ ಸಮುದಾಯದ ವೃತ್ತಿಪಲ್ಲಟಗಳು ಹಾಗೂ ವೃತ್ತಿಸಂಬಂಧಿ ವಿಧಿ ನಿಷೇಧಗಳನ್ನು ಕುರಿತು ವಿವರಿಸಲಾಗಿದೆ.

**ಅಧ್ಯಾಯ: ನಾಲ್ಕು: ಹಂಡಿಜೋಗಿಗಳ ಸಾಂಸ್ಕೃತಿಕ ಆಚರಣೆಗಳು ಮತ್ತು ಭಾಷೆ**

ಈ ಅಧ್ಯಾಯದಲ್ಲಿ ಹಂಡಿಜೋಗಿ ಸಮುದಾಯದ ಸಾಂಸ್ಕೃತಿಕ ಆಚರಣೆಗಳು ಮತ್ತು ಸಮುದಾಯದ ರೂಢಿ ಸಂಪ್ರದಾಯಗಳನ್ನು ಕುರಿತು ವಿವರಸಲಾಗುವುದು. ಜೊತೆಗೆ ಸಮುದಾಯದ ಸಾಂಸ್ಕೃತಿಕ ವೃತ್ತಿಸಂಬಂಧಿ ಹಾಗೂ ವ್ಯಕ್ತಿಸಂಬಂಧಿ ಆಚರಣೆಗಳಲ್ಲಿನ ಭಾಷಾ ಬಳಕೆಯನ್ನು ಕುರಿತು ವಿವರಿಸಲಾಗಿದೆ. ನಂತರ ಹಂಡಿಜೋಗಿ ಸಮುದಾಯದ ಕುಲದೈವಗಳು ಹಾಗೂ ಉಪ ಪಂಗಡಗಳನ್ನು ಕುರಿತು ವಿವರಿಸಲಾಗಿದೆ.

**ಅಧ್ಯಾಯ: ಐದು: ಹಂಡಿಜೋಗಿಗಳ ಭಾಷೆ, ಸ್ವರೂಪ ಮತ್ತು ವೈಶಿಷ್ಟ್ಯ**

ಪ್ರಸ್ತುತ ಈ ಅಧ್ಯಾಯದಲ್ಲಿ ಹಂಡಿಜೋಗಿ ಸಮುದಾಯದ ಭಾಷಿಕ ಪರಿಸರವನ್ನು ಕುರಿತು ವಿವರಿಸಲಾಗಿದೆ. ಹಂಡಿಜೋಗಿ ಸಮುದಾಯದ ಸಾಮಾಜಿಕ ಮತ್ತು ಕೌಟುಂಬಿಕ ಸನ್ನಿವೇಶದಲ್ಲಿನ ಭಾಷಾ ಬಳಕೆ ಹಾಗೂ ಸಮುದಾಯದ ಮೂಲಭಾಷಾ ಬಳಕೆಯ ವಲಯವನ್ನು ಕುರಿತು ವಿವರಿಸಲಾಗಿದೆ. ಜೊತೆಗೆ ಹಂಡಿಜೋಗಿ ಸಮುದಾಯದಲ್ಲಿ ಬಳಕೆಯಲ್ಲಿರುವ ಸಂಬಂಧವಾಚಕಗಳು, ಸಂಬೋಧನೆಗಳು, ಗಾದೆಗಳು, ಸಂಖ್ಯಾವಾಚಿಗಳು, ವ್ಯಕ್ತಿನಾಮಗಳು, ಸ್ಥಳನಾಮಗಳು ಮೊದಲಾವುಗಳನ್ನು ಕುರಿತು ಭಾಷಿಕವಾಗಿ ವಿವರಿಸಲಾಗಿದೆ.

**ಅಧ್ಯಾಯ: ಆರು: ಹಂಡಿಜೋಗಿ ಸಮುದಾಯದ ಸಾಂಸ್ಕೃತಿಕ ಪದಕೋಶ**

ಈ ಅಧ್ಯಾಯದಲ್ಲಿ ಹಂಡಿಜೋಗಿ ಸಮುದಾಯದ ವೃತ್ತಿ, ದೈವ, ಆಚರಣೆಗಳಿಗೆ ಸಂಬಂಧಿಸಿದ ಸಾಂಸ್ಕೃತಿಕ ಪದಕೋಶವನ್ನು ಕುರಿತು ವಿವರಿಸಲಾಗಿದೆ. ಜೊತೆಗೆ ಹಂಡಿಜೋಗಿ ಸಮುದಾಯದ ಕೌಟುಂಬಿಕ ವಲಯದಲ್ಲಿ ಬಳಕೆಯಲ್ಲಿರುವ ಮೂಲ ಭಾಷಾ ರೂಪಗಳಿಗೆ ಸಂಬಂಧಿಸಿದ ಪದಕೋಶವನ್ನು ಕುರಿತು ವಿವರಿಸಲಾಗಿದೆ. ಜೊತೆಗೆ ಸಮುದಾಯದ ಗೃಹೋಪಯೋಗಿ ವಸ್ತುಗಳು, ಪ್ರಾಣಿಗಳು ಮೊದಲಾದವುಗಳಿಗೆ ಸಂಬಂಧಿಸಿದ ಮೂಲಭಾಷೆಯ ಪದಕೋಶವನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಅಧ್ಯಾಯ: ಏಳು: ಸಮಾರೋಪ**

ಈ ಅಧ್ಯಾಯದಲ್ಲಿ ಒಟ್ಟಾರೆ ಅಧ್ಯಯನದ ಮೂಲಕ ಕಂಡುಕೊಂಡ ಫಲಿತಗಳು, ಪರಾಮರ್ಶನ ಗ್ರಂಥಗಳು, ನಕ್ಷೆಗಳು, ಛಾಯಾಚಿತ್ರಗಳು ಮೊದಲಾದವುಗಳ ಸೂಚಿಯನ್ನು ನೀಡಲಾಗಿದೆ.



ಅಧ್ಯಾಯ ಎರಡು

# ಹಂಡಿಜೋಗಿ ಸಮುದಾಯ ಕುರಿತು ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ ಮತ್ತು ಸಮುದಾಯದ ಮೂಲ

೨.೧ ಅಧ್ಯಯನಗಳ ಸಮೀಕ್ಷೆ

೨.೨ ಹಂಡಿಜೋಗಿ ಸಮುದಾಯದ ಮೂಲ

೨.೨.೧ ಪೌರಾಣಿಕ ಹಿನ್ನೆಲೆ

೨.೨.೨. ಜನಪದ ಹಿನ್ನೆಲೆ

೨.೩ ಜೋಗಿಗಳು, ನಾಥಯೋಗಿಗಳು ಮತ್ತು ಭೈರವನನ್ನು ಕುರಿತ ಜನಪದ ಅಭಿವ್ಯಕ್ತಿಗಳು

# ಅಧ್ಯಾಯ: ಎರಡು

# ಹಂಡಿಜೋಗಿ ಸಮುದಾಯ ಕುರಿತು ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಈ ಅಧ್ಯಾಯದಲ್ಲಿ ಕರ್ನಾಟಕದಲ್ಲಿ ಅಲೆಮಾರಿ ಸಮುದಾಯಗಳನ್ನು ಕುರಿತು ನಡೆದಿರುವ ಅಧ್ಯಯನಗಳನ್ನು ಅವಲೋಕನ ಮಾಡಲಾಗುವುದು. ಕರ್ನಾಟಕದಲ್ಲಿ ನೆಲೆಸಿರುವ ಅನೇಕ ಬುಡಕಟ್ಟು ಸಮುದಾಯಗಳು, ಅಲೆಮಾರಿ, ಅರೆ ಅಲೆಮಾರಿ ಸಮುದಾಯಗಳು ತಮ್ಮದೇ ಆದ ಭಾಷೆ ಹಾಗೂ ಸಂಸ್ಕೃತಿಯೊಂದಿಗೆ ವಿಶಿಷ್ಟತೆಯಿಂದ ಜೀವಿಸುತ್ತಿವೆ. ಅಂತಹ ಅಲೆಮಾರಿ ಸಮುದಾಯಗಳಲ್ಲಿ ಹಂಡಿಜೋಗಿ ಸಮುದಾಯವೂ ಒಂದು. 'ಹಂಡಿಜೋಗಿ' ಸಮುದಾಯವನ್ನು ಕುರಿತು ಇದುವರೆಗೆ ನಡೆದಿರುವ ಅಧ್ಯಯನಗಳನ್ನು ಕುರಿತು ಈ ಅಧ್ಯಾಯದಲ್ಲಿ ವಿವರಿಸಲಾಗುವುದು.

## ೨.೧. ಅಧ್ಯಯನಗಳ ಸಮೀಕ್ಷೆ

### ಕರ್ನಾಟಕ ಬುಡಕಟ್ಟುಗಳು ಸಂಪುಟ-೧

ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ವತಿಯಿಂದ ಕರ್ನಾಟಕದಲ್ಲಿ ನೆಲೆಸಿರುವ ಅಲೆಮಾರಿ, ಅರೆ ಅಲೆಮಾರಿ ಬುಡಕಟ್ಟು ಸಮುದಾಯಗಳನ್ನು ಕುರಿತು ಒಂದು ಸಮಗ್ರವಾದ ಅಧ್ಯಯನವನ್ನು ಕೈಗೊಳ್ಳಲಾಯಿತು. ಅದರ ಪ್ರಯತ್ನವೇ 'ಕರ್ನಾಟಕದ ಬುಡಕಟ್ಟುಗಳು' ಸಂ-೧, ೨ ರಚನೆ. ಈ ಕೃತಿಯಲ್ಲಿ ಕರ್ನಾಟಕದ ಅನೇಕ ಅರಣ್ಯವಾಸಿ ಬುಡಕಟ್ಟು ಸಮುದಾಯಗಳ ಸಾಂಸ್ಕೃತಿಕ ಆಚರಣೆ, ಪ್ರದರ್ಶನ ಕಲೆಯನ್ನು ಕುರಿತು ವಿವರಿಸಲಾಗಿದೆ. ಬುಡಕಟ್ಟು ಸಮುದಾಯಗಳ ಸಾಂಸ್ಕೃತಿಕ ಆಚರಣೆಗಳು, ಬದುಕಿನ ಕ್ರಮ, ಪ್ರಸ್ತುತ ಸಂದರ್ಭದಲ್ಲಿನ ಅವರ ಆರ್ಥಿಕತೆಯನ್ನು ಕುರಿತು ಸಂಕ್ಷಿಪ್ತವಾಗಿ ವಿವರಿಸುವ ಪ್ರಯತ್ನವನ್ನು ಈ ಕೃತಿಯಲ್ಲಿ ಮಾಡಲಾಗಿದೆ. ಅಲೆಮಾರಿ, ಅರೆ ಅಲೆಮಾರಿ ಬುಡಕಟ್ಟು ಸಮುದಾಯಗಳಾದ ಮೇದರು, ಇರುಳರು, ಲಂಬಾಣಿಯರು, ಹಕ್ಕಿಪಿಕ್ಕಿಯರು, ಡೊಂಬರು ಹಾಗೆಯೇ ಕಿನ್ನರಿ ಜೋಗಿಯರನ್ನು ಕುರಿತು ಅವರ ವೃತ್ತಿ, ಕುಲಕಸಬುಗಳನ್ನು ಈ ಕೃತಿಯಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಹಂಡಿ ಜೋಗಿಗಳ ಮೂಲಕ್ಕೆ ಸಂಬಂಧಿಸಿದಂತೆ ಈ ಕೃತಿಯ ಒಂದು ಲೇಖನದಲ್ಲಿ (ಕಿನ್ನರಿ ಜೋಗಿಯರು)ಸಂಕ್ಷಿಪ್ತವಾಗಿ ವಿವರಿಸಲಾಗಿದೆ. 'ಕಿನ್ನರಿ ವಾದ್ಯವನ್ನು' ಪ್ರಧಾನವಾಗಿರಿಸಿಕೊಂಡು

ಅವರ ಕಲಾಪ್ರದರ್ಶನ, ಕಥಾವಸ್ತು ವಿಷಯವನ್ನು ತಿಳಿಸಲಾಗಿದೆ. ಕರ್ನಾಟಕದಲ್ಲಿ ನೆಲೆಸಿರುವ ಕಿನ್ನರಿ ಜೋಗಿಗಳ ನೆಲೆಗಳನ್ನು ತಿಳಿಸಲಾಗಿದೆ. ಈ ಲೇಖನದಲ್ಲಿ ಕರ್ನಾಟಕದಲ್ಲಿ ನೆಲೆಸಿರುವ ಹಂಡಿಜೋಗಿಗಳು ಮನೆ ಮಾತಾಗಿ ಮರಾಠಿಯನ್ನು ಬಳಸುತ್ತಾರೆ. ಅದಕ್ಕೆ ಪ್ರತ್ಯೇಕ ಲಿಪಿಯೆಂಬುದಿಲ್ಲವೆಂದು ಭಾಷೆ ಕುರಿತಾಗಿ ವಿವರಿಸಲಾಗಿದೆ. ಮರಾಠಿ ಭಾಷೆ ಬಲ್ಲವರಾದ ಇವರ ಮೂಲವನ್ನು ಮಹಾರಾಷ್ಟ್ರ ಗಡಿಭಾಗದಿಂದ ಕರ್ನಾಟಕಕ್ಕೆ ವಲಸೆ ಬಂದಿದ್ದಾರೆ ಎಂದು ವಿವರಿಸಲಾಗಿದೆ.

ಕರ್ನಾಟಕದಲ್ಲಿ ನೆಲೆಸಿರುವ ಕಿನ್ನರಿ ಜೋಗಿಗಳು ಪ್ರಾದೇಶಿಕವಾಗಿ ಕನ್ನಡ ಭಾಷೆಯಲ್ಲಿ ಸಾಮಾಜಿಕವಾಗಿ ವ್ಯವಹರಿಸುತ್ತಾರೆ. ಇತರೆ ಜೋಗಿ ಸಂಪ್ರದಾಯದ ಉಪಕುಲ ಬಳಿಗಳನ್ನು ಕುರಿತು ತಿಳಿಸಲಾಗಿದೆ. (ಎಣ್ಣೆ ಜೋಗಿ, ಡಬ್ಬಿ ಜೋಗಿ, ಹಂಡಿ ಜೋಗಿ)ಹಂಡಿಜೋಗಿಗಳನ್ನು ಮುಖ್ಯವಾಗಿ ಗುರುತಿಸುವುದು ಅವರ ಹಾಡುಗಾರಿಕೆ ಕಲೆಯಿಂದಾಗಿ. ಈ ಲೇಖನದಲ್ಲಿ ಅವರ ಗಾಯನ ಕಲೆಯ ಪ್ರಮುಖ ವಾದ್ಯವಾದ ಕಿನ್ನರಿಯನ್ನು ಪ್ರಧಾನವಾಗಿರಿಸಿಕೊಂಡು ಅವರ ಮೂಲ, ವಲಸೆ, ಭಾಷೆ, ಸಾಂಸ್ಕತಿಕ ಆಚರಣೆಗಳು, ಬದುಕಿನ ವಿಧಾನ, ವೇಷಭೂಷಣ, ಆಹಾರ ಪದ್ಧತಿಯನ್ನು ಕುರಿತಾಗಿ ಸಂಕ್ಷಿಪ್ತ ವಿವರಿಸಲಾಗಿದೆ. ಸಾಂಸ್ಕೃತಿಕ ವೃತ್ತಿಯಾದ ಹಾಡುಗಾರಿಕೆಯಲ್ಲಿನ ಕಥಾವಸ್ತು ವಿಷಯವನ್ನು ಕುರಿತು ವಿವರಿಸಲಾಗಿದೆ. ತಮ್ಮ ಸಾಂಸ್ಕೃತಿಕ ನಾಯಕನಿಗೆ ಸಂಬಂಧಿಸಿದ ಹಾಡುಗಳನ್ನು ಕುರಿತು ತಿಳಿಸಲಾಗಿದೆ.

**ಕರ್ನಾಟಕ ಬುಡಕಟ್ಟುಗಳು : ಸಂಪುಟ–೨**

ಪ್ರಸ್ತುತ ಈ ಕೃತಿಯನ್ನು ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಾಡೆಮಿಯಿಂದ ಎಚ್.ಜೆ. ಲಕ್ಕಪ್ಪಗೌಡ ಅವರ ಸಂಪಾದಕತ್ವದಲ್ಲಿ ಪ್ರಕಟಿಸಲಾಯಿತು. ಕರ್ನಾಟಕಕ್ಕೆ ಭಾರತದ ವಿವಿಧ ಭಾಗಗಳಿಂದ ವಲಸೆಬಂದ ಹಾಗೂ ಕರ್ನಾಟಕದ ನೆಲೆಸಿರುವ ಅಲೆಮಾರಿ ಬುಡಕಟ್ಟು ಸಮುದಾಯಗಳ ಸಾಂಸ್ಕೃತಿಕ ವಿವರಗಳನ್ನು ಈ ಕೋಶ ವಿವರಿಸುತ್ತದೆ. ಪ್ರತಿಯೊಬ್ಬ ವಿದ್ವಾಂಸರು ಒಂದೊಂದು ಬುಡಕಟ್ಟು ಸಮುದಾವನ್ನು ಕುರಿತು ಕ್ಷೇತ್ರಕಾರ್ಯದ ಮೂಲಕ ವಿವರಗಳನ್ನು ಸಂಗ್ರಹಿಸಿ ಮಾಹಿತಿಯನ್ನು ವಿಶ್ಲೇಷಿಸಿದ್ದಾರೆ. ಬುಡಕಟ್ಟು ಸಮುದಾಯದ ಮೂಲ, ಹಿನ್ನೆಲೆ, ವರ್ತಮಾನ, ಸಾಮಾಜಿಕ ಜೀವನ ವಿಧಾನ, ವಲಸೆ, ಜನಸಂಖ್ಯೆ, ವಸತಿ ನೆಲೆಗಳು, ಸ್ಥಿತ್ಯಂತರಗಳು, ಭಾಷೆ ಹಾಗೂ ಸಾಂಸ್ಕೃತಿಕ ಆಚರಣೆಗಳನ್ನು ಕುರಿತು ಸಂಕ್ಷಿಪ್ತ ವಿವರಗಳನ್ನು ನೀಡಲಾಗಿದೆ. ಹೀಗೆ ಈ ಲೇಖನದಲ್ಲಿ,

* ಕಿನ್ನರಿಜೋಗಿಗಳ ಉಪಕುಲ ಬಳಿಗಳು
* ವಲಸೆ
* ಪ್ರಸಾರ
* ಸಮುದಾಯದ ನೆಲೆಗಳು
* ಸಮುದಾಯದ ಮೂಲ ವೃತ್ತಿ

* ಭಾಷೆ

* ಸಾಹಿತ್ಯ

* ಸಾಂಸ್ಕೃತಿಕ ಆಚರಣೆಗಳ ಸಂಕ್ಷಿಪ್ತ ವಿವರಗಳನ್ನು ಕುರಿತು ವಿವರಿಸಲಾಗಿದೆ.

ಹಂಡಿಜೋಗಿ ಸಮುದಾಯದ ಮೂಲ ಭಾಷೆಯನ್ನು ಕುರಿತು ಹೆಸರಿಸಲಾಗಿದೆ. ಭಾಷೆಯ ಬಗೆಗಿನ ಸಾಂಸ್ಕೃತಿಕ ವಿವರಗಳನ್ನು ಈ ಲೇಖನದಲ್ಲಿ ವಿವರಿಸಲಾಗಿಲ್ಲ. ಇದು ಕೇವಲ ಹಂಡಿಜೋಗಿಗಳ ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ ವಿವರಗಳನ್ನು ಕುರಿತು ವಿವರಿಸುತ್ತದೆ.

**ಮರಗು ಭಾಷೆ**

ಕನ್ನಡ ಭಾಷಾಭಿವೃದ್ಧಿ ಯೋಜನೆಯಡಿಯಲ್ಲಿ ಕರ್ನಾಟಕದ ಬುಡಕಟ್ಟುಗಳು, ಅಲೆಮಾರಿ, ಅರೆ ಅಲೆಮಾರಿ ಸಮುದಾಯಗಳ ಮೂಲ ಭಾಷೆಯ ಸಂರಕ್ಷಣೆ ಕುರಿತು ಅಧ್ಯಯನವನ್ನು ಕೈಗೊಳ್ಳಲಾಯಿತು. ಅದರ ಪ್ರತಿಫಲವೇ ಈ 'ಮರಗು' ಭಾಷೆ. ಇದರಲ್ಲಿ ದ್ರಾವಿಡ ಭಾಷಿಕ ಹಾಗೂ ದ್ರಾವಿಡೇತರ ಭಾಷಿಕ ಅಲೆಮಾರಿ ಬುಡಕಟ್ಟುಗಳೆಂದು ವಿಭಾಗಿಸಿಕೊಂಡು ಆಯಾ ಅಲೆಮಾರಿ ಸಮುದಾಯಗಳ ಸಂಸ್ಕೃತಿಗೆ ಸಂಬಂಧಿಸಿದ ಕೆಲವು ಸಾಂಕೇತಿಕ ಪದಗಳನ್ನು ಸಮುದಾಯಗಳ ಭಾಷಿಕ ನೆಲೆಯಲ್ಲಿ ಸಂಗ್ರಹಿಸಿ ವಿವರಿಸುವ ಕಾರ್ಯವನ್ನು ಮಾಡಲಾಗಿದೆ.

ಈ ಕೃತಿಯ ಅನುಬಂಧದಲ್ಲಿ ದ್ರಾವಿಡೇತರ ಬುಡಕಟ್ಟು ಅಲೆಮಾರಿ ಸಮುದಾಯಗಳಾದ ಘಿಸಾತಿ, ಡೋಂಗ್ರಿ, ಪಾರ್ಧಿ, ಬೈಲಪತ್ತಾರ, ಹಂಡಿಜೋಗಿ ಮೊದಲಾದ ಸಮುದಾಯಗಳ ಪದಕೋಶವನ್ನು ನೀಡಲಾಗಿದೆ.

ಪುಟಸಂಖ್ಯೆ ೧೦೬ 'ಜೋಗಿ ಒಂದು ಸಂಪ್ರದಾಯ' ಎಂದು ಹೆಸರಿಸಿ ಕರ್ನಾಟಕದಲ್ಲಿರುವ ಜೋಗಿಗಳ ಸಂಪ್ರದಾಯಗಳ ಹೆಸರುಗಳನ್ನು ನೀಡಿದ್ದಾರೆ.(ಹಂಡಿಜೋಗಿ, ಹಂಡಿಚಿಕ್ಕ, ಹಂಡಿಗೊಲ್ಲ, ಡಬ್ಬ ಜೋಗಿ, ನರಸಣ್ಣ ಜೋಗಿ, ಬಳೆಗಾರ ಜೋಗಿ, ಶಿವಜೋಗಿ) 'ಹಂಡಿಜೋಗಿ' "ಪದ ನಿಷ್ಪತ್ತಿಯನ್ನು ಹೇಳುವಾಗ ಲೇಖಕರು ಜೋಗಿ ಎಂಬುದು ನಾಥಸಿದ್ಧ ಪರಂಪರೆಯ(ಯೋಗಿಗಳು) ಒಂದು ಸಂಪ್ರದಾಯವಾಗಿತ್ತು" ಅನಂತರದಲ್ಲಿ ಅದು ಜಾತಿಯ ಸ್ವರೂಪವನ್ನು ಪಡೆದುಕೊಂಡಿತೆಂದು ಹೇಳಿದ್ದಾರೆ. ಹಂಡಿಜೋಗಿಗಳು ಹಾಗೂ ನಾಥ ಪರಂಪರೆಯೊಂದಿಗಿನ ಧಾರ್ಮಿಕ ಸಂಬಂಧವನ್ನು ಕುರಿತು ವಿವರಿಸಲಾಗಿದೆ. ಹಂಡಿಜೋಗಿಗಳ ಮೂಲಮಠ ಹಾಗೂ ಉಪಮಠಗಳ ಕುರಿತು ವಿವರಿಸಲಾಗಿದೆ.

ಕರ್ನಾಟಕದ ಬೆಳಗಾವಿ ಜಿಲ್ಲೆಯ ರಾಮನಗರದಲ್ಲಿರುವ 'ಹಂಡಿಬಡಗನಾಥ ಮಠ' ತಮ್ಮ ಮೂಲ ಮಠ. ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರಿನ ನುಂಕೆಮಲೆಮಠ, ಮಂಗಳೂರಿನ ಕದ್ರಿ ಇವು ಉಪಮಠಗಳೆಂದು ಗುರುತಿಸಿದ್ದಾರೆ.

ನಂತರ ಮರಾಠಿ ಭಾಷಿಕರಾದ ಹಂಡಿಜೋಗಿಗಳು ಕರ್ನಾಟಕದಾದ್ಯಂತ ನೆಲೆಸಿದ್ದಾರೆಂದು

ತಿಳಿಸಿ ಕೇವಲ ೮ ಜಿಲ್ಲೆಗಳಲ್ಲಿನ ಕುಟುಂಬ, ಲಿಂಗವಾರು, ಜನಸಂಖ್ಯೆಯನ್ನು ಸಮೀಕ್ಷೆಯನ್ನು ನೀಡಲಾಗಿದೆ. (೨೦೦೭)ರ ಸಲ್ಲಿಕೆ.

'ಹಂಡಿಜೋಗಿ' ಸಮುದಾಯದ 'ಪದಕೋಶ'ವನ್ನು ನೀಡುವಾಗ ಪದಗಳ ಅರ್ಥ, ವಿವರಣೆ, ಸಾಂಸ್ಕೃತಿಕ ಹಿನ್ನೆಲೆಯನ್ನು ಕುರಿತು ವಿವರಿಸಲಾಗಿಲ್ಲ. ಪದಕೋಶದ ಸಾಂಸ್ಕೃತಿಕ ವಿವರವನ್ನು ಈ ಅಧ್ಯಯನದಲ್ಲಿ ಮಾಡಲಾಗುತ್ತದೆ. ಇಲ್ಲಿನ 'ಪದಕೋಶ'ದಲ್ಲಿನ ಶಬ್ದ ರೂಪಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನತೆಯಿಂದ ಕೂಡಿವೆ. ಕ್ಷೇತ್ರಕಾರ್ಯದ ಕೆಲವು ಭಿನ್ನ ಸಂದರ್ಭದಲ್ಲಿ ಅಂತಹ ಕೆಲವು ಶಬ್ದ ರೂಪಗಳನ್ನು ಸಂಗ್ರಹಿಸಲಾಗಿದೆ. ನಂತರ ಅವುಗಳನ್ನು ಕುರಿತು ಸಮುದಾಯದ ಆಚರಣೆಯ ನೆಲೆಯಲ್ಲಿ ವಿವರಿಸಲಾಗಿದೆ.

**ಕರ್ನಾಟಕ ಜನಪದ ಕಲೆಗಳ ಕೋಶ**

ಪ್ರಸ್ತುತ ಈ ಮೇಲಿನ ಕೃತಿಯಲ್ಲಿ ದೈವದ ಆರಾಧನೆಗೆ ಸಂಬಂಧಿಸಿದಂತೆ ಬುಡಕಟ್ಟು ಸಮುದಾಯಗಳಲ್ಲಿ ಆಚರಣೆಯಲ್ಲಿರುವ ಅನೇಕ ಕಲೆಗಳನ್ನು ಗುರುತಿಸಿ ವಿವರಿಸಲಾಗಿದೆ. ಈ ಕೃತಿಯ ಪ್ರಸ್ತಾವನೆಯಲ್ಲಿ ಸಂಪಾದಕರು ಜನಪದ ಕಲೆಗಳ ಹುಟ್ಟು, ಸಂದರ್ಭ ಹಾಗೂ ಅವುಗಳ ವಿಶೇಷತೆಯನ್ನು ಕುರಿತು ಸಮಗ್ರವಾಗಿ ಚರ್ಚಿಸಿದ್ದಾರೆ. ಪ್ರತಿಯೊಂದು ಬುಡಕಟ್ಟು ಸಮುದಾಯದ ಜನಪದ ಕಲೆಯ ಉಗಮಕ್ಕೂ ಹಾಗೂ ಅವರ ಸಾಂಸ್ಕೃತಿಕ ಚರಿತ್ರೆಗೂ ಇರುವ ಅವಿನಾಭಾವವಾದ ಸಂಬಂಧವನ್ನು ಗುರುತಿಸಿದ್ದಾರೆ. ಕರ್ನಾಟಕದ ಜನಪದ ಕಲೆಗಳಲ್ಲಿ ದೈವದ ಆರಾಧನಾ ಕಲೆಗಳ ಉಗಮಕ್ಕೆ ಸಂಬಂಧಿಸಿದಂತೆ ಅನೇಕ ಅಂಶಗಳನ್ನು ವಿವರಿಸಿದ್ದಾರೆ. ಕಲೆಯ ಆರಾಧನೆಯ ಸ್ಪಷ್ಟ ಉದ್ದೇಶ ಹಾಗೂ ಅದರ ಮಹತ್ವವನ್ನು ಕುರಿತು ವಿಶ್ಲೇಷಿಸಲಾಗಿದೆ. ಜನಪದ ಕಲೆಗಳನ್ನು ಪ್ರಮುಖವಾಗಿ ವೃತ್ತಿಗಾಯನ ಕಲೆ, ಕೃಷಿಗೆ ಸಂಬಂಧಿಸಿದ ಕಲೆ, ನೃತ್ಯಕ್ಕೆ ಸಂಬಂಧಿಸಿದಂತೆ ಕುಣಿತವೇ ಪ್ರಧಾನವಾದ ಕಲೆ ಹಾಗೂ ವಾದ್ಯಗಳೇ ಪ್ರಧಾನವಾದ ಯಕ್ಷಗಾನ, ಬಯಲಾಟ, ಸಣ್ಣಾಟ, ತಾಳಮದ್ದಳೆ, ತೊಗಲುಗೊಂಬೆಯಾಟ, ಸೂತ್ರದ ಗೊಂಬೆಯಾಟ ಇನ್ನೂ ಮುಂತಾಗಿ ವಿಭಾಗೀಕರಿಸಿಕೊಂಡು ಬುಡಕಟ್ಟು ಸಮುದಾಯಗಳ ಕಲಾರಾಧನೆಯನ್ನು ಈ ಕೃತಿಯಲ್ಲಿ ವಿಶ್ಲೇಷಿಸಲಾಗಿದೆ. ಜನಪದ ಕಲೆಯನ್ನು ಕುರಿತು ವಿದ್ವಾಂಸರು "ಧಾರ್ಮಿಕ ಹಾಗೂ ಲೌಕಿಕ ಎಂಬರ್ಥದಲ್ಲಿ ವಿಶ್ಲೇಷಿಸಿದ್ದಾರೆ. 'ಧಾರ್ಮಿಕ ಕಲೆ' ಎಂದರೆ ಆರಾಧನಾ ಕಲೆ, ದೈವವನ್ನು ಕುರಿತದ್ದು ಎಂದಿದ್ದಾರೆ. ಈ ವಿಭಾಗ ಕ್ರಮವನ್ನು ಕೆಲವು ವಿದ್ವಾಂಸರು ಒಪ್ಪುವುದಿಲ್ಲ. ಗಾಯನ ವೃತ್ತಿಗೆ ಸಂಬಂಧಿಸಿದಂತೆ ತನ್ನ ಇಷ್ಟ ದೈವದ ಕಥೆಯನ್ನು ಆರಾಧವಾಗಿಟ್ಟುಕೊಂಡು ಕಲಾ ಪ್ರದರ್ಶನ ಮಾಡಿದರೆ ಅದನ್ನು ಧಾರ್ಮಿಕ ಕಲೆ ಎಂದು ವಿಶ್ಲೇಷಿಸಿದ್ದಾರೆ." (ಬೋರಲಿಂಗಯ್ಯ ಹಿ.ಚಿ., ಜನಪದ ಕಲೆಗಳ ಕೋಶ, ಪ್ರಸ್ತಾವನೆ, ಪು-೫) ಅದೇ ವೃತ್ತಿ ಗಾಯನಕ್ಕೆ ಸೇರಿದ್ದ ಸಮುದಾಯದವರು ಇಷ್ಟ ದೈವವನ್ನು ಹೊರತುಪಡಿಸಿ ಇನ್ನಿತರ ಪುರಾಣ ಕಥೆಗಳನ್ನು ಕುರಿತು ಕಲೆಯನ್ನು ಪ್ರದರ್ಶನ ಮಾಡಿದರೆ ಅದನ್ನು ಲೌಕಿಕ ಕಲೆ ಎಂದು ವಿವರಿಸಿದ್ದಾರೆ. ಪ್ರಸ್ತುತ ಸಂದರ್ಭದಲ್ಲಿ ಕಲೆಯ ಈ ಮೇಲಿನ

ವಿಭಾಗ ಕ್ರಮ ಅಷ್ಟೊಂದು ಸಮಂಜಸವಲ್ಲವೆಂದು ಅಲ್ಲಗಳೆದು ಬಿಟ್ಟರೆ ಪ್ರದರ್ಶನ ಕಲೆಗಳ ಪಠ್ಯ ಕಲೆಯ ಅಭಿವ್ಯಕ್ತಿಯನ್ನು ಕುರಿತು ವಿವರಿಸುವುದು ಸೂಕ್ತವೆಂದು ನಿರ್ಧಾರಕ್ಕೆ ಬರಲಾಗಿದೆ.

ಹಂಡಿಜೋಗಿಗಳ ಕಲೆಗೆ ಸಂಬಂಧಿಸಿದಂತೆ ಈ ಕೃತಿಯಲ್ಲಿ ವರ್ಣಿಸಲಾಗಿದೆ. ಇವರು ತಮ್ಮ ಇಷ್ಟ ದೈವವಾದ ಭೈರವನನ್ನು ಕುರಿತು ಕಾಡುಗಳನ್ನು ರಚಿಸಿ ಹಾಡುತ್ತಾರೆ. ಜೊತೆಗೆ ಪುರಾಣದ ಕಥಾವಸ್ತುವನ್ನು ತೆಗೆದುಕೊಂಡು ಹಾಡುಗಳನ್ನು ಹಾಡುತ್ತಾರೆ. ಮಹಾಭಾರತ ಕಥಾವಸ್ತುವಿನಲ್ಲಿ ಪಾಂಡವರ ಕಥೆಯನ್ನು ಅದರಲ್ಲೂ ಅರ್ಜುನನಿಗೆ ಸಂಬಧಿಸಿದ ಭಾಗವನ್ನು ಆಯ್ದುಕೊಂಡು ಹಾಡುತ್ತಾರೆ. ಗಾಯನ ಕಲೆಯಿಂದಲೇ ಹಂಡಿಜೋಗಿಗಳನ್ನು ವೃತ್ತಿಗಾಯಕ ಕಲೆಗೆ ಸಂಬಂಧಿಸಿ ದವರೆಂದು ಗುರುತಿಸಲಾಗಿದೆ. ಬುಡಕಟ್ಟು ಸಮುದಾಯವೊಂದರ ಜನಪದ ಕಲೆಯ ಅಧ್ಯಯನ ಆ ಸಮುದಾಯದ ಸಾಂಸ್ಕೃತಿಕ ಸಂಘರ್ಷ ಜೊತೆಗೆ ಆ ಮೂಲಕ ಲಿಖಿತವಲ್ಲದ ಒಂದು ಮಹತ್ವದ ಅಂಶವನ್ನು ಅವರ ಚರಿತ್ರೆಗೆ ಸಂಬಂಧಿಸಿದಂತೆ ಒದಗಿಸುತ್ತದೆ.

ಪ್ರಮುಖವಾಗಿ ಜೋಗಿಗಳು ಕಿನ್ನರಿ ಪಡೆದ ಪ್ರಸಂಗ

ಅವರ ಮೂಲಕ್ಕೆ ಸಂಬಂಧಿಸಿದ ಪುರಾಣ ಕಥೆಗಳು

ದೈವದ ಆರಾಧನಾ ಕಲೆ

ಉಡುಗೆ-ತೊಡುಗೆ (ವೇಷಭೂಷಣ)

ಪ್ರದರ್ಶನ ಕಲೆ

ಕಿನ್ನರಿ ವಾದ್ಯದ ಸ್ವರೂಪ

ಜೋಗಿ ದೀಕ್ಷೆ ಹಾಗೂ ಸಾಂಸ್ಕೃತಿಕ ವೃತ್ತಿಯಾದ ಹಾಡುಗಾರಿಕೆಯಲ್ಲಿನ ಪಠ್ಯವಸ್ತುವನ್ನು ಕುರಿತು ಸಂಕ್ಷಿಪ್ತವಾಗಿ ವಿಶ್ಲೇಷಿಸಲಾಗಿದೆ.

**ಕನ್ನಡ ವಿಷಯ ವಿಶ್ವಕೋಶ**

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ ಸಿದ್ಧಪಡಿಸಿದ ಕನ್ನಡ ವಿಷಯ ವಿಶ್ವಕೋಶದಲ್ಲಿ ಕಿನ್ನರಿ ಜೋಗಿಗಳನ್ನು ಜನಪದ ಹಾಡುಗಾರರೆಂದು ಕರೆದಿದ್ದಾರೆ. 'ಕಿನ್ನರಿ' ಎಂಬ ವಾದ್ಯವನ್ನು ಬಾರಿಸುತ್ತಾ ಹಾಡುಗಳನ್ನು ಹೇಳಿಕೊಂಡು ಭಿಕ್ಷೆ ಬೇಡಿ ಬದುಕು ಸಾಗಿಸುವ ಸಮುದಾಯವೆಂದು ಗುರುತಿಸಿದ್ದಾರೆ.

ಕಿನ್ನರಿ ಅಥವಾ ಕಿಂದರಿ ವಾದ್ಯದ ಸ್ವರೂಪವನ್ನು ಕುರಿತು ವಿವರಿಸಲಾಗಿದೆ. ಕಿನ್ನರಿ ವಾದ್ಯವನ್ನು ಮೂರು ಅಥವಾ ಐದು ಸೋರೆ ಬುರುಡೆಗಳನ್ನು ಒಂದು ಬಿದಿರಿನ ಕೊಳವೆಗೆ ಜೋಡಿಸಿಕೊಂಡು ನಾಲ್ಕೈದು ತಂತಿಯಿಂದ ಬಿಗಿದು ತಯಾರಿಸಿರುತ್ತಾರೆ. ನಂತರ ಇವರು ಆದಿಚುಂಚನಗಿರಿಯ ಭೈರವೇಶ್ವರನ ಒಕ್ಕಲಿಗೆ ಸೇರಿದವರೆಂದು ತಿಳಿಸಲಾಗಿದೆ. ಜೋಗಿಗಳು ದೀಕ್ಷಾ ಬದ್ಧರಾದ ಜನರೆಂದು ಹಾಗೂ ಇವರು ದೀಕ್ಷೆಯ ನಂತರ ಕಾಪಾಲಿ ಮುದ್ರೆಯನ್ನು ಹಾಕಿಸಿಕೊಳ್ಳುತ್ತಾರೆಂದು ವಿವರಿಸಲಾಗಿದೆ. ಇದು ಹಂಡಿಜೋಗಿಗಳ 'ಜೋಗಿ ದೀಕ್ಷೆ'ಯನ್ನು ಕುರಿತು ವಿವರಿಸುತ್ತದೆ.

ವಿಶ್ವಕೋಶದಲ್ಲಿ ಕಿನ್ನರಿ ಹಿಡಿದು ಹಾಡುವ ಜೋಗಿಗಳು ಮುಖ್ಯವಾಗಿ ಹಾಡುವುದು ಅರ್ಜುನ ಜೋಗಿಯ ಹಾಡು, ಅರ್ಜುನ ಸುಭದ್ರೆಯನ್ನು ಅಪಹರಿಸಲು ಹೋದಾಗ ಜೋಗಿಯ ವೇಷ ಹಾಕಿಕೊಂಡು ಕಿನ್ನರಿ ಬಾರಿಸುತ್ತಾ ಹೋದನೆಂದು ಜನಪದ ಕಥೆಯನ್ನು ವಿವರಿಸಲಾಗಿದೆ. ಆದರೆ ಇದಕ್ಕೆ ಮಹಾಭಾರತದ ಕಥೆಯಲ್ಲಿ ಯಾವುದೇ ಆಧಾರವಿಲ್ಲ. ಬಹುಶಃ ಇವರು ವೇಷದಲ್ಲಿ ಅರ್ಜುನನ ಸನ್ಯಾಸಿ ವೇಷಕ್ಕೆ ಸೇರಿರಬಹುದೆಂದು ಗುರುತಿಸಲಾಗಿದೆ. ನಂತರ ಇವರು ಅರ್ಜುನ ಸುಭದ್ರೆಯರಿಗೆ ಸಂಬಂಧಪಟ್ಟ ಹಾಡುಗಳಲ್ಲದೆ ಇತರೇ ಹಾಡುಗಳನ್ನು ಸಹ ಹಾಡುತ್ತಾರೆ. ಅವುಗಳಲ್ಲಿ ಆದಿಚುಂಚನಗಿರಿಯ ಭೈರವ ಮಾಳವ್ವರ ಕಥೆಯೂ ಒಂದಾಗಿದೆ. ಈ ಕೃತಿಯಲ್ಲಿ ಕರ್ನಾಕದಲ್ಲಿ ನೆಲೆಸಿರುವ ಜೋಗಿ ಜನಾಂಗದ ಇತರೆ ಪಂಗಡಗಳನ್ನು ಕುರಿತು ವಿವರಿಸಲಾಗಿದೆ. ನಂತರ ಹಂಡಿಜೋಗಿಗಳ ವೇಷಭೂಷಣ ಹಾಗೂ ಅವರ ಕಲಾ ಪ್ರದರ್ಶನವನ್ನು ಕುರಿತು ವಿವರಿಸಲಾಗಿದೆ. ಅವರ ಭಾಷೆಯನ್ನು ಕುರಿತು ಇಲ್ಲಿ ಚರ್ಚಿಸಲಾಗಿಲ್ಲ. ಕರ್ನಾಟಕದಲ್ಲಿ ನೆಲೆಸಿರುವ ಕಿನ್ನರಿ ಜೋಗಿಗಳು ಕನ್ನಡದಲ್ಲಿ ಹಾಡುಗಳನ್ನು ರಚಿಸಿ ಹಾಡುತ್ತಾರೆ ಎಂದಷ್ಟೇ ತಿಳಿಸಲಾಗಿದೆ.

**ದಿ ಮೈಸೂರು ಟ್ರೈಬ್ಸ್ ಆ್ಯಂಡ್ ಕಾಸ್ಟ್** (೧೯೦೫)

ಎಲ್. ಅನಂತಕೃಷ್ಣ ಅಯ್ಯರ್ ಅವರು ಕರ್ನಾಟಕದಲ್ಲಿನ ಅನೇಕ ಬುಡಕಟ್ಟು ಸಮುದಾಯಗಳ ಸಾಂಸ್ಕೃತಿಕ, ಜನಾಂಗಿಕ ವಿವರವನ್ನು ಕುರಿತು ೧೯೦೫ರಲ್ಲಿ ೫ ಸಂಪುಟಗಳನ್ನು ದಿ ಮೈಸೂರು ಟ್ರೈಬ್ಸ್ ಆ್ಯಂಡ್ ಕಾಸ್ಟ್ ಎಂದು ಹೊರ ತರಲಾಯಿತು. ಈ ಕೃತಿಯ ೩ನೇ ಸಂಪುಟದಲ್ಲಿ ಹಂಡಿಜೋಗಿ ಬುಡಕಟ್ಟು ಸಮುದಾಯವನ್ನು ಕುರಿತು ವಿವರಿಸಲಾಗಿದೆ. ಇಲ್ಲಿ ಹಂಡಿಜೋಗಿಗಳ ಮೂಲಕ್ಕೆ ಸಂಬಂಧಿಸಿದಂತೆ ಉಪಕುಲಬಳಿಗಳನ್ನು ಕುರಿತು ವಿವರಿಸಲಾಗಿದೆ. ಹಂಡಿಜೋಗಿಗಳ ಭಾಷೆ ಕುರಿತು ತೆಲುಗು ಮತ್ತು ಕನ್ನಡ ಭಾಷೆ ಬಲ್ಲವರೆಂದು ವಿವರಿಸಲಾಗಿದೆ. ನಂತರ ಈ ಕೃತಿಯಲ್ಲಿ ಹಂಡಿಜೋಗಿ ಸಮುದಾಯದ ನೆಲೆಗಳನ್ನು ಕುರಿತು ವಿವರಿಸಲಾಗಿದೆ.

**ಕದ್ರಿ, ೧೯೯೯, ಮಂಟಪಮಾಲೆ ೬೫, ಎ. ಸುಬ್ಬಣ್ಣ ರೈ**

ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲೂಕಿನಲ್ಲಿರುವ ಕದ್ರಿಯು ಮಧ್ಯಕಾಲೀನ ಭಾರತದ ಒಂದು ಪ್ರಮುಖ ಧಾರ್ಮಿಕ ಕೇಂದ್ರವಾಗಿದೆ. ಲೇಖಕರು ನಾಥಪಂಥದ ನೆಲೆಯಾಗಿ ಕದ್ರಿ ಎಂಬ ಭಾಗದಲ್ಲಿ ನಾಥಸಿದ್ಧ ಸಂಪ್ರದಾಯ ಮತ್ತು ಕದ್ರಿ ಧಾರ್ಮಿಕ ಕೇಂದ್ರಕ್ಕಿರುವ ಸಂಬಂಧವನ್ನು ವಿವರಿಸಿದ್ದಾರೆ. 'ಮತ್ಸ್ಯೇಂದ್ರನಾಥನ ಶಿಷ್ಯನಾದ ಗೋರಕ್ಷನಾಥನು(ಗೋರಖನಾಥ) ನಾಥಪಂಥದ ಪ್ರವರ್ತಕನೆಂದು ಹೇಳಲಾಗುತ್ತದೆ. ಆದರೆ ಈತ ನಾಥಪಂಥದ ಸಂಸ್ಥಾಪಕನಲ್ಲ. ನಾಥ ಸಂಪ್ರದಾಯದ ಯೋಗಿಗಳು ರಸಾಯನವನ್ನು ಹುಡುಕಿ ಅದರಿಂದ ತಮ್ಮ ಕಾಯಕವನ್ನು ಅಜರಾಮರಗೊಳಿಸಬಹುದು ಎಂದು ನಂಬಿದ್ದರು. "ನಾಥ ಸಂಪ್ರದಾಯವನ್ನು ಸಿದ್ಧಮತ, ಸಿದ್ದಮಾರ್ಗ ಯೋಗಮಾರ್ಗ, ಅವಧೂತಮತ, ಅವಧೂತ ಸಂಪ್ರದಾಯ ಎಂದು ಮುಂತಾಗಿ ಕರೆಯಲಾಗುತ್ತದೆ ಎಂದು ವಿವರಿಸಿದ್ದಾರೆ." (ಸುಬ್ಬಣ್ಣ ರೈ, ಕದ್ರಿ, ೧೯೯೯, ಪು-೫)

ಲೇಖಕರು ನಾಥಪಂಥದ ಮೂಲಕ್ಕೆ ಸಂಬಂಧಿಸಿದಂತೆ ಶೈವ, ವೈಷ್ಣವ, ಬೌದ್ಧ, ಜೈನ ಧರ್ಮಗಳ ಸಿದ್ಧಮಾರ್ಗಗಳ ಸಮೀಕರಣದಿಂದ ನಾಥಪಂಥ ಉದಿಸಿತೆಂದು ಗೋವಿಂದ ಪೈರವರ ಮಾತುಗಳಿಂದ ಸ್ಪಷ್ಟೀಕರಿಸಿದ್ದಾರೆ.

ಗೋವಿಂದ ಪೈಯವರ ಪ್ರಕಾರ "ನಾಥಪಂಥವಾದರೋ ಬೌದ್ಧ ಧರ್ಮದ ಮಹಾಯಾನ ಶಾಖೆಯ ವಜ್ರಯಾನವೆಂಬ ಪಂಗಡದಿಂದ ಸಿದ್ಧವಾಯಿತು. ಆತ ಏವ ಅದು ತಾಂತ್ರಿಕ ಶೈವ ಮಾರ್ಗವಾಗಿ ಪರಿಣಮಿಸುವ ಮುಂಚೆ ತಾಂತ್ರಿಕ ಬೌದ್ಧ ಮಾರ್ಗದ ಪ್ರಕಾರವಾಗಿದ್ದ ಕಾರಣ ಅದಕ್ಕೆ ಬೌದ್ಧವೂ, ಬ್ರಾಹ್ಮಣವೂ, ಅವೆರಡೂ ಧರ್ಮಗಳ ತಂತ್ರಗಳು ಹೊಂದಿಕೆಯಾಗಿವೆ. ನಾಥಪಂಥವು ಬೌದ್ಧ ಧರ್ಮದಿಂದ ಶೈವ ಧರ್ಮಕ್ಕೆ ಮಾರ್ಪಟ್ಟ ವಿಧಾನದಲ್ಲಿ ಅದು ಕೆಲಮಟ್ಟಿಗೆ ಬೌದ್ಧ ಪರಿಭಾಷೆಯನ್ನು ಬಳಸಿಕೊಂಡಿತಷ್ಟೇ ಅಲ್ಲ. ಬೌದ್ಧವೂ, ಶೈವವೂ ಧರ್ಮಗಳ ಆಚರಣೆಗಳು ಸಿದ್ಧಾಂತಗಳನ್ನು ಸಹಜವಾಗಿ ಹೀರಿಕೊಂಡಿತು. ಹೀಗಾಗಿ ನಾಥಪಂಥದ ಆದ್ಯ ಗುರುಗಳು ವಜ್ರಯಾನದ ದೇವತೆಗಳು ಹಾಗೂ ಗುರುಗಳೊಂದಿಗೆ ಸಮೀಕರಿಸಲ್ಪಟ್ಟವರು. ಟಿಬೇಟ್, ನೇಪಾಳದಲ್ಲೂ ನಾಥಪಂಥದ ಪ್ರವರ್ತಕನಾದ ಮತ್ಸ್ಯೇಂದ್ರನಾಥನು ಮಹಾಯಾನದ ದೇವತೆಯಾದ ಅವಲೋಕೇಶ್ವರನೆಂಬ ಲೋಕೇಶ್ವನೊಡನೆ ಸಮೀಕರಿಸಲ್ಪಟ್ಟು ದೇವತೆಯಾದನು. ಹಾಗೂ ಬಂಗಾಲದಲ್ಲಿ ಆತನೂ ಆತನ ಶಿಷ್ಯನಾದ ಗೋರಕ್ಷನಾಥನೂ ಬೌದ್ಧ ಸಂತರೆಂದು ಭಾವಿಸಲ್ಪಟ್ಟರು." (ಸುಬ್ಬಣ್ಣ ರೈ, ಕದ್ರಿ, ಪು–೧೩) ಮೇಲೆ ನೋಡಿದಂತೆ ಗೋರಖನಾಥನಿಂದ ಪ್ರವರ್ತಿತವಾದ ಬಾರಹ ಪಂಥಿ ಮಾರ್ಗಗಳು (ದ್ವಾದಶ ಪಂಥಗಳು) ನಾಥ ಸಂಪ್ರದಾಯ ಎಂದು ಪ್ರಸಿದ್ಧವಾದವು. ಈ ಸಂಪ್ರದಾಯದ ಸಾಧಕರು ತಮ್ಮ ಹೆಸರಿನೊಡನೆ ನಾಥ ಶಬ್ದವನ್ನು ಸೇರಿಸಿಕೊಳ್ಳುತ್ತಾರೆ. ಕಿವಿಯನ್ನು ಚುಚ್ಚಿಸಿ ಕೊಳ್ಳುವುದರಿಂದ 'ಕಾನಫಟಾ'(ಕಿವಿ ಹರುಕರು) ಎಂದು ಕರೆಯಲ್ಪಡುತ್ತಾರೆ.

"ಕದ್ರಿ ಧಾರ್ಮಿಕ ಸಮುಚ್ಚಯದ ಎರಡನೆಯ ಫಲಕವೆಂದರೆ 'ಕದ್ರಿಗುಡ್ಡ' ಇದು ಇಂದು ನಾಥಪಂಥದ ಸ್ವತಂತ್ರ ಕೇಂದ್ರವಾಗಿ ಕಂಡುಬರುತ್ತಿದೆ. ಅಲ್ಲಿರುವ ನಾಥಪಂಥದ ಮಠವನ್ನು ಸ್ಥಳೀಯವಾಗಿ 'ಜೋಗಿಮಠ' ಎಂದು ಕರೆಯುತ್ತಾರೆ. ಅಲ್ಲಿನ ನಾಥ ಯೋಗಿಗಳನ್ನು ಜೋಗಿಗಳೆನ್ನುತ್ತಾರೆ. ಮಠಾಧಿಪತಿಗಳನ್ನು ಜೋಗಿಅರಸರೆಂದು ಕರೆಯುತ್ತಾರೆ. ಕದ್ರಿ ಪರಿಸರದಲ್ಲಿ ಜೋಗಿ ಎಂಬ ಒಂದು ಜನಸಮುದಾಯವಿದೆ. ಇದು ನಾಥಪಂಥದ ಪ್ರಭಾವಕ್ಕೊಳಗಾದ ಸ್ಥಳೀಯ ಸಮುದಾಯವೊಂದರ ಪರಂಪರೆಯಾಗಿರಬಹುದಾದ ಸಾಧ್ಯತೆ ಇದೆ ಎಂದಿದ್ದಾರೆ. ಜೋಗಿಮಠದ ಪೀಠಾಧಿಪತಿಗಳು ಉತ್ತರ ಭಾರತದವರು. ಅವರು ಹಿಂದಿ ಮಾತನಾಡುತ್ತಾರೆ. ಆದರೆ ಸ್ಥಳೀಯ ಜೋಗಿ ಸಮುದಾಯದವರು ತುಳು ಮಾತನಾಡುತ್ತಾರೆ. ಜೋಗಿ ಅರಸರು ಮತ್ತು ಅವರ ಶಿಷ್ಯರು ಸನ್ಯಾಸಿಗಳಾಗಿರುತ್ತಾರೆ. ಸ್ಥಳೀಯ ಜೋಗಿ ಸಮುದಾಯದವರು ಹೆಚ್ಚಾಗಿ ಗೃಹಸ್ಥರಾಗಿರುವುದು. ನಾಥಪಂಥದ ಪ್ರಭಾವ ಎಂದಿದ್ದಾರೆ. ಉದಾ: ಮಚ್ಚೇಂದ್ರನಾಥ, ಗೋಪಾಲನಾಥ, ಕೇಶವನಾಥ ಮುಂತಾದ ಹೆಸರುಗಳನ್ನು ಗಮನಿಸಬಹುದು. ನಾಥಪಂಥದ ಸನ್ಯಾಸಿಗಳು ಅದೇ ರೀತಿ ವ್ಯಕ್ತಿಗಳ

ಹೆಸರುಗಳ ಕೊನೆಯಲ್ಲಿ ಸಾಮಾನ್ಯವಾಗಿ ನಾಥ ಎಂಬ ಪ್ರತ್ಯಯವಿರುತ್ತದೆ." (ಸುಬ್ಬಣ್ಣ ರೈ, ಕದ್ರಿ, ಪು-೨೦)

ಆನ್ ಮಾನ್ ಗುರುಗ್ಯಾನ್ ಬಾರಾ ಪಂಥದ ಸಿದ್ದಲ್ ಆದೇಶ್, ಆದೇಶ್, ಆದೇಶ್ ಎಂದು ದೀಕ್ಷಾ ಸಮಯದಲ್ಲಿ ಕಿನ್ನರಿ ಜೋಗಿಗಳು ತಮ್ಮ ಸಮುದಾಯದ ೧೨ ಪುರುಷರಲ್ಲಿ ಭಕ್ತಿಪೂರ್ವಕ ಮನವಿಯೊಂದಿಗೆ ದೀಕ್ಷೆಯನ್ನು ಮಾಡುತ್ತಾರೆ. ಆ ೧೨ ಪಂಥಗಳ ಹೆಸರುಗಳು ಈ ಕೆಳಗಿನಂತಿವೆ. ಭಾರತದಲ್ಲಿ ನಾಥಪಂಥೀಯ ಮಠಗಳಿಗೆ ಸಂಬಂಧಿಸಿದವರನ್ನು 'ಬಾರಹ್‌ಪಂಥ್ ಯೋಗಿ ಮಹಾಸಭಾ' ಎನ್ನುತ್ತಾರೆ. ಇದು ಹರಿದ್ವಾರದಲ್ಲಿದೆ.

ಝುಂಡಿಯಾತ್ರೆ "ಪ್ರತಿ ೧೨ ವರ್ಷಗಳಿಗೊಮ್ಮೆ ನಾಥಮಠಗಳಿಗೆ ನೂತನ ಸನ್ಯಾಸಿಗಳನ್ನು ನಿಯುಕ್ತಿಗೊಳಿಸುವ ವಿಶಿಷ್ಟ ಕಾರ್ಯಕ್ರಮ ನಡೆಯುತ್ತದೆ. ನೂರಾರು ಸಾಧು ಸಂತರಿಂದೊಡಗೂಡಿದ ಝುಂಡಿ ಕೂಟವೊಂದು ಮಹಾರಾಷ್ಟ್ರದ ನಾಸಿಕ್ ಜಿಲ್ಲೆಯ ತ್ರ್ಯಂಬಕೇಶ್ವರದಿಂದ ಹೊರಡುತ್ತದೆ. ಗುರುವು ಸಿಂಹರಾಶಿಯನ್ನು ಪ್ರವೇಶಿಸುವಾಗ ತ್ರ್ಯಂಬಕೇಶ್ವರದಲ್ಲಿ 'ಕುಂಭಮೇಳ' ನಡೆಯುತ್ತದೆ.

ಆಗ ಬಾರಹ್‌ಪಂಥಿಗಳಾದ ನಾಥಪಂಥದ ಸತ್ಯನಾಥಿ, ರಾಮನಾಥಿ, ಧರ್ಮನಾಥಿ, ಪಾವನಾಥಿ, ಪಾಗಲನಾಥಿ, ರಾವಲನಾಥಿ, ಕಪಲಾನಿ, ಗಂಗಾನಾಥಿ, ನಟೇಶ್ವರಿ, ಆಯಿಪಂಥಿ ಭೈರಾಗಿ, ಮನ್ನಾಥಿ ಎಂಬ ೧೨ ಕವಲುಗಳಿಗೆ ಸೇರಿದ ಬಾರಹಪಂಥಿಗಳು(ಸಾಧುಗಳು) ಅವಧೂತ ಯೋಗಿಗಳು ಒಗ್ಗೂಡುತ್ತಾರೆ." (ಸುಬ್ಬಣ್ಣ ರೈ, ಕದ್ರಿ, ಪು-೨೧)

ನಾಥಪಂಥ ಮತ್ತು ಸ್ಥಳೀಯ ಜೋಗಿ ಸಂಪ್ರದಾಯ ಎಂಬ ಭಾಗದಲ್ಲಿ "ಜೋಗಿಗಳು ಜೋಗಿ ಪುರುಷರೆಂದು ಕರೆಯಲ್ಪಡುವ ಜನಸಮುದಾಯವೊಂದಿದೆ. ಇವರಲ್ಲಿ ಕೆಲವರು ವಾದ್ಯ ನುಡಿಸುವ ಕಲೆಯಲ್ಲಿ ಪರಿಣತರಾಗಿದ್ದಾರೆ. ನಂತರ ಇವರಲ್ಲಿ ತುಳು ಹಾಗೂ ಮರಾಠಿ  ಮಾತನಾಡುವ ೨ ಪಂಗಡಗಳಿವೆ. ಭೈರವ ಅವರ ಪ್ರಮುಖ ದೇವರಾಗಿದ್ದರೂ, ಕೆಲವರು ಗೋರಕ್ಷನಾಥನೇ ತಮ್ಮ ದೈವವೆಂದು ಹೇಳುತ್ತಾರೆ. ಅದೇನಿದ್ದರೂ ನಾಥಪಂಥದೊಂದಿಗೆ ಇವರಿಗಿರುವ ಧಾರ್ಮಿಕ ಸಂಬಂಧ ಇದರಿಂದ ವ್ಯಕ್ತವಾಗುತ್ತದೆ. ಅವರ ಪೂಜಾರಿಗಳು ಅವರಿಗೆ (ಭೈರವಪಂಥ) ನಾಥಪಂಥದ ದೀಕ್ಷೆ ಕೊಡುತ್ತಾರೆ. ಅವರು ಬ್ರಹ್ಮಚರ್ಯ ಅಥವಾ ವೈವಾಹಿಕ ಜೀವನವನ್ನು ನಡೆಸಬಹುದು. ಕಿವಿಗೆ ಲೋಹದ ರಿಂಗನ್ನು ಧರಿಸಿರುತ್ತಾರೆ. ಕೊರಳಲ್ಲಿ ಸಿಂಗನಾದವನ್ನು ಧರಿಸಿರುತ್ತಾರೆ. ಊಟಕ್ಕೂ ಮೊದಲು ಭೈರವನನ್ನು ಪ್ರಾರ್ಥಿಸಿ ಸಿಂಗನಾದವನ್ನು ಊದುತ್ತಾರೆ." (ಸುಬ್ಬಣ್ಣ ರೈ, ಕದ್ರಿ, ಪು-೨೪-೨೫)

ಕಿನ್ನರಿ ಜೋಗಿಗಳನ್ನು ಕುರಿತು ಕರ್ನಾಟಕದ ಇತರೆಡೆಗಳಲ್ಲಿ ಕಿನ್ನರಿ(ಕಿಂದರಿ) ಜೋಗಿಗಳೆಂಬ ವೃತ್ತಿಗಾಯಕ ಸಮುದಾಯದವರಿದ್ದಾರೆ. ಅವರು ಬಣ್ಣ-ಬಣ್ಣದ ವೇಷಭೂಷಣಗಳನ್ನು ತೊಟ್ಟು ಊರೂರು ಸಂಚರಿಸುತ್ತಾರೆ. ಕಿನ್ನರಿ ನುಡಿಸುತ್ತ ಅರ್ಜುನ ಜೋಗಿ ಹಾಗೂ ಇತರ ಮಹಾಭಾರತದ ಕಥೆಗಳನ್ನು ಹಾಡುತ್ತಾರೆ. ಇವರು ನಾಥಪಂಥದ ಪ್ರಭಾವಕ್ಕೆ ಒಳಗಾಗಿರಬೇಕು. ಏಕೆಂದರೆ ಧಾರ್ಮಿಕವಾಗಿ

ಅವರಿಗೆ ಕದ್ರಿಯೊಂದಿಗೆ ಸಂಬಂಧವಿದ್ದಂತಿದೆ. ಕಾಲ-ಕಾಲಕ್ಕೆ ಅವರು ಕದ್ರಿ ಮಠಕ್ಕೆ ಹೋಗಿ ಬರುತ್ತಾರೆ ಎಂದು ವಿವರಿಸಿದ್ದಾರೆ. (ಕದ್ರಿ, ೧೯೯೯, ಮಂಟಪಮಾಲೆ-೬೫, ಡಾ. ಎ.ಸುಬ್ಬಣ್ಣರೈ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ).

**ಸಂಸ್ಕೃತಿಯ ಅಂತರ್‌ಶಿಸ್ತೀಯ ನೆಲೆಗಳು** (ಹೊಸಕೋಟೆ ತಾಲೂಕು ಪ್ರದೇಶವನ್ನಾಧರಿಸಿ)

ಪ್ರಸ್ತುತ ಈ ಕೃತಿ ಹೊಸಕೋಟೆ ಪರಿಸರದ ಭೌಗೋಳಿಕತೆ ಹಾಗೂ ಚರಿತ್ರೆಯನ್ನು ಪ್ರತಿಬಿಂಬಿಸುವ ಪ್ರಬಂಧ ಇದಾಗಿದೆ. ಹೊಸಕೋಟೆಯ ಭೂಪ್ರದೇಶ ಅಲ್ಲಿನ ಕೃಷಿ ಪದ್ದತಿಗೆ ಸಂಬಂಧಿಸಿದ ಸಮಗ್ರವಾದ ವಿವರಗಳು ಈ ಕೃತಿಯಲ್ಲಿವೆ. ನಂತರ ಕರ್ನಾಟಕದ ರಾಜಮನೆತನಗಳಾದ ಗಂಗರು, ಹೊಯ್ಸಳರು, ವಿಜಯನಗರದ ಅರಸರ ಆಳ್ವಿಕೆಯ ರಾಜಕೀಯ ಚರಿತ್ರೆಯನ್ನು ಒಳಗೊಂಡಿದೆ. ಕೃತಿಯ ಆರಂಭದಲ್ಲಿ ಸಂಸ್ಕೃತಿಯ ಅರ್ಥ, ಸ್ವರೂಪ ಹಾಗೂ ಹೊಸಕೋಟೆ ಪರಿಸರದಲ್ಲಿನ ಸ್ಥಳೀಯ ಜನಾಂಗಗಳಾದ ಸನ್ಯಾಸಿಗಳು, ಹಂದಿಜೋಗಿಗಳು, ತಿಗಳರು ಹಾಗೂ ತಿಗಳ ಹೊಲೆಯರ ಸಾಂಸ್ಕೃತಿಕ ವಿವರಗಳನ್ನು ದಾಖಲಿಸಿದ್ದಾರೆ. ಸ್ಥಳೀಯ ಜನಸಮುದಾಯಗಳ ಭಾಷಿಕ, ಸಾಂಸ್ಕೃತಿಕ ವಿವರಗಳನ್ನು ದಾಖಲಿಸಿದ್ದಾರೆ. ಸಮುದಾಯದ ಸಾಂಸ್ಕೃತಿಕ ಅಂಶಗಳಾದ ನಂಬಿಕೆ, ಸಂಪ್ರದಾಯ, ಆಚರಣೆಗಳು, ಅಲೆಮಾರಿ ಸಮುದಾಯಗಳಾದ ಸನ್ಯಾಸಿಗಳು ಮತ್ತು ಹಂದಿಜೋಗಿಗಳ ಜೀವನ ಕ್ರಮವನ್ನು ಕುರಿತು ವಿವರಿಸಿದ್ದಾರೆ. ಸಮುದಾಯವೊಂದರ ಸಾಂಸ್ಕೃತಿಕ ಆಚರಣೆಗಳು ಅವರ ಭಾಷಾ ಬಳಕೆ, ಸಾಮಾಜಿಕ ಆರ್ಥಿಕ ವಿವರಗಳನ್ನೊಳಗೊಂಡ ಸ್ಥಳೀಯ ಸಂಸ್ಕೃತಿ ಹಾಗೂ ಸ್ಥಳೀಯ ಚರಿತ್ರೆಯೊಂದರ ವಿಸ್ತೃತವಾದ ಸ್ಪಷ್ಟ ವಿವರಣೆ ಇದಾಗಿದೆ.

'ಪ್ರತಿಯೊಂದು ಪ್ರದೇಶದ ಸಂಸ್ಕೃತಿಯ ವೈವಿಧ್ಯಗಳನ್ನು ತಿಳಿಯಬೇಕಾದರೆ ಆರಂಭದಲ್ಲಿ ಅಲ್ಲಿ ನೆಲೆಸಿರುವ ಜನಾಂಗ(ಸಮುದಾಯಗಳ) ಮೂಲ, ಅವರ ಪ್ರಧಾನ ವೃತ್ತಿ, ಬದುಕಿನ ವಿಧಾನ, ಸಮುದಾಯದಲ್ಲಿನ ಧಾರ್ಮಿಕ ನಂಬಿಕೆ, ಆಚರಣೆ ಸಂಪ್ರದಾಯಗಳನ್ನು ಅರಿತುಕೊಳ್ಳಬೇಕು. ನಂತರ ಮುಖ್ಯವಾಗಿ ಸಮುದಾಯದ ಮೂಲ ಭಾಷೆ, ಸಾಮಾಜಿಕ ಜೀವನ ವಿಧಾನ ಹಾಗೂ ಸಾಮಾಜಿಕ ಕಟ್ಟುಪಾಡುಗಳನ್ನು ಅರಿತರೆ ಸಮುದಾಯದ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸಲು ಸಹಕಾರಿಯಾಗುತ್ತದೆ' ಎಂದು ಸಮುದಾಯವೊಂದರ ಸಾಂಸ್ಕೃತಿಕ ಅಧ್ಯಯನದ ಮಹತ್ವವನ್ನು ವಿವರಿಸಿದ್ದಾರೆ.

ಹೊಸಕೋಟೆ ತಾಲೂಕಿನ ಚರಿತ್ರೆ ಎಂದರೆ "ಒಂದು ನಾಡು ಎಂದರೆ ಅದನ್ನು ಆಳಿದ ರಾಜರು ಅಲ್ಲ, ಅಲ್ಲಿ ಬದುಕಿದ ಜನ" ಎನ್ನುತ್ತ ತಮ್ಮ ನಿಲುವಿಗನುಗುಣವಾಗಿ ವಿವಿಧ ಸಮುದಾಯಗಳ ಸಾಂಸ್ಕೃತಿಕ ಇತಿಹಾಸವನ್ನು ಸವಿವರವಾಗಿ ನಿರೂಪಿಸಿದ್ದಾರೆ. ಸಮುದಾಯವೊಂದರ ಜನಪದ ಕಲೆಗಳನ್ನು ನೃತ್ಯಪ್ರಧಾನ ಆರಾಧನಾ ಪ್ರಧಾನ, ಮನೋರಂಜನಾ ಪ್ರಧಾನ, ಜೀವನಾಧಾರ ಕಲೆ ಎಂದು ವಿಂಗಡಿಸಿಕೊಂಡು ಅವುಗಳ ಆಚರಣಾ ವಿಧಾನ ಹಾಗೂ ಅವುಗಳ ಪ್ರದರ್ಶನದ ಮಹತ್ವವನ್ನು ಕುರಿತು ವಿಶ್ಲೇಷಿಸಿದ್ದಾರೆ. ಜನಾಂಗವೊಂದರ ಜೀವನಕ್ರಮ, ಅಲ್ಲಿನ ವಿಶಿಷ್ಟ ಆಚರಣೆಗಳು

ಹಾಗೂ ಸಮಾಜೋ ಆರ್ಥಿಕ ಸ್ಥಿತಿ-ಗತಿಯನ್ನು ಕುರಿತು ವಿವರಿಸಿದ್ದಾರೆ. ಸಂಸ್ಕೃತಿ ಮತ್ತು ಬದುಕಿನ ವಿಧಾನ ಬೇರೆ ಬೇರೆ ಅಲ್ಲ ಅವೆರಡೂ ಒಂದೇ ಎಂಬ ಗ್ರಹಿಕೆ ನಿರೂಪಿತವಾಗಿದೆ. ಒಂದು ನಿರ್ದಿಷ್ಟ ಪ್ರದೇಶದಲ್ಲಿನ ಸಮುದಾಯವೊಂದರ ಸಂಸ್ಕೃತಿಯ ವಿವರಗಳ ದಾಖಲೀಕರಣ ಇದಾಗಿದೆ.

ವಿವಿಧ ಸಾಂಸ್ಕೃತಿಕ ನೆಲೆಗಳ ಅಧ್ಯಯನ ಎಂಬ ಭಾಗದಲ್ಲಿ ಜನಾಂಗಿಕ ಅಧ್ಯಯನಗಳ ಸಾಂಸ್ಕೃತಿಕ ವಿವರಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಅಂತಹ ಜನಾಂಗದಲ್ಲಿ 'ಹಂದಿಜೋಗಿಗಳು' ಒಬ್ಬರಾಗಿದ್ದಾರೆ. ಅಲೆಮಾರಿ ಜನಾಂಗಕ್ಕೆ ಸೇರಿದ ಈ ಹಂದಿಜೋಗಿಗಳು ತೆಲುಗು ಮೂಲದವರೆಂದು ಲೇಖಕರು ಅಭಿಪ್ರಾಯಿಸಿದ್ದಾರೆ. ತೆಲುಗು ಪ್ರದೇಶಗಳ ಮೂಲಕ ಕರ್ನಾಟಕದ ಭಾಗಗಳಿಗೆ ವಲಸೆ ಬಂದು ನೆಲೆನಿಂತವರಾಗಿದ್ದಾರೆಂದು ತಿಳಿಸಿ, ಅವರ ಮನೆ ಮಾತು ತೆಲುಗು ಎಂದು ಗುರುತಿಸಿದ್ದಾರೆ. "ಅಲೆಮಾರಿ ಪ್ರವೃತ್ತಿಯಿಂದಾಗಿ ಕರ್ನಾಟಕದ ಎಲ್ಲಾ ಭಾಗಗಳಿಗೂ ಪಸರಿಸಿರುವ ಈ ಜನಾಂಗವನ್ನು ತೆಲುಗು ಭಿಕ್ಷುಕರೆಂದು ಗುರುತಿಸಿದ್ದಾರೆ". ಇವರು ಭಿಕ್ಷೆ ಬೇಡುವುದರ ಜೊತೆಗೆ ಹಂದಿಸಾಕುವುದು ಇವರ ಮೂಲವೃತ್ತಿ ಎಂದು ವಿವರಿಸಿದ್ದಾರೆ. ಪ್ರಸ್ತುತ ಹಂದಿಜೋಗಿಗಳೆಂದು ಕರೆಯಲ್ಪಡುವವರು ಪ್ರಧಾನವಾಗಿ ಸಾಂಪ್ರದಾಯಿಕ ಪದ್ಧತಿಯಂತೆ ಹಂದಿಸಾಕುವ ಕಸುಬನ್ನು ಮಾಡುತ್ತಿದ್ದು ತಮ್ಮದೇ ಆದ ವಿಶಿಷ್ಟ ಸಾಂಸ್ಕೃತಿಕ ಲಕ್ಷಣಗಳನ್ನು ಉಳಿಸಿಕೊಂಡು ಬದುಕುತ್ತಿದ್ದಾರೆ.

ಹಂದಿಜೋಗಿಗಳ ವಸತಿಗೆ ಸಂಬಂಧಿಸಿದಂತೆ ಸದಾ ಸಂಚಾರಿಗಳಾದ ಇವರು ತಮ್ಮ ವಾಸ ಸ್ಥಾನಗಳಿಗಾಗಿ ಊರ ಹೊರಗಿನ ಮೈದಾನ, ಕೆರೆ ಅಂಗಳಗಳನ್ನು ಆಶ್ರಯಿಸಿದ್ದಾರೆ. ಅಲ್ಲಿ ೬-೮ ಅಡಿ ಉದ್ದದಲ್ಲಿ ಬಿಡಾರಗಳನ್ನು ನಿರ್ಮಿಸಿಕೊಂಡು ಜೀವಿಸುತ್ತಿದ್ದಾರೆ.

ಗ್ರಾಮಗಳಲ್ಲಿ ನೆಲೆಸಿರುವ ಹಂದಿಜೋಗಿಗಳೂ ಸಹ ಇಂದಿಗೂ ವಿವಾಹ ಮುಂತಾದ ಸಾಂಸ್ಕೃತಿಕ ಆಚರಣೆಗಳಲ್ಲಿ ಇಂತಹ ಗುಡಿಸಲುಗಳನ್ನು ನಿರ್ಮಿಸುತ್ತಾರೆ. ಹಂದಿಸಾಕಣೆಕೆಯನ್ನು ಊರ ಹೊರಗಡೆ ಮೈದಾನ, ತಿಪ್ಪೆಗುಂಡಿ ಮುಂತಾದೆಡೆಗಳಲ್ಲಿ ಮಾಡುತ್ತಾರೆ.

**ಜೀವನ ವಿಧಾನ**

ಜೋಳಿಗೆಯೊಂದಿಗೆ ಭಿಕ್ಷೆ ಬೇಡಲು ಹೊರಡುತ್ತಾರೆ. ಜೋಳಿಗೆ ಕುಲ ವ್ಯವಸ್ಥೆಯ ಪ್ರತೀಕ. ಗಂಡಸರು ವಿಶೇಷ ಉಡುಪನ್ನು ತೊಡುವುದಿಲ್ಲ. ಮಾಂಸಾಹಾರಿಗಳಾದ ಇವರು ಸೇಂದಿ ಪ್ರಿಯರಾಗಿದ್ದಾರೆ. ಹಂದಿ, ಬೆಕ್ಕಿನ ಮಾಂಸ ಹೆಚ್ಚು ಇಷ್ಟಪಡುತ್ತಾರೆ.

ಹಂದಿಜೋಗಿಗಳ ಧಾರ್ಮಿಕ ಆಚರಣೆಗಳಿಗೆ ಸಂಬಂಧಿಸಿದಂತೆ ಇವರು ಮೂಲತಃ ಮಾತೃದೇವತಾ ಆರಾಧಕರು. ಇವರಿಗೆ ಅಂಕಮ್ಮ ಎಂಬ ದೇವಿಯ ಬಗ್ಗೆ ಅಪಾರ ಭಕ್ತಿ. ಸಮುದಾಯದ ಪ್ರತಿಯೊಂದು ಆಚರಣೆಯಲ್ಲೂ ಅಂಕಮ್ಮನನ್ನು ಮರೆಯದೇ ಪೂಜಿಸುತ್ತಾರೆ. ವೈದಿಕ ಧರ್ಮದ ಸ್ಪರ್ಶದಿಂದಾಗಿ ಶೈವ-ವೈಷ್ಣವ ಮಾರ್ಗಗಳೆರಡೂ ಪ್ರಭಾವ ಬೀರಿವೆ. ಆದರೆ ಹೆಚ್ಚಾಗಿ ಶೈವ ಮಾರ್ಗವನ್ನೇ ಅನುಸರಿಸುವುದು ಕಂಡುಬರುತ್ತದೆ. ಇತರೆ ಮಾರ್ಗಗಳಂತೆ ಹಂದಿಜೋಗಿಗಳಿಗೂ ಮಠಗಳುಂಟು.

ಹೊಸಕೋಟೆ ತಾಲೂಕಿನ ಹಂದಿಜೋಗಿಗಳು ಸೇಲಂ ಜಿಲ್ಲೆಯ ಜೋಗೂರು ಮಠಕ್ಕೆ ಸೇರಿದವರಾಗಿದ್ದಾರೆ.

ಬಳ್ಳಾರಿ ಜಿಲ್ಲೆಯ ಪರ್ವತ ಮಠ ಇದು ಜೋಗಿಗಳದ್ದೇ ಮಠ. ಇದಕ್ಕೆ ಇಲ್ಲಿನವರು ಸೇರಲಿಲ್ಲ. ಇವುಗಳೆಲ್ಲ ಲಿಂಗಾಯತ ಮಠಗಳಾಗಿದ್ದು ಹಂದಿಜೋಗಿಗಳು ಶೈವ ಸಂಪ್ರದಾಯವನ್ನು ಅನುಸರಿಸಿ ರುವರೆಂಬುದಕ್ಕೆ ನಿದರ್ಶನವಾಗಿವೆ.

### ಹಂಡಿಜೋಗಿ

ಪ್ರಸ್ತುತ ಈ ಕೃತಿಯಲ್ಲಿ ಅಲೆಮಾರಿ ಸಮುದಾಯವಾದ ಹಂಡಿಜೋಗಿಗಳ ಸಮಾಜಶಾಸ್ತ್ರೀಯ ವಿಷಯಕ್ಕೆ ಸಂಬಂಧಿಸಿದ ವಿವರಗಳಿವೆ. ಕರ್ನಾಟಕದಲ್ಲಿ ಹಂಡಿಜೋಗಿ ಸಮುದಾಯದ ನೆಲೆಗಳು ಹಾಗೂ ಸಮುದಾಯದ ಮೂಲ ವೃತ್ತಿಗೆ ಸಂಬಂಧಿಸಿದ ವಿವರಗಳಿವೆ. ಕರ್ನಾಟಕದಲ್ಲಿ ಹಂಡಿಜೋಗಿಗಳ ಜನಸಂಖ್ಯೆ, ಶಿಕ್ಷಣ, ಸಮಾಜೋ-ಆರ್ಥಿಕ ವಿವರಗಳು ಈ ಕೃತಿಯಲ್ಲಿವೆ. ಕರ್ನಾಟಕದಲ್ಲಿ ಅಲೆಮಾರಿ ಸಮುದಾಯಗಳಿರುವ ಯೋಜನೆಗಳ ವಿವರಗಳನ್ನು ಈ ಕೃತಿ ಒಳಗೊಂಡಿವೆ. ನಂತರ ಸಮುದಾಯದ ಸಂಸ್ಕೃತಿಯ ವಿವರಗಳಿಗೆ ಸಂಬಂಧಿಸಿದಂತೆ ದೀಕ್ಷೆ, ವಿವಾಹ, ಸಾಮಾಜಿಕ ಜೀವನ ಕ್ರಮ ಮೊದಲಾದ ಮಾಹಿತಿಯನ್ನು ದಾಖಲಿಸಲಾಗಿದೆ. ಭಾಷಿಕವಾಗಿ ಹಂಡಿಜೋಗಿಗಳ ಮನೆ ಮಾತು ಮರಾಠಿ ಎಂದು ಹೆಸರಿಸಿ, ಸಂಖ್ಯಾವಾಚಿ, ಕ್ರಮವಾಚಿ ಹಾಗೂ ಕೆಲವು ಗೃಹೋಪಯೋಗಿ ವಸ್ತುಗಳಿಗೆ ಸಂಬಂಧಿಸಿದ ಮರಾಠಿ ಭಾಷಾ ರೂಪಗಳನ್ನು ದಾಖಲಿಸಿದ್ದಾರೆ. ನಂತರ ಹಂಡಿಜೋಗಿಗಳ ಇತರೆ ಜನಪದ ಕಲೆಗಳು ಹಾಗೂ ವೃತ್ತಿ ಪಲ್ಲಟಗಳನ್ನು ಹೆಸರಿಸಿದ್ದಾರೆ. ಕಿನ್ನರಿ ವಾದ್ಯದ ನಿರ್ಮಾಣ ಹಾಗೂ ಸಮುದಾಯದಲ್ಲಿ ಕಿನ್ನರಿಗಿರುವ ಮಹತ್ವವನ್ನು ಕುರಿತು ವಿವರಿಸಿದ್ದಾರೆ. ಲಿಂಗವಾರು ಸಾಕ್ಷರತಾ ಪ್ರಮಾಣ, ಜನಸಂಖ್ಯೆಯನ್ನು ಕೋಷ್ಟಕದಲ್ಲಿ ಹಂಡಿಜೋಗಿಗಳ ಜನಸಂಖ್ಯೆಯ ವಿವರಗಳನ್ನು ನೀಡಿದ್ದಾರೆ. ಇದು ಹಂಡಿಜೋಗಿಗಳ ಸಮಾಜೋ-ಆರ್ಥಿಕ ಅಧ್ಯಯನವಾಗಿದೆ.

### ಕರ್ನಾಟಕದ ನಾಥಪಂಥ

ಪ್ರಸ್ತುತ ಈ ಕೃತಿಯಲ್ಲಿ ಲೇಖಕರು ಕರ್ನಾಟಕದಲ್ಲಿನ ನಾಥಪಂಥಿ ಸಮುದಾಯಗಳನ್ನು ಕುರಿತು ವಿವರಿಸುವಾಗ ಕಿನ್ನರಿ ಜೋಗಿಗಳ ಸಾಂಸ್ಕೃತಿಕ ಆಚರಣೆಗಳ ಬಗ್ಗೆ ವಿವರಿಸಿದ್ದಾರೆ. ಕಿನ್ನರಿಜೋಗಿಗಳು ಮತ್ತು ನಾಥಪಂಥದ ಮಠಗಳಿರುವ ಧಾರ್ಮಿಕ ಸಂಬಂಧವನ್ನು ಈ ಕೃತಿಯಲ್ಲಿ ವಿವರಿಸಿದ್ದಾರೆ. ಕಾಪಾಲಿಕರು ತುಳುಜೋಗಿಗಳು ಹಾಗೂ ಕಿನ್ನರಿ ಜೋಗಿಗಳ ಧಾರ್ಮಿಕ ಆಚರಣೆಗಳನ್ನು ಕುರಿತು ವಿವರಿಸಿದ್ದಾರೆ. ನಾಥಪಂಥಿ ಮಠಗಳಾದ ಮಂಗಳೂರಿನ ಕದ್ರಿ, ಮಂಡ್ಯದ ಆದಿಚುಂಚನಗಿರಿ, ಮೊಳಕಾಲ್ಮೂರಿನ ಲುಂಕೆಮಲೆಮಠಗಳಲ್ಲಿನ ಧಾರ್ಮಿಕ ಆಚರಣೆಗಳು ಹಾಗೂ ಮಠದ ವಾರ್ಷಿಕ ಕಾರ್ಯಕ್ರಮಗಳನ್ನು ವಿವರಿಸಿದ್ದಾರೆ. ಕಿನ್ನರಿ ಜೋಗಿಗಳನ್ನು ಕುರಿತು ಇವರು 'ಲುಂಕೆಮಲೆಯ ನಾಥಮಠದ ಶಿಷ್ಯರು', ಇವರ ಮನೆ ಮಾತು ಮರಾಠಿ ಎಂದು ವಿವರಿಸಿದ್ದಾರೆ.

ನಾಥಪಂಥದ ಆಚರಣಲೋಕ ಎಂಬ ಭಾಗದಲ್ಲಿ ಲೇಖಕರು ನಾಥರ ಮುಖ್ಯ ಆಚರಣೆಯಾದ

'ಜೋಗಿದೀಕ್ಷೆ' ಅದರ ಆಚರಣಾವಿಧಾನ ಹಾಗೂ ನಾಥಪಂಥದಲ್ಲಿ ಅದಕ್ಕಿರುವ ಮಹತ್ವವನ್ನು ಕುರಿತು ವಿವರಿಸಿದ್ದಾರೆ. "ನಾಥ ದೀಕ್ಷೆ ೨ ಹಂತದಲ್ಲಿರುತ್ತದೆ ಒಂದು ಗೃಹಸ್ಥರಾಗಿದ್ದುಕೊಂಡೇ ನಾಥಮತಾಚರಣೆ ಮಾಡುವವರು ಇವರನ್ನು 'ಜೌಘಡ್' ಎನ್ನುತ್ತಾರೆ. ನಾಥಪಂಥಕ್ಕೆ ಸೇರಿದ ಪ್ರತಿಯೊಂದು ಸಮುದಾಯದ ಹುಡುಗರಿಗೆ ೧೨ನೇ ವರ್ಷದಲ್ಲಿ ಅಥವಾ ಮದುವೆಗೆ ಮುಂಚೆ ದೀಕ್ಷೆ ಮಾಡುತ್ತಾರೆ. ಮಹಿಳೆಯರಿಗೆ ನಾಥ ದೀಕ್ಷೆ ಇರುವುದಿಲ್ಲ. ಸನ್ಯಾಸಿಯಾಗಿ ನಾಥಮತಾಚರಣೆ ಮಾಡುವವರನ್ನು 'ಯೋಗಿಗಳು' ಎನ್ನುತ್ತಾರೆ. ಜೌಘಡರಿಗೂ ಯೋಗಿಗಳಿಗೂ ಸಾಕಷ್ಟು ವ್ಯತ್ಯಾಸಗಳಿವೆ. ಗುರುಸ್ಥಾನ ಪಡೆಯುವ ಯೋಗಿಗಳು ಚಿಕ್ಕ ವಯಸ್ಸಿನವರಾದರೂ ಗೃಹಸ್ಥರನ್ನ ಅಧಿಕಾರದಿಂದ ಮಾತನಾಡಿಸುತ್ತಾರೆ. ಇಲ್ಲಿ ಇಬ್ಬರಿಗೂ ಕೇಶಮುಂಡನ, ಮಂತ್ರೋಪದೇಶ, ಭಸ್ಮಧಾರಣೆ, ಶೈಲಿಧಾರಣೆ ತನಕದ ೪ ಹಂತಗಳು ಒಂದೇಯಾಗಿರುತ್ತವೆ. ೫ನೇ ಹಂತವಾಗಿ ಕಿವಿಭೇದ ಮಾಡಿ ಕುಂಡಲ ಹಾಕಿದರೆ ಆತ ಯೋಗಿಯಾಗುತ್ತಾನೆ. ಜೋಗಿದೀಕ್ಷೆ ಕೊಟ್ಟ ೧೨ ವರ್ಷದ ನಂತರ ಯೋಗಿದೀಕ್ಷೆ ಕೊಡಬೇಕೆಂಬ ನಿಯಮವಿದೆ.

೧. ಔಘಡ್ (ಜೋಗಿದೀಕ್ಷೆ)

೨. ಯೋಗಿದೀಕ್ಷೆ (ಗುರುದೀಕ್ಷೆ)

ಯೋಗಿದೀಕ್ಷೆ ಪಡೆಯುವಾಗ ನಾನು ಮದುವೆಯಾಗುವುದಿಲ್ಲ. ಬ್ರಹ್ಮಚರ್ಯಪಾಲಿಸುತ್ತೇನೆ. ಲಾಭದಾಯಕವಾದ ವ್ಯಾಪಾರ ಮಾಡುವುದಿಲ್ಲ. ನೌಕರಿ ಸೇರುವುದಿಲ್ಲ. ಪ್ರಚೋದಿಸಿದರೂ ಸಿಟ್ಟಾಗುವುದಿಲ್ಲ. ಅಪಾಯಕಾರಿ ಆಯುಧ ಇರಿಸಿಕೊಳ್ಳುವುದಿಲ್ಲ. ಅಹಿಂಸೆ ಆಚರಿಸುತ್ತೇನೆ ಎಂದು ಪ್ರತಿಜ್ಞೆ ಮಾಡಬೇಕು." (ಕರ್ನಾಟಕದ ನಾಥಪಂಥ, ಪು-೧೦೫-೧೦೬)

ದೀಕ್ಷಾ ವಿಧಾನವನ್ನು "ಭೈರವನ ದಿನವಾದ ಭಾನುವಾರ ನೆರವೇರಿಸಲಾಗುತ್ತದೆ. ಜೋಗಪ್ಪನು ಭೈರವನ ಸಂಕೇತವಾದ ತ್ರಿಶೂಲ ಹಾಗೂ ಕಲಶಗಳನ್ನು ಸ್ಥಾಪಿಸುತ್ತಾನೆ. ದೀಕ್ಷೆ ಪಡೆಯುವ ಹುಡುಗ ಉಪವಾಸ ಇರುತ್ತಾನೆ. ಹೊಸ ಬಟ್ಟೆ ಧರಿಸಿ ಮೂಡು ದಿಕ್ಕಿಗೆ ಕೂರಿಸುತ್ತಾರೆ. ಕೈಗೆ ಕಂಕಣ ಕಟ್ಟಿ ಹಾಲೆರೆಯುತ್ತಾರೆ. ಭೈರವ ಜಯಕಾರಗಳ ನಡುವೆ ಜೋಗಪ್ಪ ಶಸ್ತ್ರದಿಂದ ಅವನ ಕಿವಿ ಚುಚ್ಚಿ ೩ ಹನಿ ರಕ್ತವನ್ನು ಸೋರೆ ಬರುಡೆಗೆ ಬೀಳಿಸುತ್ತಾನೆ. ನಂತರ 'ಕಾಮಾಕ್ಷಿ'ಯನ್ನು ಕಿವಿಗೆ ತೊಡಿಸಿ ಕಿವಿಯಲ್ಲಿ ಭೈರವ ಮಂತ್ರ ಹೇಳಿ ಸಿಂಗನಾದ ಊದುತ್ತಾನೆ. ತಲೆ ಮೇಲೆ ಅಕ್ಷತೆ ಹಾಕಿ ಹೆಗಲಿಗೆ ಜೋಳಿಗೆ ಹಾಕುತ್ತಾನೆ. ನಂತರ ತಂದೆ-ತಾಯಿಗಳು ನೀನು ಇಂದಿನಿಂದ ನಮ್ಮ ಮಗನಲ್ಲ ಭೈರವನಸಿಸುಮಗ ಎಂದು ಹೇಳುತ್ತಾರೆ.

ದೀಕ್ಷೆಯಾದ ನಂತರ ಜೋಗಿಯಾಗಿ ನಾಲ್ಕು ಮನೆಯ ಭಿಕ್ಷಕ್ಕೆ ಹೊರಡುತ್ತಾನೆ. ಮೊದಲ ಭಿಕ್ಷೆಯನ್ನು ಹೆತ್ತವರೇ ನೀಡುತ್ತಾರೆ. ದೀಕ್ಷಾ ಸಮಾರಂಭದಲ್ಲಿ ಪಾಲ್ಗೊಂಡವರಿಗೆ ಮಾಂಸದೂಟ, ಭಂಗಿ, ರಾಮರಸ ಕಡ್ಡಾಯವಾಗಿರುತ್ತದೆ." (ಕರ್ನಾಟಕದ ನಾಥಪಂಥ, ಪು-೧೦೮)

ಲೇಖಕರು ನಾಥಪಂಥದ ಆಚರಣೆಗಳಲ್ಲಿ ಪ್ರಮುಖವಾಗಿ 'ದೀಕ್ಷಾವಿಧಾನ' (ಜೋಗಿದೀಕ್ಷೆ) ಅದರ ಮಹತ್ವವನ್ನು ವಿವರಿಸುವುದರೊಂದಿಗೆ ನಾಥರಲ್ಲಿ ರೂಢಿಯಲ್ಲಿರುವ ಮತ್ತಷ್ಟು ಆಚರಣೆಗಳ ಕುರಿತಾಗಿ ವಿವರಿಸಿದ್ದಾರೆ. ಸಿಂಗನಾದ ಭಂಗಿ ಸೇವನೆ, ದುನಿ ಹಾಗೂ ಝುಂಡಿಯಾತ್ರೆ ಇವುಗಳ ಆಚರಣಾವಿಧಾನ, ಮಹತ್ವವನ್ನು ಕುರಿತು ವಿವರಿಸಿದ್ದಾರೆ.

ಇದರ ಜೊತೆಗೆ ಕರ್ನಾಟಕದಲ್ಲಿನ ನಾಥಮಠಗಳ ಸಂಕ್ಷಿಪ್ತ ಪರಿಚಯ ಅಲ್ಲಿನ ಧಾರ್ಮಿಕ ವಿವರಗಳನ್ನು ಕುರಿತು ವಿವರಿಸಿದ್ದಾರೆ. ಪ್ರಮುಖವಾಗಿ ಕದ್ರಿಯ ಜೋಗಿಮಠ, ಅಲ್ಲಿನ ನಾಥಪರಂಪರೆ, ನಂತರ ಕದ್ರಿಯ ಜೋಗಿಮಠಕ್ಕೂ ಮಂಜುನಾಥನ ಗುಡಿಗೂ ಇರುವ ಧಾರ್ಮಿಕ ಸಂಬಂಧವನ್ನು ಕುರಿತು ವಿವರಿಸಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ಬಂಟವಾಳದ ವಿಟ್ಲ ಜೋಗಿಮಠ, ಶಿವಮೊಗ್ಗ ಜಿಲ್ಲೆಯ ಚಂದ್ರಗುತ್ತಿಯ ಚಂದ್ರಮುಖಿ ಯೋಗಿಮಠ, ಬೆಳಗಾವಿ ಜಿಲ್ಲೆಯ ಖಾನಾಪುರ ತಾಲೂಕಿನ ಹಂಡಿಬಡಗನಾಥಮಠ ಹಾಗೂ ಮೊಳಕಾಲ್ಮೂರಿನ ನುಂಕೆಮಲೆ ಮಠಕ್ಕೂ ಹಂಡಿ ಜೋಗಿಗಳಿಗೂ ಇರುವ ಧಾರ್ಮಿಕ ಸಂಬಂಧವನ್ನು ಕುರಿತು ವಿವರಿಸಿದ್ದಾರೆ.

ಕರ್ನಾಟಕದ ವೃತ್ತಿಗಾಯಕರು, ಜೀ.ಶಂ.ಪ. ಈ ಕೃತಿಯಲ್ಲಿ ಹಂಡಿಜೋಗಿಗಳನ್ನು ಜನಪದ ಲೌಕಿಕ ವೃತ್ತಿಗಾಯಕರ ವರ್ಗದಲ್ಲಿ ಹೆಸರಿಸಿದ್ದಾರೆ. ಅವರ ಹಾಡುಗಾರಿಕೆ ಕಲೆಯನ್ನು ಕುರಿತು ಇವರು ಧಾರ್ಮಿಕ ವೃತ್ತಿಗಾಯಕರಂತೆ ಯಾವುದೇ ನಿರ್ಧಿಷ್ಟ ದೈವ ಹಾಗೂ ಧಾರ್ಮಿಕ ಪಂಥಕ್ಕೆ ತಮ್ಮನ್ನು ಮೀಸಲಾಗಿಟ್ಟುಕೊಂಡವರಲ್ಲ. ಸ್ವತಂತ್ರವಾಗಿ ತಮ್ಮದೇ ಆದ ಕಥನ ಕಲೆಯನ್ನು (ಹಾಡುಗಾರಿಕೆ) ಸಾಂಪ್ರದಾಯಿಕವಾಗಿ ಮುಂದುವರೆಸಿಕೊಂಡು ಬಂದವರೆಂದು ವಿವರಿಸಿದ್ದಾರೆ. ಇವರು ಇತರೇ ಜನಪದ ಧಾರ್ಮಿಕ ಪರಂಪರೆಯ ಕಲಾವಿದರಂತೆ ನಿರ್ಧಿಷ್ಟ ದೇವರ ಜಾತ್ರೆ, ನಿರ್ಧಿಷ್ಟ ದೈವಗಳ ಉತ್ಸವಗಳಲ್ಲಿ ಭಾಗವಹಿಸುವುದಾಗಲಿ, ನಿರ್ದಿಷ್ಟ ಬಿರುದು ಬಾವಲಿಗಳನ್ನು ನಿತ್ಯ ಧರಿಸುವುದಾಗಲಿ ಮಾಡುವುದಿಲ್ಲ. ಇವರು ಸ್ವತಂತ್ರರು. ತಮಗೆ ಅನುಕೂಲವಾದ ದಿನಗಳಲ್ಲಿ ಭಿಕ್ಷಾಟನೆ ಹಾಗೂ ಹಾಡುಗಾರಿಕೆಯನ್ನು ನಡೆಸುತ್ತಾರೆ. ಈ ಸಮಯದಲ್ಲಿ ಸಮುದಾಯದ ಸಂಪ್ರದಾಯದಿಂದ ಬಂದ ವಾದ್ಯಗಳನ್ನು (ಕಿನ್ನೂರಿ) ಬಳಸಿಕೊಂಡು ಮೇಳಗಳನ್ನು ಸಂಘಟಿಸುತ್ತಾರೆ. ಸ್ಥಳೀಯ ಪರಿಸರದಲ್ಲಿನ ಹಬ್ಬಗಳು, ಜಾತ್ರೆ, ಉತ್ಸವಗಳಲ್ಲಿ ೩ ರಿಂದ ೫ ಜನ ಜೋಗಿಗಳಿಂದ ಕೂಡಿದ ಮೇಳಗಳನ್ನು ಸಂಘಟಿಸಿ, ಅದಕ್ಕಾಗಿ ಹಣ, ದವಸಧಾನ್ಯಗಳನ್ನು ಉಡುಗೊರೆಗಳಾಗಿ ಪಡೆಯುವ ಪದ್ಧತಿ ಇವರಲ್ಲಿ ರೂಢಿಯಲ್ಲಿರುವುದನ್ನು ಕಾಣಬಹುದಾಗಿದೆ. ಇವರು ಹಾಡುಗಾರಿಕೆಯನ್ನೇ ಪ್ರಧಾನ ವೃತ್ತಿಯನ್ನಾಗಿಸಿ ಕೊಂಡಿರುತ್ತಾರೆ. ಇವರು ಜೀವನ ನಿರ್ವಹಣೆಗಾಗಿ ಅನೇಕ ಲಾವಣಿಗಳು, ಜನಪದ ಕಾವ್ಯ/ಕತೆಗಳನ್ನು ಹಾಡುತ್ತಾರೆ. ಆ ಮೂಲಕ ಸ್ಥಳೀಯರಿಂದ ಉಡುಗೊರೆ, ಕಾಣಿಕೆ, ದವಸಧಾನ್ಯಗಳನ್ನು ಪಡೆದು ಜೀವನ ಸಾಗಿಸುತ್ತಾರೆ. ಇವರಲ್ಲಿ ಮೊದಲನೇ ತಲೆಮಾರಿನ ಕೆಲವು ಹಿರಿಯರು ಗುಂಪು-ಗುಂಪುಗಳಲ್ಲಿ ಇಂದಿಗೂ ಹಾಡುಗಳನ್ನು ಹಾಡುತ್ತ ವರ್ಷದ ಹೆಚ್ಚಿನ ದಿನಗಳನ್ನು ಸಂಚಾರಲ್ಲಿಯೇ ಕಳೆಯುವುದನ್ನು ಕಾಣಬಹುದಾಗಿದೆ. ಇಂತಹ ಸಂದರ್ಭದಲ್ಲಿ ರಾತ್ರಿಯಾಗುತ್ತಲೇ ಊರಿನ ಹಾಳು

ದೇವಾಲಯ, ಊರ ಹೊರಗಿನ ಛಾವಡಿ, ಹಾಳು ಮಂಟಪಗಳೇ ಇವರ ವಾಸಸ್ಥಾನಗಳು. ಸುಗ್ಗಿಯ ದಿನಗಳನ್ನು ಇವರು ಹೆಚ್ಚು ಸಂಚಾರದಲ್ಲಿಯೇ ಕಳೆಯುತ್ತಾರೆ. ಇವರು ಜೀವನ ನಿರ್ವಹಣೆಗೆ ಭಿಕ್ಷಾಟನೆ (ಆಹಾರ ಸಂಗ್ರಹಣೆಗೆ, ದವಸ ಧಾನ್ಯ, ಕಾಣಿಕೆ ಸಂಗ್ರಹಣೆ, ವಸ್ತ್ರ ಉಡುಗೊರೆ) ಮಾಡುವವರಂತೆ ಕಂಡರೂ ಇವರು ಅಪಾರವಾದ ಜನಪದ ಹಾಡುಗಾರಿಕೆಯನ್ನು ತಮ್ಮ ಸ್ಮೃತಿ ಪಟಲದಲ್ಲಿ ಹುದುಗಿಸಿಟ್ಟುಕೊಂಡ ಜನಪದ ಕಲಾವಿದರಾಗಿದ್ದಾರೆ.

## ೨.೨. ಹಂಡಿಜೋಗಿ ಸಮುದಾಯದ ಮೂಲ

ಹಂಡಿಜೋಗಿ ಸಮುದಾಯವು ಕರ್ನಾಟಕಕ್ಕೆ ಭಾರತದ ಇತರೇ ಭಾಗಗಳಿಂದ ವಲಸೆ ಬಂದಿದೆ ಎಂಬುದನ್ನು ಅವರಾಡುವ ಭಾಷೆಯಿಂದ ಗುರುತಿಸಬಹುದಾಗಿದೆ. ಮರಾಠಿ ಭಾಷಿಕರಾದ ಇವರು ಕರ್ನಾಟಕಕ್ಕೆ ಮಹಾರಾಷ್ಟ್ರ ಗಡಿಭಾಗಗಳಿಂದ ಅಂದರೆ ಬೆಳಗಾವಿಯ 'ಹಂಡಿಬಡಗನಾಥ' (ಮೂಲಮಠ) ಮಠದ ಮೂಲಕ ಕರ್ನಾಟಕದ ಇತರೆ ಭಾಗಗಳಿಗೆ ವಲಸೆ ಬಂದಿದ್ದಾರೆ ಎಂದು ಗುರುತಿಸಲಾಗಿದೆ. ಮನೆಮಾತು ಮರಾಠಿಯಾದರೂ ಪ್ರಾದೇಶಿಕವಾಗಿ ಕನ್ನಡ, ತೆಲುಗು ಭಾಷೆಗಳನ್ನು ಬಲ್ಲವರಾಗಿದ್ದಾರೆ. ಜೋಗಿ ಸಂಪ್ರದಾಯದವರು ಉತ್ತರ ಭಾರತದ ನಾಥಪಥದ ಮಠಗಳಿಗೆ ಭಕ್ತಿಪೂರ್ವಕವಾಗಿ ನಡೆದುಕೊಳ್ಳುತ್ತಾರೆ. ಕಿನ್ನರಿ ವಾದ್ಯ ನುಡಿಸುವ ಕಲೆಯಲ್ಲಿ ಪರಿಣತರಾದ ಇವರು ಭೈರವನ ಪ್ರಮುಖ ಆರಾಧಕರಾಗಿದ್ದಾರೆ. ಕೆಲವು ಜೋಗಿಗಳು ಗೋರಕ್ಷನಾಥನೇ ನಮ್ಮ ಕುಲದೈವವೆಂದು ಹೇಳುತ್ತಾರೆ. ಹಾಗಾಗಿ ಹಂಡಿಜೋಗಿಗಳಿಗೂ ನಾಥಪಂಥದೊಂದಿಗೆ ಧಾರ್ಮಿಕ ಸಂಬಂಧವಿದೆ ಎಂಬುದನ್ನು 'ಕರ್ನಾಟಕದ ನಾಥಪಂಥ' ಎಂಬ ಕೃತಿಯಲ್ಲಿ ಡಾ. ರಹಮತ್ ತರೀಕೆರೆಯವರು ವಿವರಿಸಿದ್ದಾರೆ. ಭೈರವ (ನಾಥಪಂಥ) ದೀಕ್ಷೆಯನ್ನು ಜೋಗಿಗಳಿಗೂ ಸಹ ನೀಡಲಾಗುತ್ತದೆ. ಕರ್ನಾಟಕದಲ್ಲಿ ಇವರನ್ನು ಕಿನ್ನರಿಜೋಗಿಗಳೆಂಬ ವೃತ್ತಿಗಾಯಕ ಸಂಪ್ರದಾಯದಲ್ಲಿ ಗುರುತಿಸಿದ್ದಾರೆ.

ಬಣ್ಣ-ಬಣ್ಣದ ವಿಶಿಷ್ಟ ವೇಷಭೂಷಣಗಳನ್ನು ತೊಟ್ಟು ಊರೂರು ಸಂಚರಿಸುತ್ತ ಕಿನ್ನರಿ ನುಡಿಸುತ್ತ ಅರ್ಜುನಜೋಗಿ, ಹಾಗೂ ಇತರೆ ಮಹಾಭಾರತದ ಕಥೆಗಳನ್ನು ತಮ್ಮದೇ ಧಾಟಿಯಲ್ಲಿ ಹಾಡುತ್ತಾರೆ. ಕರ್ನಾಟಕದಲ್ಲಿರುವ ನಾಥಸಂಪ್ರದಾಯದ ಮಠಗಳಾದ ಆದಿಚುಂಚನಗಿರಿಮಠ, ಮಂಗಳೂರಿನ ಕದ್ರಿಯೋಗಿಮಠ, ಚಿತ್ರದುರ್ಗದ ಮೊಳಕಾಲ್ಮೂರಿನ ನುಂಕಮಲೆ ಮಠ, ಬೆಳಗಾವಿಯ ಹಂಡಿಬಡಗನಾಥ ಮಠಗಳೊಡನೆ ಜೋಗಿಗಳು ವಿಶೇಷವಾದ ಧಾರ್ಮಿಕ ಸಂಬಂಧವನ್ನು ಹೊಂದಿದ್ದಾರೆ.

ಹಂಡಿಜೋಗಿಗಳು ಇಂದಿಗೂ ತಮ್ಮ ಸಮುದಾಯದ ಸಾಂಸ್ಕೃತಿಕ ಆಚರಣೆಯಾದ ದೀಕ್ಷೆಯನ್ನು ತಮ್ಮ ಮೂಲಮಠ ಅಥವಾ ಶಾಖಾಮಠಗಳಲ್ಲಿ ನೆರವೇರಿಸುತ್ತಾರೆ. ದೀಕ್ಷೆಯನ್ನು ಪಡೆದನಂತರ ಸಮುದಾಯದ ಮೂಲವೃತ್ತಿಯಾದ ಹಾಡುಗಾರಿಕೆ ಕಲೆಯಲ್ಲಿ ನಿರತರಾಗುತ್ತಾರೆ. ಹಂಡಿಜೋಗಿಗಳು ತಮ್ಮ ಸಮುದಾಯದ ಮೂಲಪುರುಷ ಹಾಗೂ ಕುಲಬಿರುದುಗಳನ್ನು ಯಾರಿಂದ ಪಡೆಯಲಾಯಿತು

ಎಂಬುದನ್ನು ಒಂದು ಪುರಾಣ ಕಥೆಯ ಮೂಲಕ ವಿವರಿಸುತ್ತಾರೆ. ಇದರ ವಿವರಣೆಯನ್ನು ಡಾ.ಹಿ.ಚಿ. ಬೋರಲಿಂಗಯ್ಯನವರು 'ಕರ್ನಾಟಕ ಜನಪದ ಕಲೆಗಳ ಕೋಶ' ಎಂಬ ಕೃತಿಯಲ್ಲಿ 'ಕಿನ್ನರಿಮೇಳ' ಕಲೆಯ ಪ್ರದರ್ಶನ ಭಾಗದಲ್ಲಿ ದಾಖಲಿಸಿದ್ದಾರೆ. ಅರ್ಜುನನೇ ನಮ್ಮ ಸಂಸ್ಕೃತಿಯ ನಾಯಕ, ಅವನೇ ನಮ್ಮ ಸಮುದಾಯದ ಮೂಲಪುರುಷ. ಪಾಂಡವರಿಂದಲೇ ಕಿನ್ನರಿಯನ್ನು ಪಡೆಯಲಾಯಿತು. ಹಾಗಾಗಿ ಜೋಗಿಗಳು ಇಂದಿಗೂ ತಮ್ಮ ಹಾಡುಗಳಲ್ಲಿ ಪಾಂಡವರ ಕಥೆಯನ್ನೇ ಹೆಚ್ಚು ಹಾಡುತ್ತಾರೆ.

ಹಂಡಿಜೋಗಿಗಳ ಮೂಲಕ್ಕೆ ಸಂಬಂಧಿಸಿದಂತೆ ಇನ್ನೊಂದು ಪುರಾಣ ಕಥೆ ಸಮುದಾಯದಲ್ಲಿ ಪ್ರಸಾರದಲ್ಲಿರುವುದನ್ನು ಗುರುತಿಸಬಹುದಾಗಿದೆ. ವಾಸ್ತವವಾಗಿ ಇವರು ಭೈರವನ ಆರಾಧಕರು ಶಿವನಿಂದಲೇ ಕಿನ್ನರಿ ಹಾಗೂ ಕುಲಬಿರುದುಗಳನ್ನು ಪಡೆದಿರುವುದಾಗಿ ಹೇಳುತ್ತಾರೆ. ಇಂದಿಗೂ ತಮ್ಮ ದೈವಗಳ ದೇವಸ್ಥಾನದ ಮುಂಭಾಗದಲ್ಲಿ ತ್ರಿಶೂಲವನ್ನು ನೆಟ್ಟು ಪೂಜಿಸುತ್ತಾರೆ. ಶಿವ–ಪಾರ್ವತಿ, ಗಂಗೆ–ಗೌರಿಯ ಕುರಿತಾದ ಕಥಾನಾತ್ಮಕ ಹಾಡುಗಳನ್ನು ಹಾಡುತ್ತಾರೆ. ಶಿವನಿಂದಲೇ ಜೋಗಿಯ ದೀಕ್ಷೆ, ಕಿನ್ನರಿ ಹಾಗೂ ಕುಲಬಿರುದುಗಳನ್ನು ಪಡೆಯಲಾಯಿತು ಎಂದು ತಮ್ಮ ಸಮುದಾಯದ ಮೂಲಕ್ಕೆ ಸಂಬಂಧಿಸಿದ ಕಥೆಯನ್ನು ವಿವರಿಸುತ್ತಾರೆ.

ಜೊತೆಗೆ ಹಂಡಿಜೋಗಿಗಳು ಬಳಸುವ ಕಿನ್ನರಿ ವಾದ್ಯದ ಪ್ರಸ್ತಾಪ ೧೨ನೇ ಶತಮಾನದ ಶರಣರಲ್ಲಿ ಕಂಡುಬರುತ್ತದೆ. ಕಿನ್ನರಿ ಬೊಮ್ಮಯ್ಯನೆಂಬ ಶರಣ ಶಿವನನ್ನು ಕುರಿತು ಹಾಡುಗಳನ್ನು ರಚಿಸಿ ಹಾಡಿ ಅದರಿಂದ ೧೧ ಹಣ, ಧಾನ್ಯಗಳನ್ನು ಸಂಪಾದಿಸಿ ಶರಣರ ದಾಸೋಹಕ್ಕೆ ನೀಡುತ್ತಿದ್ದನೆಂದು ತಿಳಿದುಬರುತ್ತದೆ. ಹಾಗಾಗಿ ಕಿನ್ನರಿ ಬೊಮ್ಮಯ್ಯನೇ ಸಮುದಾಯದ ಮೂಲಪುರುಷ ಎಂಬ ವಿಷಯವೂ ಒಂದಿದೆ. ಇದೇನೇ ಇದ್ದರೂ ಹಂಡಿಜೋಗಿಗಳು ಮಾತ್ರ ಮಹಾಭಾರತದ ಪಾಂಡವರ ಅರ್ಜುನನೇ ನಮ್ಮ ಸಂಸ್ಕೃತಿಯ ನಾಯಕ, ಅರ್ಜುನನೇ ನಮ್ಮ ಸಮುದಾಯದ ಮೂಲಪುರುಷ, ಅವನಿಂದಲೇ ನಮ್ಮ ಸಂಸ್ಕೃತಿಯ ಪ್ರಸಾರವಾಯಿತು ಎಂದು ಸಮುದಾಯದ ವಕ್ತೃಗಳು ವಿವರಿಸುತ್ತಾರೆ.

ಹಂಡಿಜೋಗಿ ಸಮುದಾಯದ ಮೂಲಕ್ಕೆ ಸಂಬಂಧಿಸಿದಂತೆ ಸಮುದಾಯದಲ್ಲಿ ಅನೇಕ ಜನಪದ ಕತೆಗಳಿವೆ. ಅವುಗಳನ್ನು ಕುರಿತು ವಿದ್ವಾಂಸರು ಸಂಕ್ಷಿಪ್ತವಾಗಿ ಕೆಲವು ವಿವರಗಳನ್ನು ದಾಖಲಿಸಿದ್ದಾರೆ. ಇದರ ಜೊತೆಗೆ ಸಮುದಾಯದ ಮೂಲ ಕುರಿತ ಪುರಾಣ ಕತೆಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

೧. ಪೌರಾಣಿಕ ಹಿನ್ನೆಲೆ

೨. ಜನಪದ ಹಿನ್ನೆಲೆ

### ೨.೨.೧ ಪೌರಾಣಿಕ ಹಿನ್ನೆಲೆ

ಹಂಡಿಜೋಗಿಗಳು ಮಹಾಭಾರತದ ಅರ್ಜುನನೇ ತಮ್ಮ ಸಮುದಾಯದ ಮೂಲ ಪುರುಷ. ಅವನನ್ನೇ ತಮ್ಮ ವೃತ್ತಿಯ ಗುರು ಹಾಗೂ ನಮ್ಮ ಸಮುದಾಯದ ಸಾಂಸ್ಕೃತಿಕ ನಾಯಕ ಎಂದು ಪರಿಗಣಿಸಿದ್ದಾರೆ. ಮಹಾಭಾರತದ ಅರ್ಜುನನಿಂದಲೇ ನಮ್ಮ ಸಮುದಾಯದ ವೃತ್ತಿ ಹಾಗೂ ವೇಷಭೂಷಣ ಕುಲಬಿರುದುಗಳನ್ನು ಪಡೆಯಲಾಯಿತು ಎಂದು ವಿವರಿಸುತ್ತಾರೆ. ಅರ್ಜುನ ಹಲವು ಸಂದರ್ಭಗಳಲ್ಲಿ ಸನ್ಯಾಸಿಯಾಗುವ ಕ್ರಿಯೆಯನ್ನೇ ಜೋಗಿವೇಷ ಹಾಕಿದ ಎಂದು ಪ್ರತಿಪಾದಿಸುತ್ತಾರೆ. ಹಾಗಾಗಿ ಮಹಾಭಾರತ ಕತೆಯನ್ನು ತಮ್ಮದೇ ಮೌಖಿಕ ಧಾಟಿಯಲ್ಲಿ ವಿವಿಧ ಪರ್ವತಗಳನ್ನು ಪ್ರಧಾನವಾಗಿ ಹಾಡುತ್ತಾರೆ. ಅವುಗಳಲ್ಲಿ ಅರ್ಜುನನಿಗೆ ಸಂಬಂಧಿಸಿದ ಹಾಡುಗಳೇ ಅವರಿಗೆ ಹೆಚ್ಚು ಪ್ರಿಯವಾದವುಗಳಾಗಿವೆ. ಆ ಹಾಡುಗಳಲ್ಲಿ ಅರ್ಜುನ ಜೋಗಿಯಾಗುವ ಸಂದರ್ಭ ಇವರಿಗೆ ಅಚ್ಚುಮೆಚ್ಚು.

ಪರಶಿವನೊಡನೆ ಯುದ್ಧ ಮಾಡಿ ಅವನನ್ನು ಮೆಚ್ಚಿಸಿ ಅವನಿಂದ ಪಾಶುಪತಾಸ್ತ್ರವನ್ನು ಪಡೆಯುವುದಲ್ಲದೆ ಶಿವನನ್ನೇ ತನ್ನ ಗುರುವನ್ನಾಗಿ, ದೈವವನ್ನಾಗಿ ಸ್ವೀಕರಿಸಿದ ಅರ್ಜುನನೇ ತಮ್ಮ ಸಮುದಾಯದ ಮೂಲಪುರುಷ ಎಂಬ ನಂಬಿಕೆ ಸಮುದಾಯದಲ್ಲಿ ರೂಢಿಯಲ್ಲಿದೆ. ಮಹಾಭಾರತದ ಕತೆಯ ಮೂಲಕವೇ ತಮ್ಮ ಸಮುದಾಯದ ಮೂಲವನ್ನು ಹೇಳುವ ಇವರ ಇತಿಹಾಸವನ್ನು ಈ ಕೆಳಗಿನಂತೆ ವಿವರಿಸಬಹುದಾಗಿದೆ.

**ಹಂಡಿಜೋಗಿಗಳಲ್ಲಿ ಪ್ರಸಾರದಲ್ಲಿರುವ ಪುರಾಣ ಕತೆ**

ಅರ್ಜುನ ಕಾರಣಾಂತರದಿಂದ ಒಮ್ಮೆ ಭೂಪ್ರದಕ್ಷಿಣೆ ಮಾಡಿ ತೀರ್ಥಕ್ಷೇತ್ರಗಳನ್ನು ಸಂದರ್ಶಿಸ ಬೇಕಾಯಿತು. ತನ್ನ ತೀರ್ಥಯಾತ್ರೆಯನ್ನು ಮುಗಿಸಿ ಅರ್ಜುನ ಹಸ್ತಿನಾವತಿಗೆ ಮರುಳುತ್ತಿದ್ದ ಅವನ ಜೊತೆಯಲ್ಲಿ ಒಬ್ಬ ಬಾಲಕನೂ ಇದ್ದ. ಮುಂದೆ ಅನೇಕ ವರ್ಷಗಳು ವನವಾಸದಲ್ಲಿದ್ದ ಅರ್ಜುನನಿಗೆ ತನ್ನ ತಾಯಿಯನ್ನು ನೋಡುವ ಮನಸ್ಸಾಯಿತು. ಈ ಸಂದರ್ಭದಲ್ಲಿ ಅರ್ಜುನ ತಾಯಿಯನ್ನು ಭೇಟಿ ಮಾಡುವಾಗ ಒಂದು ವಿನೋದವನ್ನು ಮಾಡುವ ಮನಸ್ಸಾಯಿತು. ಹಾಗಾಗಿ ಅರ್ಜುನನು ನಾನಾ ವಿಧದ ಬಣ್ಣಬಣ್ಣದ ವಸ್ತ್ರಗಳನ್ನು ಧರಿಸಿ,ತಲೆಗೆ ಮುಂಡಾಸು ಸುತ್ತಿದ ಕೈಯಲ್ಲಿ ಒಂದು ತಂತಿ ವಾದ್ಯ ಹಿಡಿದನು. ತಾಯಿ ಕುಂತಿದೇವಿಯ ಅರಮನೆಯ ಮುಂದೆ ನಿಂತು ಸೊಗಸಾಗಿ ಹಾಡಿ ಕುಣಿದನು. ಅವನ ಹಾಡು ಕೇಳಿದ ತಾಯಿ ಕುಂತಿದೇವಿಗೆ ಪರಮ ಸಂತೋಷವಾಯಿತು. ಮರುಕ್ಷಣವೇ ಅರ್ಜುನನ್ನೇ ಹೋಲುವಂತಿದ್ದ ಅವನನ್ನು ನೋಡಿ ಕಣ್ಣಲ್ಲಿ ನೀರು ತಂದುಕೊಂಡಳು. ಕೊನೆಯಲ್ಲಿ ಜೋಗಿಯ ವೇಷದಲ್ಲಿದ್ದ ಅರ್ಜುನ ತಾನಾರು ಎಂಬುದನ್ನು ಹೇಳಿ ತನ್ನ ತಾಯಿಯನ್ನು ಸಂತೋಷಪಡಿಸಿದನು. ನಂತರ ತಾನು ಧರಿಸಿದ ಈ ವೇಷ, ಬಿರುದು ವಾದ್ಯಗಳನ್ನು ಏನು ಮಾಡಬೇಕೆಂದು ಯೋಚಿಸಿದಾಗ, ಇದುವರೆಗೆ ತನ್ನ ಜೊತೆಯಲ್ಲೇ ಸೇವೆ ಮಾಡಿಕೊಂಡು ಬರುತ್ತಿದ್ದ ಬಾಲಕನೊಬ್ಬನಿಗೆ ಅದನ್ನು ನೀಡಿ, ಅವನಿಗೆ ಪಾಂಡವರ ಕತೆಗಳನ್ನು ಹಾಡಿಕೊಂಡು

ಸಂಚರಿಸುವಂತೆ ಅರ್ಜುನನು ಸೂಚಿಸಿದನು. ಅಂದಿನಿಂದ ನಾವು ಮಹಾಭಾರತದ ಕತೆಯನ್ನು ಹಾಡಿಕೊಂಡು ಬದುಕುತ್ತಿದ್ದೇವೆ ಎಂದು ಹಂಡಿಜೋಗಿಗಳು ವಿವರಿಸುತ್ತಾರೆ.

ನಂತರ ಸಮುದಾಯದಲ್ಲಿ ಅರ್ಜುನನಿಗೆ ದೀಕ್ಷೆಯಾಗಿರುವ ಕುರಿತು ಕತೆಯನ್ನು ವಿವರಿಸುತ್ತಾರೆ. ಅರ್ಜುನ ದೇಶಾಂತರ ಹೋಗಿದ್ದಾಗ ಚಿತ್ರಾಂಗದ ಮತ್ತು ಉಲೂಪಿಯರನ್ನು ಮದುವೆಯಾದ. ನಂತರ ಕೃಷ್ಣನ ತಂಗಿಯಾದ ಸುಭದ್ರೆಯನ್ನು ವಿವಾಹವಾದನು. ಇವರೆಲ್ಲರ ಮನೆಗೂ ಅರ್ಜುನ ಆಗಾಗ ಹೋಗಿಬರುತ್ತಿದ್ದ ಇದರಿಂದ ದ್ರೌಪದಿಗೆ ಅರ್ಜುನನ ಮೇಲೆ ತುಂಬಾ ಕೋಪಗೊಂಡು ಜಗಳವಾಡಿದಳು. ಇದರಿಂದ ಕೋಪಗೊಂಡ ಅರ್ಜುನ ಅವರೆಲ್ಲರನ್ನು ಅರಮನೆಗೆ ಕರೆತಂದನು. ಇದರಿಂದ ದ್ರೌಪದಿಯ ಕೋಪ ಇನ್ನೂ ಅಧಿಕವಾಯಿತು. ಒಂದು ಷರತ್ತಿನ ಮೇಲೆ ಅರ್ಜುನನ್ನು ದ್ರೌಪದಿ ಜೂಜಿಗೆ ಕರೆದಳು. ಪಗಡೆ ಆಟದಲ್ಲಿ ಸೋತವರು ಜೋಗಿ ವೇಷಧರಿಸಿ ದೇಶಾಂತರ ಹೋಗಬೇಕು. ಕೃಷ್ಣನ ಧ್ಯಾನಮಾಡಿ ದ್ರೌಪದಿಯೇ ಗೆದ್ದಳು. ಆಗ ಅರ್ಜುನ ಜೋಗಿ ವೇಷಧರಿಸಿಕೊಂಡು ದೇಶಾಂತರ ಹೊರಟನು.

ಹೀಗೆ ದೇಶಾಂತರ ಹೊರಟ ಅರ್ಜುನ ಇಂದ್ರಕೀಲಕ್ಕೆ ಬಂದು ಅಲ್ಲಿ ಶಿವನನ್ನು ಕುರಿತು ತಪಸ್ಸು ಮಾಡಿದನು. ಶಿವನಿಂದ ಒಳ್ಳೊಳ್ಳೆಯ ಅಸ್ತ್ರಗಳನ್ನು ಪಡೆದನು. ಒಮ್ಮೆ ಅರ್ಜುನ ಬಿಲ್ಲನ್ನು ಹೂಡಿ ಬಾಣದ ತುದಿಗೆ ಒಂದು ಓಲೆಯನ್ನು ಸಿಕ್ಕಿಸಿ ದೇವಲೋಕಕ್ಕೆ ಕಳುಹಿಸಿದನು. ಅರ್ಜುನ ಇಂದ್ರನ ಮಗನಲ್ಲವೇ? ಆದ್ದರಿಂದ ಇಂದ್ರನು ಮಗನ ಕೋರಿಕೆಯಂತೆ 'ಹಿರಣ್ಯರಾಕ್ಷಸಿ' ಎಂಬ ರಾಕ್ಷಸಿಯನ್ನು ಕೊಂದನು. ಅವಳ ರಕ್ತದಿಂದ ಕೊಡಗಾವಿ ಮಾಡಿದ, ಅವಳ ತಲೆಗೂದಲಿಂದ ದಂಡೆ ದಾರವನ್ನು ಮಾಡಿದ. ಅವಳ ಇನ್ನೆರಡು ಕೂದಲಲ್ಲಿ ಕಾಮಾಕ್ಷಿ ಮಾಡಿದ ತೊಡೆಯ ಮೂಳೆಯಲ್ಲಿ ಒಂದು ಗಳುವನ್ನು ಮಾಡಿದ. ಅವಳ ಎರಡು ಎದೆಗಳಲ್ಲಿ ಎರಡು ಬುರುಡೆಗಳನ್ನು ಮಾಡಿದ. ಅವಳ ಮೂಗು ಶೂಲದ ಕಡ್ಡಿಯಾಯಿತು. ಹದಿನಾರು ಹಲ್ಲು ಹದಿನಾರು ಸಾರೆಗಳಾದವು, ಕೈಬೆರಳುಗಳು ಬಿರಡೆಗಳಾದವು. ಬೆನ್ನು ನರಗಳು ತಂತಿಯಾದವು. ಇಂತಹ ಒಂದು ವಾದ್ಯವನ್ನು ದೇವೇಂದ್ರ ಅರ್ಜುನಿಗೆ ಅರ್ಪಿಸಿದನು. ಹೀಗೆ ಕಾಶೀ ಭೈರವನಿಂದ ಅರ್ಜುನ ದೀಕ್ಷೆಯನ್ನು ಪಡೆದು ಜೋಗಿಯಾಗಿ ಹೊರಟನು. ಅರ್ಜುನನ ಕಿನ್ನರಿಯ ನಾದಕ್ಕೆ ಕೋಗಿಲೆಯೂ ತೂಕಡಿಸಿ ಕೆಳಗೆ ಬಿದ್ದಿತು ಎಂದು ವಿವರಿಸುತ್ತಾರೆ.

ಹದಿನಾಲ್ಕು ವರ್ಷಗಳು ವನವಾಸದಲ್ಲಿದ್ದ ಪಾಂಡವರು ತಮ್ಮ ವನವಾಸದ ಸಂದರ್ಭದಲ್ಲಿ ಜೋಗಿಗಳನ್ನು ಕಾಡಿನಲ್ಲಿ ಭೇಟಿ ಮಾಡುತ್ತಾರೆ. ಆಗ ಅವರ ಬಳಿ ಕಿನ್ನರಿ ಇರುವುದಿಲ್ಲ. ಅರ್ಜುನನು ಆಗ ತಾನೆ ಕೊಂದಿದ್ದ ರಾಕ್ಷಸನ ಬುರುಡೆ ಮತ್ತು ನರಗಳನ್ನು ಕಿನ್ನರಿ ಮಾಡಿ ಆ ಜೋಗಿಗಳಿಗೆ ಕಾಣಿಕೆಯಾಗಿ ಕೊಟ್ಟನು. ಅಂದಿನಿಂದ ಜೋಗಿಗಳು ಪಾಂಡವರ ಕತೆ ಹಾಡುವುದನ್ನು ಆರಂಭಿಸಿದರು ಎನ್ನುತ್ತಾರೆ.

ಹನ್ನೆರಡು ವರ್ಷ ಭೂಪ್ರದಕ್ಷಿಣೆ ಹೋಗಿದ್ದ ಅರ್ಜುನನಿಗೆ ಹನ್ನೊಂದನೇ ವರ್ಷದಲ್ಲಿ ತನ್ನ

ತಾಯಿಯನ್ನು ನೋಡುವ ಬಯಕೆಯಾಗುತ್ತದೆ. ಆದರೆ ಆ ಸಂದರ್ಭದಲ್ಲಿ ಯಾರಾದರೂ ತನ್ನನ್ನು ಗುರುತು ಹಚ್ಚಿದರೆ ಪುನಃ ಹನ್ನೆರಡು ವರ್ಷ ಪ್ರದಕ್ಷಿಣೆ ಹೋಗಬೇಕಾಗುತ್ತದೆ. ಅದಕ್ಕಾಗಿ ಋಷಿ ಮುನಿಗಳಲ್ಲಿಗೆ ತೆರಳಿ ತನ್ನ ಇಂಗಿತವನ್ನು ಅರ್ಜುನ ವ್ಯಕ್ತಪಡಿಸುತ್ತಾನೆ. ಋಷಿಮುನಿಗಳ ಅಣತಿಯಂತೆ ರಕ್ಕಸಿಯೊಬ್ಬಳನ್ನು ಕೊಂದು ಅವಳ ದೇಹದ ವಿವಿಧ ಭಾಗಗಳಿಂದ ಕಿನ್ನರಿವಾದ್ಯ ತಯಾರಿಸಿದ. ಕಿನ್ನರಿ ಜೋಗಿವೇಷ ಧರಿಸಿ ತಾಯಿಯನ್ನು ಭೇಟಿ ಮಾಡಿದ. ತನ್ನ ಕಾರ್ಯ ಮುಗಿದನಂತರ ಅವನ ಶಿಷ್ಯನೊಬ್ಬನಿಗೆ ದೀಕ್ಷೆಕೊಟ್ಟು ಕಿನ್ನರಿಯನ್ನು ಅವನ ಕೈಗೆ ನೀಡಿ ಅವನಿಗೆ ಪಾಂಡವರ ಕತೆಗಳನ್ನು ಹಾಡಿಕೊಂಡಿರುವಂತೆ ಸೂಚಿಸಿದನು ಅಂದಿನಿಂದ ಜೋಗಿಗಳು ಪಾಂಡವರ ಕತೆ ಹಾಡುವುದನ್ನು ಪ್ರಾರಂಭಿಸಿದರು ಎಂದು ವಿವರಿಸುತ್ತಾರೆ.

ಒಮ್ಮೆ ದ್ರೌಪದಿಗೆ ತುಂಬಾ ಸಂತೋಷವಾಗಿ ಅರ್ಜುನನ ಜೊತೆ ಪಗಡೆಯಾಟಕ್ಕೆ ಕುಳಿತಳು. ಪಂಥದ ಮೇಲೆ ಆಟ ಆಡಿದರೆ ಸೊಗಸಿರುತ್ತದೆಂದು ಭಾವಿಸಿ ಅರ್ಜುನ ದ್ರೌಪದಿ ಇಬ್ಬರೂ ಪಂಥ ಕಟ್ಟುತ್ತಾರೆ. ದ್ರೌಪದಿ ಸೋತರೆ ಮಣಿಪುರದ ರಾಣಿಯರ ದಾಸಿಯಾಗುವುದಾಗಿಯೂ ಅರ್ಜುನ ಸೋತರೆ ಹನ್ನೆರಡು ವರ್ಷ ಜೋಗಿಯಾಗಿ ದೇಶಾಂತರ ಹೋಗಬೇಕೆಂದು ಪಂಥ ಕಟ್ಟುತ್ತಾರೆ. ಅರ್ಜುನ ಆಟದಲ್ಲಿ ಸೋಲುತ್ತಾನೆ. ಸೋತ ಅರ್ಜುನ ಏಳುತಲೆ ಗುಡ್ಡದ ಕಲ್ಲಿನ ಮಠಕ್ಕೆ ಬಂದು ಅಲ್ಲಿ ಏಳು ಮಂದಿ ಸಿದ್ಧರ ಸೇವೆಯಲ್ಲಿ ತೊಡಗುತ್ತಾನೆ. ಜೊತೆಗೆ ಅವರಲ್ಲಿ ತಾನೂ ಜೋಗಿಯಾಗುವುದಾಗಿ ಕೇಳಿಕೊಳ್ಳುತ್ತಾನೆ. ಅರ್ಜುನನ ಕೋರಿಕೆಯನ್ನು ಮನ್ನಿಸಿದ ಸಿದ್ಧರು ಮಾಳಾವತಿ ದೇಶದ ರಕ್ಕಸಿಯನ್ನು ಕೊಂದು ಅವಳ ದೇಹದಿಂದ ಕಿನ್ನರಿ ಮಾಡಿ ಅರ್ಜುನನಿಗೆ ದೀಕ್ಷೆ ನೀಡಿದರು. ಆ ಅರ್ಜುನನ ಸಂತತಿಗೆ ಸೇರಿದವರೇ ಈ ಕಿನ್ನರಿ ಜೋಗಿಗಳು ಎಂದು ವಿವರಿಸುತ್ತಾರೆ.

ಮೇಲಿನ ಎಲ್ಲಾ ಕತೆಗಳನ್ನು ಗಮನಿಸಿದಾಗ ಹಂಡಿಜೋಗಿಗಳ ಮೂಲವು ಮಹಾಭಾರತ ಅರ್ಜುನನ ಸುತ್ತಲೇ ಸುತ್ತುತ್ತದೆ. ಇಂದಿಗೂ ಜೋಗಿಗಳ ಪ್ರಧಾನ ಹಾಡುಗಳು ಮಹಾಭಾರತದ ಕತೆಗೆ ಸಂಬಂಧಿಸಿದ್ದಾಗಿವೆ. ಇದು ಹಂಡಿಜೋಗಿಗಳ ಮೂಲಕ್ಕೆ ಸಂಬಂಧಿಸಿದ ಪುರಾಣ ಕತೆಯಾಗಿದೆ. ಕರ್ನಾಟಕದಲ್ಲಿ ನೆಲೆಸಿರುವ ಹಂಡಿಜೋಗಿಗಳೆಲ್ಲರೂ ತಮ್ಮ ಸಮುದಾಯದ ಮೂಲವನ್ನು ಅರ್ಜುನನಿಂದಲೇ ಆರಂಭಿಸಿ ಪ್ರತಿಪಾದಿಸುತ್ತಾರೆ.

ಹಂಡಿಜೋಗಿಗಳ ಮೂಲಕ್ಕೆ ಸಂಬಂಧಿಸಿದಂತೆ ಮತ್ತೊಂದು ಪುರಾಣ ಕತೆ ಸಮುದಾಯದಲ್ಲಿ ರೂಢಿಯಲ್ಲಿದೆ. ವಾಸ್ತವವಾಗಿ ಭೈರವನ ಆರಾಧಕರಾದ ಜೋಗಿಗಳು ಶಿವನಿಂದಲೇ ಕಿನ್ನರಿ ಮತ್ತು ಕುಲ ಬಿರುದುಗಳ್ನು ಪಡೆಯಲಾಯಿತು ಎಂದು ವಿವರಿಸುತ್ತಾರೆ. ಇದಕ್ಕೆ ಸಾಕ್ಷಿಯಾಗಿ ಶಿವನ ಆಯುಧವಾದ ತ್ರಿಶೂಲವನ್ನು ಹಂಡಿಜೋಗಿಗಳು ಧರಿಸುತ್ತಾರೆ. ಹಂಡಿಜೋಗಿಗಳ ಪ್ರತಿಯೊಂದು ನೆಲೆಗಳಲ್ಲೂ ತ್ರಿಶೂಲವನ್ನು ನೆಟ್ಟು ಪೂಜಿಸುತ್ತಾರೆ. ಶಿವನಿಗೂ ದೀಕ್ಷೆಯಾಗಿದೆ. ಅವನನ್ನು ಬಿಟ್ಟರೆ ದೀಕ್ಷೆಯಾಗಿರುವುದು ಜೋಗಿಗಳಿಗೆ ಎಂದು ವಿವರಿಸುತ್ತಾರೆ.

ಒಮ್ಮೆ ಶಿವ ಗಂಗೆಯನ್ನು ಮೆಚ್ಚಿಸಲು ಜೋಗಿಯ ವೇಷದಲ್ಲಿ ಹೋದನು. ಗಂಗೆಗೆ ಆ ವೇಷ

ನೋಡಿ ಕೋಪ ಬಂದಿತು. ಆಗ ಶಿವ ತನ್ನ ನಿಜರೂಪವನ್ನು ತೋರಿದ. ಆದರೆ ಶಿವ ಈ ವೇಷವನ್ನು ಉಳಿಸುದಕ್ಕಾಗಿ ತನ್ನ ಬೆವರಿನಿಂದ ಒಬ್ಬ ಜೋಗಿಯನ್ನು ಮಾಡಿದ ಅವನಿಗೆ ಕಿನ್ನರಿಯನ್ನು ನೀಡಿ ಭೂಲೋಕದಲ್ಲಿ ಸಂಚರಿಸು ಎಂದು ಸೂಚಿಸಿದನು ಎಂದು ಶಿವನಿಂದ ಕಿನ್ನರಿ, ಕುಲಬಿರುದುಗಳನ್ನು ಪಡೆದಿರುವುದಾಗಿ ಹಂಡಿಜೋಗಿಗಳು ವಿವರಿಸುತ್ತಾರೆ.

### ೨.೨.೨. ಜನಪದ ಹಿನ್ನೆಲೆ

ಜನಪದರು ಹಂಡಿಜೋಗಿ ಸಮುದಾಯದ ವೃತ್ತಿ ಪರಂಪರೆ ಮತ್ತು ಹಾಡುಗಾರಿಕೆಯನ್ನು ಕುರಿತು ಈ ಕೆಳಗಿನಂತೆ ಹಾಡುವುದನ್ನು ಗುರುತಿಸಬಹುದಾಗಿದೆ. ಅಂತಹ ಜನಪದ ರಚನೆಯನ್ನು ಈ ಕೆಳಗಿನಂತೆ ನೋಡಬಹುದಾಗಿದೆ. ಕಿನ್ನರಿ ನುಡಿಸುವ ವೃತ್ತಿಗಾಯಕ ಹಾಡುಗಾರರ ಚೆಲುವು ಮತ್ತು ಅವರ ಕಿನ್ನರಿ ವಾದ್ಯದ ಸಂಗೀತವನ್ನು ಕುರಿತು ಒಂದು ಜನಪದ ಗೀತೆ ಹೀಗೆ ವರ್ಣಿಸುತ್ತದೆ.

ಚೆಲುವಯ್ಯ ಚೆಲುವೋ ತಾನಿತಂದನ್ನ
ಚಿನ್ಮಯಾ ರೂಪೆ ತಂದನ್ನಿತಾನಾ
ಕೇರಿ ಕೇರಿ ತಿರುಗುತೀಯ
ಭಾರಿ ಕಿನ್ನುಡಿ ನುಡಿಸುತ್ತೀಯ
ನಮ್ಮ ಕೇರಿಗ್ಯಾಕೆ ಬರವಲ್ಲೋ
ನಿಲ್ಲಯ್ಯರಾಜ

ಬೆಟ್ಟದ ಮ್ಯಾಗಳ ಜಲ್ಲೇ ಬಿದಿರು
ಬೇಲಿ ಮ್ಯಾಗಳ ಸೋರೆ ಬುರುಡೆ
ಲೋಲು ಕಿನ್ನುಡಿ ನುಡಿಸೋನ್ಯಾರಯ್ಯೋ
ನಿಲ್ಲಯ್ಯ ರಾಜ

ಚೆಲುವಯ್ಯ ಚೆಲುವೋ ತಾನಿತಂದನ್ನ
ಚಿನ್ಮಯಾ ರೂಪೆ ತಂದನ್ನಿತಾನಾ
ನಮ್ಮ ಕೇರಿಗೆ ಬಂದರಿನ್ನು
ಕರಿಯ ಕಂಬಳಿ ಗದ್ದುಗೆ ಹೂಡಿ
ಗಂಧ ವೀಳ್ಯ ತಂದು ಕೊಡುವೆನೋ
ನಿಲ್ಲಯ್ಯ ರಾಜ

ಚೆಲುವಯ್ಯ ಚೆಲುವೋ ತಾನಿತಂದನ್ನ
ಚಿನ್ಮಯಾ ರೂಪೆ ತಂದನ್ನಿ ತಾನಾ
ಆಗದೋನೆ ಭೋಗದೋನೆ
ನಾಗರ ನಡುಕಟ್ಟಿನೋನೆ

ಕೋಗಿಲ್ವಾಗೆ ಕೂಗುತ್ತೀಯಲ್ಲೋ
ನಿಲ್ಲಯ್ಯರಾಜ

ಎಂಬ ಹಾಡು ಜನಪದ ಸಾಹಿತ್ಯದಲ್ಲೇ ಪ್ರಧಾನವಾದುದಾಗಿದೆ. ಇದು ಜೋಗಿಗಳ ಹಾಡುಗಾರಿಕೆ ಕಲೆಯ ನೈಪುಣ್ಯತೆಯನ್ನು ಕುರಿತು ವರ್ಣಿಸುತ್ತದೆ.

**೨.೩. ಜೋಗಿಗಳು, ನಾಥಯೋಗಿಗಳು ಮತ್ತು ಭೈರವನನ್ನು ಕುರಿತ ಜನಪದ ಅಭಿವ್ಯಕ್ತಿ**

ಜನಪದ ಸಾಹಿತ್ಯದಲ್ಲಿ ನಾಥರ ವೇಷಭೂಷಣ ಮತ್ತು ಅವರ ಯೋಗಿಕ ಜೀವನದ ಬದುಕಿನ ಚಿತ್ರಣವನ್ನು (ತಿರುಗಾಟ, ಉಟೋಪಚಾರ) ಕುರಿತ ವರ್ಣನೆಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ. (ಉಲ್ಲೇಖ: ಕರ್ನಾಟಕದ ನಾಥಪಂಥ-ರಹಮತ್ ತರೀಕೆರೆ, ಪು.ಸಂ. ೨೫೮ ನಾಥ ಸಿದ್ಧರ ಚಿತ್ರಗಳು)

"ಕೈಯಲ್ಲಿ ಪಾತ್ರೆಯ ಕಂಡೆ, ಕಂಕುಳಲ್ಲಿ ಜೋಳಿಗೆ ಕಂಡೆ
ನಾ ಕೊರಳಾಗೆ ಕಂಡೆ ಸಿಂಗನಾಥ
ಸ್ವಾಮಿಗಳ ಕರ್ಣದಲಿ ಕಂಡೆ ಕಾಮಾಕ್ಷಿ
ಕಣ್ಣ ಉಬ್ಬಿನ ನಡುವೆ ಸಣ್ಣವಿಭೂತಿಯು, ಸಣ್ಣ ಸಿಂಗನಾದ
ಕೊರಳಾಗೆ ಸ್ವಾಮಿಗಳ ಕರದಲ್ಲಿ ಅಕ್ಷಯದ ಪಾತ್ರೆಯು
ಹಾಲು ಅನ್ನವು ಚೆಂದ
ಬಾಗಿಲು ಭೈರುವ ಚೆಂದ
ರುದ್ರಾಕ್ಷಿ ಕೊರಳಿಗೆ ಚೆಂದ
ಬುದ್ಯೋರ ಕರ್ಣಕ್ಕೆ ಚೆಂದ ಕಾಮಾಕ್ಷಿ
ಗದ್ದುಗೆಯ ಮೇಲೆ ಕೂತರು ಜೋಗಿದೇವ
ಎದ್ದು ಬಾರಮ್ಮ ಹೆಣ್ಣುಮಗಳೆ ಜೋಗಿದೇವರ
ಮುದ್ದುಪಾದವ ತೊಳೆಯಮ್ಮ
ಬಾಲಬಸವನ ಕಂಡೆ
ಮೇಲೆ ಗುರುಗಳ ಕಂಡೆ
ಮುದಿಯ ಎತ್ತನು ಏರಿ
ಮೈಗೆ ಬೂದಿಯ ಬಳಿದು ವಾರದ ಜೋಗಿ
ಊರಿಗೆ ಬಂದವನೆ
ಭಂಗಿಯ ಜೋಗಿ ಭೈರವ ಬರುತಾನೆಂದು
ನಾ ಮಂಗಳಾರತಿ ಹಿಡಿದಿದ್ದೆ
ಇಂದು ನಮ್ಮನೆಯಲಿ ಜಂಗಮಾಗೆಡೆಯಾದೊ
ಭಂಗಿಯ ರೊಟ್ಟಿ ನೆಲಗಡಲೆ ಭೈರುವ, ನಾಳೆ ನಮ್ಮನೆಗೆ
ಬಿಜಮಾಡು" (ಕರ್ನಾಟಕದ ನಾಥಪಂಥ, ಪು-೨೫೮)

ಎಂದು ಮೇಲಿನ ಹಾಡಿನಲ್ಲಿ ನಾಥಯೋಗಿಯ ವೇಷಭೂಷಣ ಮತ್ತು ಅವನ ಬದುಕಿನ ಚಿತ್ರಣವನ್ನು ವರ್ಣಿಸಿರುವುದು ಕಂಡುಬರುತ್ತದೆ. ಮೇಲಿನ ರಚನೆಯಲ್ಲಿ ನಾಥಯೋಗಿಯನ್ನು ಸ್ವಾಮಿ, ಬುದ್ಯೋರು (ಬುದ್ಧಿಗಳು), ಜೋಗಿದೇವ, ಭೈರುವ, ಜೋಗಿ, ಜೋಗಿಸಿದ್ಧ, ಭಂಗಿ ಸಿದ್ಧ – ಗುರು, ಅರಸು, ಕುಲಸ್ವಾಮಿ, ಜಂಗಮ, ಸಿದ್ಧ, ಶಿವಯೋಗಿ ಎಂದೆಲ್ಲಾ ಕರೆಯಲಾಗಿದೆ. ಇಲ್ಲಿ ಮುಖ್ಯವಾಗಿ ನಾಥ ಯೋಗಿಗಳ ಬಣ್ಣ ಬಣ್ಣದ ವೇಷಭೂಷಣಗಳು, ಕುಲ–ಬಿರುದುಗಳು, ಅವರ ಗುಣಸ್ವಭಾವಗಳ ಕುರಿತ ವರ್ಣನೆಗಳಿವೆ. ಜೋಗಿದೇವನು ಕಾವಿಧಾರಣೆ ಮಾಡಿರುವನು, ವಿಭೂತಿ ಧರಿಸಿರುವನು, ಕೈಯಲ್ಲಿ ನಾಗಬೆತ್ತ, ಅಕ್ಷಯ ಪಾತ್ರೆ, ನಾಗರ ಹೆಡೆ, ತ್ರಿಶೂಲಗಳನ್ನು ಹಿಡಿದಿರುವವನು, ಕಂಕುಳಲ್ಲಿ ಜೋಳಿಗೆ, ಕರ್ಣದಲ್ಲಿ ಕಾಮಾಕ್ಷಿ, ಕೊರಳಲ್ಲಿ ಸಿಂಗನಾದವನ್ನು ಧರಿಸಿರುವನು. ಖಂಡುಗ ಕಿರುಜಡೆ ಬಿಡುವನು. ಕುದುರೆ ಇಲ್ಲವೆ ಮುದಿ ಎತ್ತಿನ ಮೇಲೆ ಬರುವವನು, ಹಾಗೆ ಬಂದವನು ಗುಡಾರ ಹಾಕಿ ಉಳಿಯುವವನು, ಇದು ನಾಥರು ಸರ್ಕೀಟು ಹೊರಡುವ ಕ್ರಮವನ್ನು ವಿವರಿಸುವಂತೆ ಕಾಣುತ್ತದೆ. ಇದರ ಜೊತೆಗೆ ಮತ್ತೊಂದು ವಿಶೇಷವೆಂದರೆ ಜೋಗಿಯು ಮನೆಗೆ ಭಿನ್ನಹಕ್ಕೆಂದು ಬಂದಾಗ ಬಡಿಸುವ ಅಡಿಗೆ ಭಂಗಿಯ ರೊಟ್ಟಿ ಹಾಗೂ ನೆಲೆಗಡಲೆಯಾಗಿರುತ್ತದೆ. ಇಲ್ಲೆಲ್ಲಾ ಹಂಡಿಜೋಗಿಗಳ ಬದುಕಿನ ಚಿತ್ರಣವನ್ನು ಕುರಿತ ವರ್ಣನೆಗಳನ್ನು ಗುರುತಿಸಬಹುದಾಗಿದೆ. ಜೋಗಿಯ ವೇಷಭೂಷಣಗಳೂ ಸಹ ನಾಥರ ಮಾದರಿಯವಾಗಿರುವುದು ಕಂಡುಬರುತ್ತದೆ. ಜೋಗಿಗಳೂ ಸಹ ಭಂಗಿ ಸೇವನೆ ಮಾಡುವುದು ಕಂಡುಬರುತ್ತದೆ.

ನಂತರ ಭೈರವನ ಪ್ರೇಮಕತೆಗಳಲ್ಲಿ ಅವನ ರೂಪ–ಚೆಲವು, ಅಂದ ಚೆಂದವನ್ನು ಕುರಿತ ವರ್ಣನೆಗಳನ್ನು ಕಾಣಬಹುದಾಗಿದೆ. ಅಂತಹ ವರ್ಣರಂಜಿತವಾದ ಭೈರವನ ಪ್ರೇಮ ಕತೆಯನ್ನು ಜನಪದರು ತುಂಬಾ ವರ್ಣರಂಜಿತವಾಗಿ ವರ್ಣಿಸಿರುವುದನ್ನು ಗುರುತಿಸಬಹುದಾಗಿದೆ.

ಇಲ್ಲಿನ ಭೈರವ ಧೂತನನ್ನು ಕೊಲ್ಲುವಂತಹ ಉಗ್ರ ಸಾಹಸಿಯಲ್ಲ, ಬದಲಾಗಿ ಸೌಂದರ್ಯರಾಧಕ. ಅವನ ವರ್ಣನೆಯನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

"ಬಾಳೆಯ ತ್ವಾಟದಲಿ ಬಾಗುವತರ ಕೊಳುದಲ್ಲಿ
ಬಾಗಿ ಜೋತುರವ ಒಗೆಯುವವನು
ಸಂಪಿಗೆ ಹೂವ ವನಮಾಲೆ ಮುಡಿದವನು
ಹೂ ಕಂಡು ಜಡೆಯ ಮರೆಯುವವನು (ಇಲ್ಲಿ ಹೂವಿಗೆ ಆಕರ್ಷಿತನಾಗುವುದು ಎಂದರೆ ಹೆಣ್ಣಿಗೆ ಒಲಿಯುವುದು ಎಂದರ್ಥ)
ಬಾಲೆಯರಲ್ಲಿ ಬೆರಗು ಹುಟ್ಟಿಸುವವನು
ಮಡದಿಗೆ ಪರುಸೆಯಲ್ಲಿ ಅವಳು ಬಯಸಿದ್ದನ್ನು ಕೊಡಿಸುವವನು
ಅವಳ ಜತೆ ಸರಸವಾಡಿ ಬಳೆ ಒಡೆಯುವವನು
ವಿವಾಹಿತ ಮಹಿಳೆಯರನ್ನು ಒಲೆಸಿಕೊಳ್ಳುವವನು
ಒಟ್ಟಿನಲ್ಲಿ ಅವನೊಬ್ಬ ಚೆಲವು ರಸಿಕತೆಯ ಒಬ್ಬ ಹಳ್ಳಿಯ ಯುವಕನಂತೆ

ಕಿನ್ನೂರಿಯ ಜಾಣ, ನನ್ನ ಕೇರಿಗೆ ಬಾರೋ ಎಂದೂ

ಮೊಗ್ಗಾಗಿ ಬಾರೋ ತುರುಬೀಗಿ" (ಕರ್ನಾಟಕದ ನಾಥಪಂಥ, ಪು-೨೫೯) ಎಂದು ಅವನನ್ನು ಕರೆಯುವ ತರುಣಿಯರು

ಜಾತ್ರೆಯಲ್ಲಿ ಅರಸು (ಜೋಗಿದೇವ) ಬರುತಾನೆಂಬ ಸಂಭ್ರಮದಲ್ಲಿ ತನ್ನ ಗಂಡನನ್ನು ಕಳೆದುಕೊಂಡ ಹೆಣ್ಣು,

ಅವನ ಕುಣಿತಕ್ಕೆ ಬೆರಗಾಗಿ, ತನ್ನ ಕೂಸನ್ನೇ ತರಕಾರಿಯ ಜೊತೆ ಹಚ್ಚಿದ ತಾಯಿ, ಒಟ್ಟಾರೆ ಭೈರವ ಅಥವಾ ಜೋಗಿಯು ಸ್ತ್ರೀಯರ ಪಾಲಿಗೆ ಒಬ್ಬ ಮಾಯಾಕಾರನಾಗಿ ಕಾಡುವುದನ್ನು ವರ್ಣಿಸಲಾಗಿದೆ.

**ಭೈರವನ ಎರಡು ಪ್ರೇಮ ಕತೆಗಳು**

* ಭೈರವ ಲಕ್ಷ್ಮೀದೇವಿಯ ಪ್ರೇಮ ಕತೆ

* ಭೈರವ ಮಾಳವ್ವರ ಪ್ರೇಮ ಕತೆ

"ಬ್ರಹ್ಮಹತ್ಯೆ ದೋಷವನ್ನು ಕಳೆದುಕೊಳ್ಳಬೇಕು ಎಂದು ಭೈರವನು ಭೂಮಿಗೆ ಬಂದಾಗ ಮೊದಲು ಕಂಡಿದ್ದು ಚುಂಚನ ಗಿರಿಯಬೆಟ್ಟ. ಅವನು ಅಲ್ಲಿ ಉರಿಗದ್ದುಗೆಯ ಮೇಲೆ ಕೂತಾಗ ಒಂಭತ್ತು ಬೆವರಿನ ಹನಿಗಳು ಮೂಡಿ ಅವುಗಳಿಂದ ೯ ಮೀನುಗಳು ಹುಟ್ಟಿ ಅವರೇ ನವನಾಥರಾಗುತ್ತಾರೆ.

೧. ಆದಿನಾಥ, ೨. ಮತ್ಸ್ಯೇಂದ್ರನಾಥ, ೩. ಗೋರಕ್ಷನಾಥ, ೪. ಚೌರಂಗೀನಾಥ, ೫. ಜಾಲಂಧರನಾಥ, ೬. ಚರ್ಪಟನಾಥ, ೭. ಗೌರಾಯಿ, ೮. ಗಂಗಾದೇವಿ, ೯. ಮುಕ್ತಾಯಿ ಅಥವಾ ಮಿಠಾಯಿ ನಂತರ ಭೈರವನು ಭಂಗಿ ಸೇದುತ್ತ ಕಿನ್ನುರಿ ನುಡಿಸುತ್ತ ವಿಶ್ರಾಂತಿ ತೆಗೆದುಕೊಳ್ಳುತ್ತಾನೆ. ಅವನು ಬಿಟ್ಟ ಭಂಗಿಯ ಹೊಗೆ ಕಾರ್ಮೋಡದಂತೆ ಆಗಸವನ್ನು ತುಂಬಿಕೊಳ್ಳುತ್ತದೆ. ಆ ಹೊತ್ತಿಗೆ ಆ ದಾರಿಯಲ್ಲಿ ಬಂದ ಲಕ್ಷ್ಮೀದೇವಿಗೆ ಭಂಗಿ ಹೊಗೆ ಸೇವಿಸಿದ ಕಾರಣ ಗರ್ಭಧಾರಣೆಯಾಗುತ್ತದೆ. ಅವಳು ಮನೆಗೆ ಬಂದು ಮದುಮಗಳಂತೆ ಸಿಂಗರಿಸಿಕೊಂಡು ತನ್ನನ್ನು ವರಿಸಬೇಕೆಂದು ಹೋಗಿ ಭೈರವನನ್ನು ಕೇಳುತ್ತಾಳೆ. ಆಗ ಭೈರವ ನಿರಾಕರಿಸುತ್ತಾನೆ. ಆಗ ಆಕೆಯ ಸೋದರ ಚುಂಚನು ಸಾರಂಗದ ರೂಪದಲ್ಲಿ ಭೈರವನ ಮೇಲೆ ಏರಿ ಹೋಗುತ್ತಾನೆ. ಆದರೆ ಚುಂಚನು ಕೈಗಂಟಿನ ಕಪಾಲದಿಂದ ನೋವುಣ್ಣುತ್ತಿರುವ ಭೈರವನನ್ನು ಕಂಡು ನಾಯಿಯಾಗಿ ನೆಕ್ಕಿ ಅದರಿಂದ ವಿಮೋಚನೆ ಮಾಡಿಸುತ್ತಾನೆ. (ನಾಯಿ-ಭೈರವನ ವಾಹನ) ಭೈರವನು ಪ್ರಸನ್ನನಾದಾಗ ತನ್ನ ತಂಗಿಯನ್ನು ಲಗ್ನವಾಗಬೇಕೆಂದೂ, ಚುಂಚನಗಿರಿಯಲ್ಲೇ ನೆಲೆಸಿ ತನ್ನನ್ನು ವಾಹನವನ್ನಾಗಿ ಮಾಡಿಕೊಳ್ಳಬೇಕೆಂದು ಬೇಡುತ್ತಾನೆ. ಭೈರವ ಒಪ್ಪಿಕೊಂಡು ಲಕ್ಷ್ಮಿಯ ಜೊತೆ ಸಂಸಾರ ಆರಂಭಿಸುತ್ತಾನೆ. ಅವರಿಗೆ ಮಂಟೇಸ್ವಾಮಿ, ಮಲೆಮಾದೇಶ್ವರ ಮುಂತಾದ ೫ ಮಕ್ಕಳು ಹುಟ್ಟುವರು." (ಕರ್ನಾಟಕದ ನಾಥಪಂಥ, ಪು-೨೫೯-೨೬೦) ಇದು ಲಕ್ಷ್ಮೀ ಮತ್ತು ಭೈರವನ ಪ್ರೇಮ ಕತೆ.

* ಭೈರವ–ಮಾಳವ್ವರ ಪ್ರೇಮಕತೆ

"ಎರಡನೇ ಘಟ್ಟದಲ್ಲಿ ಭೈರವನ ಪ್ರೇಮ ಸಾಹಸ ಹಾಗೂ ಸಾಂಸಾರಿಕ ಕಷ್ಟಗಳ ಕತೆ ಆರಂಭವಾಗುತ್ತದೆ. ಒಮ್ಮೆ ಭೈರವನು ಲಕ್ಷ್ಮಿಯ ಸರಸದಲ್ಲಿರುವಾಗ, ಅವಳಕ್ಕ ಮಾಳಮ್ಮನ ಮಾತು ಬರುತ್ತದೆ. ನನ್ನಕ್ಕನನ್ನು ಪಗಡೆಯಾಟದಲ್ಲಿ ಸೋಲಿಸುವವರೆ ಇಲ್ಲ ಎಂದು ಲಕ್ಷ್ಮೀ ಹೇಳುತ್ತಾಳೆ. ಭೈರವನು ಇದನ್ನು ಸವಾಲಾಗಿ ಸ್ವೀಕರಿಸಿ ಅವಳನ್ನು ಗೆಲ್ಲಲು ಹೊರಡುತ್ತಾನೆ. ಮಾಳಮ್ಮನ ಮುಂದೆ ಬಂದು ಕಿನ್ನೂರಿ ನುಡಿಸುತ್ತಾನೆ, ಸಿಂಗನಾದ ನುಡಿಸುತ್ತಾನೆ. ಚುಂಚನಗಿರಿಯ ತನಕ ಸಂಪಿಗೆ ಹೂವು ಕೊಡಿಸುವ ಆಮಿಷ ಒಡ್ಡುತ್ತಾನೆ. ಭೈರವನು ಹೆಣ್ಣನ್ನು ಒಲಿಸಿಕೊಳ್ಳಲು ಮಾಡುವ ನಾನಾ ಬಗೆಯ ಯತ್ನಗಳನ್ನು ಕಾವ್ಯ ವರ್ಣಿಸುತ್ತದೆ. ತನ್ನ ಯತ್ನಗಳು ಫಲಕೊಡದಾಗ ಭೈರವನು ಭಂಗಿ ಹೊಗೆಯನ್ನು ಬಿಟ್ಟು ಅವಳನ್ನು ಹೊತ್ತುಕೊಂಡು ಬರುತ್ತಾನೆ. ಮನೆಗೆ ಬಂದರೆ ಲಕ್ಷ್ಮಿದೇವಿ ಬಾಗಿಲು ತೆಗೆಯುವುದಿಲ್ಲ.

ಸೂಳೆ ಮಾಳಮ್ಮ ಒಡಗೊಂಡು ಭೈರವ, ನೀನು ರಾಜಬೀದಿಲಿ ಬರಬಹುದೇ? ಎಂದು ಪ್ರಶ್ನಿಸುತ್ತಾಳೆ. ಅಪಮಾನಿತಳಾದ ಮಾಳಮ್ಮ ಮುನಿಸಿಕೊಂಡು ಹೊರಡುತ್ತಾಳೆ." (ಕರ್ನಾಟಕದ ನಾಥಪಂಥ, ಪು–೨೬೦) ಅವಳು ಹೋಗದಂತೆ ಭೈರವ ಶಾಪಕೊಟ್ಟು ಕಲ್ಲು ಮಾಡುತ್ತಾನೆ. ಭೈರವ ಹಾಗೂ ಮಾಳವ್ವನ ಈ ಪ್ರೇಮ ಪ್ರಕರಣವು ಶಿವ ಹಾಗೂ ಗಂಗೆಯ ಪ್ರೇಮ ಪ್ರಸಂಗಗಳನ್ನು ನೆನಪಿಸುತ್ತದೆ.

"ನಾಥರ ಮಠವನ್ನು ಬಾರಾಹ್‌ಪಂಥದವರು ಗೋರಖನಾಥ, ಮಚ್ಚೇಂದ್ರನಾಥರ ಹೆಸರಲ್ಲಿ ಅಖಾಡ, ಮಠ, ಧುನಾ ಎಂದು ಕರೆದರೆ, ಸ್ಥಳೀಯ ಪರಿಸರದಲ್ಲಿನ ಜನರು ನಾಥರ ಮಠವನ್ನು ಜೋಗಿಮಠ, ಭೈರವನ ಮಠ, ಸನ್ಯಾಸಿ ಮಠ, ಸಿದ್ದರ ಮಠ, ಚಿತ್ತಾರದ ಮಠ, ಬೋರಯ್ನಮಠ ಮನೆ ಎಂದೆಲ್ಲಾ ಕರೆಯುವುದು ಕಂಡುಬರುತ್ತದೆ.

ಮುದ್ದೀಯ ತಿಂಬಾರು, ಸಿದ್ದೀಯ ಮಾಡ್ಯಾರು
ಎದ್ದೇ ಕಿನ್ನೂರಿಯ ನುಡಿಸ್ಯಾರು
ಅಯ್‌ದಾರೆ ಸ್ವಾಮಿ ಬೋರಯ್ನ ಮಟದಾಗೆ
ಮ್ಯಾಗೆ ಇರುವುದು ಜೋಗಿಯ ಮಠಕಾಣೆ,
ಜೋಗಿ ಲಿಂಗ್ಯೆಗೆ ಮಠಮನೆ ಒಳಗಿರುವ
ನಾಗರ ಹೆಡೆ ತ್ರಿಶೂಲ
ಹಾದೀಲಿ ಇರುವುದು ಜೋಗೀಯ ಮಠಕಾಣೆ
ಗಾಜಿನ ಉಪ್ಪರಿಗೆಯ ಗರುತೀಯ
ನಾಟಕಶಾಲೆ ಸ್ವಾಮಿ ಸನ್ಯಾಸಿ ಮಠಕಾಣೆ
ರುದ್ರಾಕ್ಷಿವನವು ಸಿದ್ದಸಿಂಹಾಸನವು
ಮುದ್ದು ಭೈರವನ ನೆಲೆವಾಸ ಮಠದಲ್ಲಿ

ಗುರು ಶಿಷ್ಯರೊಂದಾಗಿ ಇಹರಂತೆ
ಸಿದ್ದರ ಮಠದಲ್ಲಿ ಸಿದ್ದ ಸಿಂಹಾಸನವು
ಬುದ್ಯೋರು ಕೂತವರೆ ಗದುಗೇಲಿ ಪಾದಕೆ
ಬಿಲ್ವ ಪತ್ರೆಯನಿಟ್ಟು ಶರಣೆನ್ನಿ" (ಕರ್ನಾಟಕದ ನಾಥಪಂಥ, ಪು-೨೫೫)

ಎಂದು ಮೊದಲನೆಯ ಭಾಗದಲ್ಲಿ ನುಂಕೆಮಲೆಯ ಮಠವನ್ನು, ಉಳಿದವು ಚುಂಚನಗಿರಿಯ ಮಠ ಕುರಿತ ವರ್ಣನೆಗಳಾಗಿವೆ. ಮಠದಲ್ಲಿನ ಉರಿಗದ್ದುಗೆ ಅಥವಾ ಸಿದ್ದಸಿಂಹಾಸನದ ಚಿತ್ರಣವನ್ನು ಕುರಿತು ವರ್ಣಿಸಲಾಗಿದೆ.

ನಂತರ ನಾಥಮಠದ ಪ್ರತಿನಿಧಿಗಳಾಗಿರುವ ಜೋಗಿಗಳ ಚಿತ್ರಗಳು, ಬೇರೆ ಬೇರೆ ಜನಪದ ಕಾವ್ಯಗಳಲ್ಲಿ ಅನೇಕ ವಿಧದಲ್ಲಿ ಕಂಡುಬರುತ್ತಾರೆ. ಅರ್ಜುನನ ವೇಷವು ಜೋಗಿಯ ವೇಷವೇ ಆಗಿದೆ. ಜೊತೆಗೆ ಭೈರವ, ನಾಥಜೋಗಿ, ಜೋಗಿಗಳು ಈ ಮೂವರು ಒಂದರೊಳಗೊಂದು ಬೆರೆಯುವವರಾದರೂ ನಾಥರು ಮತ್ತು ಜೋಗಿಗಳ ನಡುವೆ ಕೆಲವು ಸೂಕ್ಷ್ಮ ಭಿನ್ನತೆಗಳಿರುವುದು ಕಂಡುಬರುತ್ತದೆ. ಉದಾ.

ಜೋಗಿಗಳು ಭಿಕ್ಷೆ ಬೇಡುತ್ತಾ,
ಕಿನ್ನೂರಿ ನುಡಿಸುತ್ತಾ
ಹಾಡುಗಳನ್ನು ಹಾಡುತ್ತಾ
ನರ್ತನವನ್ನು ಮಾಡುತ್ತಾ
ಊರುಊರು ತಿರುಗುತ್ತಾರೆ. ಆದರೆ ನಾಥರು ಹೀಗೆ ಮಾಡುವುದಿಲ್ಲ.

"ಜೋಗಿಗಳ ವರ್ಣನೆಗಳಲ್ಲಿ ಭಕ್ತಿಗಿಂತ ಹೆಚ್ಚು ಆಪ್ತತೆ, ತಮಾಷೆ (ಹಾಸ್ಯ) ಪ್ರಕಟವಾಗುತ್ತದೆ. ಜೋಗಿ ಮುನಿಸಿಕೊಂಡ ಮಗುವಿನಂತೆ ಹಠ ಮಾಡುತ್ತಾನೆ. ಸ್ತ್ರೀಯರು ಅವನನ್ನು ರಮಿಸುತ್ತಾರೆ. ಅಂತಹ ಒಂದು ವರ್ಣನೆಯನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ಸುಣ್ಣಾದ ಗ್ವಾಡೀಗೆ ಬಂದು ನಿಂತಿರುವೋರೆ
ಕಿನ್ನೂರಿ ನಾದ ಸರವೋರು
ಬೋರುವಯ್ಯಾ ಸಿನ್ನಾಟ ಬ್ಯಾಡ ಹಿಡೀ ಜೋಗಿ (ಬೋರೇದೇವರಕಾವ್ಯ)
ದೊಡ್ಡ ದೊಡ್ಡ ಜೋಗಿ ದೊಡ್ಡ ಪಾತುರೆ ಜೋಗಿ ದೊಡ್ಡ
ಮೊರದಲ್ಲಿ ಅಕ್ಕಿ ಪಡಿ ತಂದಿರುವೆ,
ಜಿದ್ದು ಮಾಡಬೇಡ ಹಿಡಿಜೋಗಿ" (ಕರ್ನಾಟಕದ ನಾಥಪಂಥ, ಪು-೨೬೪)

ಎಂದು ಜೋಗಿಯ ಜೊತೆ ಸ್ಥಳೀಯ ಪರಿಸರದಲ್ಲಿನ ಜನತೆಯ ಆಪ್ತಸಂಬಂಧದಿಂದ ಹೇಳುವುದನ್ನು ಇಂದಿಗೂ ಕೆಲವು ಭಾಗಗಳಲ್ಲಿ ಗುರುತಿಸಬಹುದಾಗಿದೆ. ಈಗಲೂ ಜೋಗಿಗಳು ಕಲಾ ಪ್ರದರ್ಶನದ ಸಮಯದಲ್ಲಿ ಊರಾಡಲು ಬಂದಾಗ ಜೋಗಿಗಳು ದವಸ ಧಾನ್ಯಗಳನ್ನು ಉಡುಗೊರೆ ಪಡೆಯುವಾಗ ಹೀಗೆಯೇ ಹಠ ಹಿಡಿಯುವುದು ಕಂಡುಬರುತ್ತದೆ.

ಹೀಗೆ ಜನಪದರು ನಾಥರು ಮತ್ತು ಜೋಗಿಗಳು, ಹಾಗೂ ಭೈರವ ಮೂರು ಜನರನ್ನು ಕುರಿತು ತಮ್ಮ ಸಾಹಿತ್ಯದಲ್ಲಿ ವರ್ಣನೆ ಮಾಡಿರುವುದು ಕಂಡುಬರುತ್ತದೆ. ಜನಪದರು ಭೈರವನನ್ನು ಆಪ್ತತೆಯಿಂದ ಸ್ಮರಿಸಿರುವುದನ್ನು ಗುರುತಿಸಬಹುದಾಗಿದೆ. ಇವರು ಭೈರವನನ್ನು ಭಕ್ತಿಯಿಂದ ನಾಥ ಭೈರವ, ಸಿದ್ದ ಭೈರವ, ಮುದ್ದು ಭೈರವ ಎಂದೆಲ್ಲಾ ಕರೆದಿರುವ ವರ್ಣನೆಗಳನ್ನು ಗುರುತಿಸಬಹುದಾಗಿದೆ. ಜೊತೆಗೆ ನಾಥರ ಭಂಗಿ ಸೇವನೆಯನ್ನು ಕುರಿತು ಜನಪದ ಕಾವ್ಯಗಳಲ್ಲಿ ಈ ಕೆಳಗಿನಂತೆ ವರ್ಣಿಸಿರುವುದು ಕಂಡುಬರುತ್ತದೆ.

ನಾಥರ ಆಚರಣೆಗಳಲ್ಲಿ ಭಂಗಿಗೆ ಮೊದಲಿನಿಂದಲೂ ಮಹತ್ವದ ಸ್ಥಾನವನ್ನು ನೀಡಲಾಗಿದೆ. ಭಂಗಿ ಹಾಕಿ ಮಾಡಿದ ರೊಟ್ಟಿಯನ್ನು ನಾಥ ಯೋಗಿಗಳಿಗೆ ಮತ್ತು ಭೈರವನಿಗೆ ಎಡೆಕೊಡುವ ಪದ್ಧತಿ ಮೊದಲು ಚುಂಚನಗಿರಿಯಲ್ಲಿದ್ದುದನ್ನು ಗುರುತಿಸಬಹುದಾಗಿದೆ. ಈಗಲೂ ಸಿದ್ಧರ ಮಠಕ್ಕೆ ಹೋದಾಗ ಭಕ್ತರು ತಾವೂ ಬೆಳೆದ ಇಲ್ಲವೆ ಕೊಂಡು ತಂದ ಭಂಗಿಯನ್ನು ಕಾಣಿಕೆಯಾಗಿ ಅರ್ಪಿಸುವ ಪದ್ದತಿ ಕಂಡುಬರುತ್ತದೆ. (ಪು.ಸಂ. ೧೧೫)

> ವದ್ದೀಕೆರೀಲಿಂದಾ ಸಿದ್ಧರು ಬಂದೈದಾರೆ
> ಹೆಜ್ಜೆಜ್ಜಿಗೆ ಭಂಗಿ ಕಿಡಿ, ಭಂಗೀ ಕುಡುವೋರೆ
> ಸಿದ್ಧಾರೆಂಬೋರು ಇವರೇನೇ । ಸೋಬಾನವೇ।
> ಹೇಮಾವತಿಯಿಂದ ಜೋಗೇರು ಬಂದೈದಾರೆ,
> ಜಾವಜಾವಕ್ಕೆ ಕಿಡೀ ಭಂಗೀ ಕುಡುವೋರೆ
> ಜೋಗ್ತೇರೆಂಬೋರು ಇವರೇನೇ । ಸೋಬಾನವೇ।

ಹೀಗೆ ನಾಥರು ಮತ್ತು ಜೋಗಿಗಳ ಭಂಗಿ ಸೇವನೆಯ ವರ್ಣನೆಗಳಿರುವುದು ಕಂಡುಬರುತ್ತದೆ. ಜೊತೆಗೆ ಜನಪದರು ಜೋಗಿಗಳ ವೃತ್ತಿ ಹಾಗೂ ನಾಥ ಯೋಗಿಗಳ ಬದುಕಿನ ಚಿತ್ರಣವನ್ನು ಕುರಿತು ಈ ಮೇಲಿನಂತೆ ಅಭಿವ್ಯಕ್ತಿಸಿರುವುದನ್ನು ಗುರುತಿಸಬಹುದಾಗಿದೆ. ನಾಥರು ಹಾಗೂ ಜೋಗಿಗಳ ಕೆಲವು ಆಚರಣೆಗಳಲ್ಲಿ ಸಾಮ್ಯತೆ ಇದ್ದು, ಇನ್ನು ಕೆಲವು ಆಚರಣೆಗಳಲ್ಲಿ ಭಿನ್ನತೆ ಇರುವುದು ಮೇಲಿನ ಅಭಿವ್ಯಕ್ತಿಗಳಿಂದ ಗುರುತಿಸಬಹುದಾಗಿದೆ. ಜೊತೆಗೆ ಜನಪದರು ಭೈರವ ಹಾಗೂ ನಾಥ, ಸಿದ್ಧ, ಜೋಗಿಗಳ ಜೀವನಕ್ರಮವನ್ನು ಒಂದರೊಳಗೊಂದು ಚಿತ್ರಿಸಿರುವುದನ್ನು ಗುರುತಿಸಬಹುದಾಗಿದೆ.



# ಅಧ್ಯಾಯ ಮೂರು

## ಹಂಡಿಜೋಗಿಗಳ ಬದುಕು ಮತ್ತು ಭಾಷೆ

೩.೧ ಹಂಡಿಜೋಗಿಗಳ ವೃತ್ತಿ ಪರಂಪರೆ

೩.೨ ಹಾಡುಗಾರಿಕೆಯಲ್ಲಿನ ಸಾಹಿತ್ಯ ಮತ್ತು ಭಾಷೆ

೩.೨.೧ ಮಹಾಭಾರತದ ಕತೆ

೩.೨.೨ ಅರ್ಜುನ ಜೋಗಿಯರ ಹಾಡು

೩.೨.೩ ಕಿನ್ನರಿ ಮೇಳ

೩.೨.೪ ಲಾವಣಿ ಹಾಡುಗಳು

೩.೩ ಹಂಡಿಜೋಗಿ ಸಮುದಾಯದ ಸಾಂಸ್ಕೃತಿಕ ನಾಯಕರು

೩.೪ ಹಂಡಿಜೋಗಿಗಳ ಅಲೆಮಾರಿ ಜೀವನಕ್ರಮ

೩.೫ ಸಮುದಾಯದ ಉಪ ಕುಲಕಸುಬುಗಳು

೩.೬ ಹಂಡಿಜೋಗಿಗಳ ಶಿಕಾರಿ ಪರಂಪರೆ

೩.೭ ಒಳಾಡಳಿತ ವ್ಯವಸ್ಥೆ (ನ್ಯಾಯಪಂಚಾಯ್ತಿ)

## ಅಧ್ಯಾಯ: ಮೂರು

# ಹಂಡಿಜೋಗಿಗಳ ಬದುಕು ಮತ್ತು ಭಾಷೆ

ಕರ್ನಾಟಕದ ವೃತ್ತಿಗಾಯಕ ಪರಂಪರೆಯಲ್ಲಿ ಅತ್ಯಂತ ಮುಖ್ಯವಾದ ಗಾಯಕ ಜನವರ್ಗವೆಂದರೆ ಹಂಡಿಜೋಗಿಗಳು. ಇವರು ಸಮುದಾಯದ ಮೂಲವೃತ್ತಿಯಾದ ಹಾಡುಗಾರಿಕೆಯನ್ನೇ ಅವಲಂಬಿಸಿ ಜೀವಿಸುತ್ತಿದ್ದಾರೆ. ಕಿನ್ನರಿ ವಾದ್ಯವನ್ನು ನುಡಿಸುತ್ತ ಮಹಾಭಾರತದ ವಿವಿಧ ಪರ್ವಗಳನ್ನು ತಮ್ಮದೇ ಮಟ್ಟುಗಳಲ್ಲಿ ಅನೇಕ ರಾತ್ರಿಗಳವರೆಗೆ ಹಾಡುತ್ತಾರೆ. ಇದರ ಜೊತೆಗೆ ಶಿವ-ಪಾರ್ವತಿ ಭೈರವ-ಮಾಳವ್ವರ ಕಥೆಗಳನ್ನು ಹಾಡುತ್ತಾರೆ. ಇವುಗಳಲ್ಲಿ ಅರ್ಜುನನಿಗೆ ಸಂಬಂಧಿಸಿದ ಹಾಡುಗಳು ಪ್ರಧಾನವಾದವುಗಳಾಗಿವೆ. ಇವುಗಳಲ್ಲದೆ ಸುಧೀರ್ಘ ರಚನೆಯ ಕೆಲವು ರಮ್ಯ, ಅದ್ಭುತ, ವಾಸ್ತವಿಕ, ಅತಿಮಾನುಷ ಹಾಗೂ ವಿಡಂಬನೆಯಿಂದ ಕೂಡಿದ ಹಾಡುಗಳನ್ನು ಹಾಡುತ್ತಾರೆ. ಪ್ರಾಚೀನ ಜನಪದ ರಾಜ-ರಾಣಿಯರನ್ನು ಕುರಿತಾಗಿ ಕಥೆಗಳನ್ನು ಹಾಡುತ್ತಾರೆ.

ಕಥನಾತ್ಮಕ ಹಾಡುಗಳ ಹಾಡುಗಾರಿಕೆಯನ್ನೇ ವೃತ್ತಿಯಾಗಿಯುಳ್ಳ ಇವರು ಕೆಲವೊಮ್ಮೆ ಒಬ್ಬನೇ ಗಾಯಕ ಹಾಡುತ್ತಾನೆ. ಒಮ್ಮೊಮ್ಮೆ ಹಿಮ್ಮೇಳನದವರನ್ನು ಜೊತೆಮಾಡಿಕೊಂಡು ಒಂದು ಗಾಯನ ಮೇಳವನ್ನೇ ಸಂಘಟಿಸುತ್ತಾರೆ. ತಲೆಮಾರಿನಿಂದ ತಲೆಮಾರಿಗೆ ಗುರು ಹಾಗೂ ಸಮುದಾಯದ ಹಿರಿಯ ವ್ಯಕ್ತಿಗಳ ಮುಖೇನ ಹಾಡುಗಾರಿಕೆ ವೃತ್ತಿಯನ್ನು ಸಂರಕ್ಷಿಸಿಕೊಂಡು ಬಂದಿದ್ದಾರೆ. ಸಮುದಾಯದ ಪರಂಪರೆಗೆ ತಕ್ಕಂತೆ ಲಾಂಛನ, ವೇಷಭೂಷಣ, ವಾದ್ಯ ವಿಶೇಷಗಳನ್ನು ಬಳಸುವುದು ಒಂದು ಸಂಪ್ರದಾಯವಾಗಿ ಇಂದಿಗೂ ಉಳಿದುಬಂದಿದೆ. ಇಲ್ಲಿನ ಕಥಾವಸ್ತುವಿನ ನಿರೂಪಣೆ, ವಸ್ತು ವಿಷಯ ಶಿಷ್ಟಕಾವ್ಯಕ್ಕಿಂತ ಭಿನ್ನವಾದುದಾಗಿದೆ. ಮೌಖಿಕ ಪರಂಪರೆಯಲ್ಲಿ ಉಳಿದುಕೊಂಡಿರುವ ಇವರ ಕಥಾವಸ್ತು ನಿರೂಪಣೆ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನತೆಯಿಂದ ಕೂಡಿರುತ್ತದೆ. ಇವರು ಹಾಡುವ ಎಲ್ಲಾ ರಚನೆಗಳೂ ಸಹ ಕಥನಗಳೇ ಆಗಿವೆ. ದೀರ್ಘವಾದ ಕಥನ ಕಾವ್ಯಗಳನ್ನು ಹಾಡಬಲ್ಲವರಾದ ಇವರು ತಮ್ಮದೇ ಆದ ಒಂದು ಕಾವ್ಯ ಸಂಪ್ರದಾಯವನ್ನು ಪೋಷಿಸಿಕೊಂಡು ಬಂದಿದ್ದಾರೆ. ಹಂಡಿಜೋಗಿಗಳು ತಾವು ಆರಾಧಿಸುವ ದೈವದ ಮಹಿಮೆಯನ್ನು ಕುರಿತು ಕಥೆಗಳನ್ನು ಹಾಡುತ್ತಾರೆ. ತಮ್ಮ ವೃತ್ತಿಗೆ ಸಂಬಂಧಿಸಿದ ವಾದ್ಯಗಳನ್ನು ದೈವದ ಪ್ರತೀಕವೆಂದು ಭಾವಿಸಿ ಪೂಜಿಸುತ್ತಾರೆ.

## ೩.೧. ಹಂಡಿಜೋಗಿಗಳ ವೃತ್ತಿ ಪರಂಪರೆ

ಮೂಲತಃ ಗಾಯಕರಾದ ಇವರು ಹಾಡುಗಾರಿಕೆಯನ್ನೇ ತಮ್ಮ ಸಮುದಾಯದ ಮೂಲವೃತ್ತಿಯನ್ನಾಗಿಸಿಕೊಂಡಿದ್ದಾರೆ. ಅಲೆಮಾರಿಗಳಾದ ಇವರು ಹಾಡುಗಳನ್ನು ಹಾಡುತ್ತಾ ಯಾವೊತ್ತೂ ಊರುಗಳ ಮೇಲೆ ಸದಾ ಸಂಚರಿಸುತ್ತಿರುವುದನ್ನು ಕಾಣಬಹುದಾಗಿದೆ. ಇವರು ಇಂದು ಶಾಶ್ವತ ನೆಲೆಗಳನ್ನು ನಿರ್ಮಿಸಿಕೊಂಡಿದ್ದರೂ ಸಹ ಸಮುದಾಯದ ಕುಟುಂಬದಲ್ಲಿನ ಒಬ್ಬರು ಹಾಡುಗಾರಿಕೆ ವೃತ್ತಿಯನ್ನವಲಂಬಿಸಿ ಊರು ಊರು ಸಂಚರಿಸುತ್ತಿರುವುದನ್ನು ಕಾಣಬಹುದಾಗಿದೆ. ವರ್ಷದ ಕೆಲವು ತಿಂಗಳುಗಳು ಹೀಗೆಯೇ ಸಂಚಾರದಲ್ಲಿಯೇ ಕಳೆಯುತ್ತಾರೆ. ಈ ಸಂದರ್ಭದಲ್ಲಿ ಭಾರತಕತೆ (ಮಹಾಭಾರತ)ಯನ್ನು ಹಾಡಿಕೊಂಡು ಜೀವನ ಸಾಗಿಸುತ್ತಿರುವುದನ್ನು ನೋಡಬಹುದಾಗಿದೆ. ಇತರೇ ಸ್ಥಳೀಯ ಪ್ರದೇಶದಲ್ಲಿನ ಎಲ್ಲಾ ಸಮುದಾಯದವರ ಮನೆಗಳಿಗೆ ತೆರಳಿ ಒಂದೊಂದು ಪಲ್ಲವಿಗಳನ್ನು ಹಾಡುತ್ತಾ, ಆ ಮೂಲಕ ದವಸಧಾನ್ಯಗಳು ಹಾಗೂ ಅಲ್ಪ ಮೊತ್ತದ ಹಣವನ್ನು ಕಾಣಿಕೆಯಾಗಿ ಪಡೆಯುತ್ತಿರುವುದನ್ನು ಕಾಣಬಹುದಾಗಿದೆ. ಸ್ಥಳೀಯ ಪರಿಸರದಲ್ಲಿ ನಡೆಯುವ ಹಬ್ಬ, ಜಾತ್ರೆಗಳಲ್ಲಿ ಹಾಡಲು ಇವರನ್ನು ವಿಶೇಷವಾಗಿ ಬರಮಾಡಿಕೊಳ್ಳಲಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಇಡೀ ರಾತ್ರಿಗಳವರೆಗೆ ಕಾರ್ಯಕ್ರಮವನ್ನು ನೀಡಿ ನಿಗದಿತ ಪ್ರಮಾಣದಲ್ಲಿ ಹಣ ಹಾಗೂ ದವಸಧಾನ್ಯಗಳ ಜೊತೆಗೆ ವಸ್ತ್ರಗಳನ್ನು ಉಡುಗೊರೆಯಾಗಿ ಪಡೆಯುವ ಪದ್ಧತಿ ಇಂದಿಗೂ ರೂಢಿಯಲ್ಲಿರುವುದು ಕಂಡುಬರುತ್ತದೆ. ಇತರೇ ಸಮುದಾಯದ ಯಾರಾದರೂ ವ್ಯಕ್ತಿಗಳು ಸಾವನ್ನಪ್ಪಿದರೆ ಆ ದಿನ ರಾತ್ರಿ ಇವರು ಸುತ್ತ ವ್ಯಕ್ತಿಯ ಕುರಿತು ಹೊಗಳಿಕೆಯ ಹಾಡುಗಳು ಹಾಗೂ ಗರಡುಪುರಾಣವನ್ನು ಹಾಡುವುದು. ಜೊತೆಗೆ ಭಜನೆಯ ಪದಗಳನ್ನು ಸಹ ಹಾಡುತ್ತಾರೆ.

ಪ್ರಧಾನವಾಗಿ ಹಾಡುಗಾರರಾದ ಇವರು ಅನೇಕ ಲಾವಣಿಗಳು, ಉಪಕತೆಗಳು, ಹೊಗಳಿಕೆ ಪದಗಳು, ಹರಕೆಯ ಪದಗಳು, ರಾಜಮಹಾರಾಜರಿಗೆ ಸಂಬಂಧಿಸಿದ ಜನಪದ ಕತೆಗಳು ಹೀಗೆ ವಿವಿಧ ಬಗೆಯ ಸಾಹಿತ್ಯವನ್ನು ಬಲ್ಲವರಾಗಿದ್ದಾರೆ. ಕ್ಷಣಮಾತ್ರದಲ್ಲಿಯೇ ಹಾಡುಗಳನ್ನು ಸೃಷ್ಟಿಸಿ ಹಾಡುವ ಹಾಡುಗಾರರು ಇವರಾಗಿದ್ದಾರೆ. ಇವರ ಇಡೀ ಹಾಡುಗಾರಿಕೆಯಲ್ಲಿನ ಎಲ್ಲಾ ಸಾಹಿತ್ಯ ಕನ್ನಡ ಭಾಷೆಯಲ್ಲಿರುವುದನ್ನು ನೋಡಬಹುದಾಗಿದೆ. ಕೇವಲ ಸಮುದಾಯದ ಸಾಂಸ್ಕೃತಿಕ ಆಚರಣೆಗಳಲ್ಲಿ (ಪೂಜೆ, ದೀಕ್ಷೆ, ಋತುಮತಿ, ವಿವಾಹ, ಸಾವು) ಮಾತ್ರ ಸಮುದಾಯದ ಮೂಲ ಭಾಷೆಯಾದ ಮರಾಠಿಯಲ್ಲಿ ಹಾಡುಗಳನ್ನು ಹಾಡುತ್ತಿರುವುದು ಕಂಡುಬರುತ್ತದೆ.

## ೩.೨. ಹಾಡುಗಾರಿಕೆಯಲ್ಲಿನ ಸಾಹಿತ್ಯ ಮತ್ತು ಭಾಷೆ

ಹಂಡಿಜೋಗಿಗಳ ಹಾಡುಗಾರಿಕೆಯಲ್ಲಿನ ಬಹುಪಾಲು ಸಾಹಿತ್ಯದ ಭಾಷೆ ಕನ್ನಡವಾಗಿದೆ. ಇವರು ಹೆಚ್ಚು ಪ್ರಸಿದ್ಧರಾಗಿರುವುದು ಮಹಾಭಾರತದ ಕತೆಗೆ ಸಂಬಂಧಿಸಿದ ಹಾಡುಗಳಿಂದಲೇ, ಮಹಾಭಾರತದ ಕತೆಗೆ ಸಂಬಂಧಿಸಿದ ವಿವಿಧ ಪರ್ವಗಳನ್ನು ತಮ್ಮದೇ ಧಾಟಿಯಲ್ಲಿ ಅನೇಕ ರಾತ್ರಿಗಳವರೆಗೆ ಹಾಡುವ ಹಾಡುಗಾರರು ಇವರಾಗಿದ್ದಾರೆ. ಹಂಡಿಜೋಗಿಗಳು ಹಾಡುವ ಹಾಡುಗಳಲ್ಲಿನ ಸಾಹಿತ್ಯವನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

### ೩.೨.೧. ಮಹಾಭಾರತದ ಕತೆ

ಮಹಾಭಾರತದ ಕತೆಗೆ ಸಂಬಂಧಿಸಿದಂತೆ ಪ್ರಧಾನವಾಗಿ ಪಾಂಡವರ ಕತೆ ಹಾಗೂ ಅರ್ಜುನ ಜೋಗಿಯ ಕತೆ ಪ್ರಮುಖವಾಗಿರುವುದನ್ನು ಗುರುತಿಸಬಹುದಾಗಿದೆ.

ಹಂಡಿಜೋಗಿಗಳು ಪಾರಂಪರಿಕವಾಗಿ ತಲೆಮಾರಿನಿಂದ ತಲೆಮಾರಿಗೆ ಮೌಖಿಕ ಸಂಪ್ರದಾಯದಲ್ಲಿ ಹಾಡುಗಾರಿಕೆಯನ್ನು ಸಂರಕ್ಷಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಭಾಷಿಕವಾಗಿ ಇವರು ಮರಾಠಿಗರಾಗಿದ್ದರೂ ಸಹ ಇವರ ಹಾಡುಗಳೆಲ್ಲವೂ ಕನ್ನಡದಲ್ಲಿರುವುದು ಕಂಡುಬರುತ್ತದೆ. ಸಮುದಾಯದ ಭಾಷೆ ಸಾಮಾಜಿಕ ಸಂಪರ್ಕ ಮಾಧ್ಯಮವಾಗಿ ಬಳಕೆಯಲ್ಲಿರುವುದನ್ನು ಗುರುತಿಸಬಹುದಾಗಿದೆ. ಇವರ ಹಾಡುಗಳಲ್ಲಿನ ಸಾಹಿತ್ಯ ಮಹಾಭಾರತದ ಕತೆಗೆ ಸಂಬಂಧಿಸಿದ್ದುದಾಗಿದೆ. ಇವರು ಹಾಡುವ ಕತೆಯನ್ನು ಭಾರತ ಕತೆ, ಮಹಾಭಾರತ ಕತೆ, ಪಾಂಡವರ ಕತೆ ಎಂದು ಸ್ಥಳೀಯರು ಗುರುತಿಸಿದ್ದಾರೆ. ವಾಸ್ತವವಾಗಿ ಹಂಡಿಜೋಗಿಗಳು ಮಹಾಭಾರತದ ಅನೇಕ ಪರ್ವಗಳನ್ನು ಹಲವು ರಾತ್ರಿಗಳವರೆಗೆ ತಮ್ಮದೇ ಮೌಖಿಕ ಸಂಪ್ರದಾಯದಲ್ಲಿ ಹಾಡುವುದು ಕಂಡುಬರುತ್ತದೆ. ಅದರಲ್ಲೂ ಇವರು ಅರ್ಜುನ ಜೋಗಿಯಾಗುವ ಸಂದರ್ಭ ಮತ್ತು ಜೋಗಿವೇಷ ಧರಿಸಿದ ಅರ್ಜುನ ತನ್ನ ತಾಯಿಯಾದ ಕುಂತಿಯನ್ನು ಭೇಟಿ ಮಾಡಿದ ಸಂದರ್ಭ ಇವರಿಗೆ ತುಂಬಾ ಅಚ್ಚುಮೆಚ್ಚಿನ ಭಾಗವಾಗಿರುವುದು ಕಂಡುಬರುತ್ತದೆ. ಇದರ ಜೊತೆಗೆ ಮಹಾಭಾರತದ ಕತೆಗೆ ಸಂಬಂಧಿಸಿದ ಅನೇಕ ಪರ್ವಗಳನ್ನು ಆಯ್ದುಕೊಂಡು ಇಡೀ ರಾತ್ರಿ ಹಾಡುವುದು ಕಂಡುಬರುತ್ತದೆ. ಅವುಗಳಲ್ಲಿ ಪ್ರಮುಖ ಪರ್ವಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

ಅರ್ಜುನ ತೀರ್ಥಯಾತ್ರೆ ಹೊರಡುವ ಸನ್ನಿವೇಶ

ಚಿತ್ರ ಕುಸುಮಾಲೆಯರನ್ನು ವರಿಸಿದ ಸನ್ನಿವೇಶ

ಅರ್ಜುನ ಮತ್ತು ದ್ರೌಪದಿಯರ ಪಂಥದ ಆಟದ ಸನ್ನಿವೇಶ

ಅರ್ಜುನ ಜೋಗಿಯಾಗುವ ಸನ್ನಿವೇಶ

ಹಸ್ತಿನಾವತಿಯಲ್ಲಿ ಅರ್ಜುನ ಜೋಗಿವೇಶ ಧರಿಸಿ ನರ್ತಿಸಿದ ಸನ್ನಿವೇಶ

ಅರ್ಜುನ ತಾಯಿ ಕುಂತಿಯನ್ನು ಭೇಟಿ ಮಾಡಿದ ಸನ್ನಿವೇಶ

ಹೀಗೆ ಮಹಾಭಾರತದ ಕತೆಯಲ್ಲಿನ ಅನೇಕ ಭಾಗಗಳನ್ನು ಆಯ್ದುಕೊಂಡು ತಮ್ಮದೇ ಶೈಲಿಯಲ್ಲಿ ಹಾಡುವುದನ್ನು ಗುರುತಿಸಬಹುದಾಗಿದೆ. ಅಂತಹ ಕೆಲವು ಹಾಡುಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

ಆಹಾ...

ಪಂಚಪಾಡವರು ತಮ್ಮಾ ಭಳಿರೇ ಪಂಚ ಐದೇ ಪಾಂಡವರು ಆದ ಪಂಚಪಾಂಡವರು

ನೀವು ಆಹಾ..... ಒಂದು ವರ್ಷ ಅಜ್ಞಾತವಾಸ ಪಾಂಡವರು

ಒಟ್ಟಿಗೆ ೧೩ ವರ್ಷ ಭಳಿರೇ ಕೆಟ್ಟ ಅರಣ್ಯವೆಯ್ಯ

ಅಮ್ಮಯ್ಯ ಕೆಟ್ಟ ಅರಣ್ಯ ಇದು...

ಮೂಡಲ ದಿಕ್ಕಿನಲ್ಲಿ ಪಾಂಡವರು

ಮೂಡಲ ದಿಕ್ಕಿಗಯ್ಯಾ ಪಾಂಡವರು

ಅರಣ್ಯಕೆ ಹೋಗುವಾಗ ಧರ್ಮರು

ವನವಾಸ ನೋವ ನೀವು ನೋಡಿ

ಅರಣ್ಯ ಹೋದ ಗವಿರಿ ಭಳಿರೇ

ಹನ್ನೆರಡು ಗಾವುದ ದೂರ ಪಾಂಡವರು

ತಾವು ನಡೆದು ಹೋಗಬೇಕಾದುರೆ ಭಳಿರೇ

ಪಾಂಡವರು ನಡೆದು ಹೋಗಬೇಕಾದುರೆ

ಅರಣ್ಯಕ್ಕೆ ಕಳಿಸಲಿಕ್ಕೆ ಪಾಂಡವರಿಗೆ

ವನವಾಸ ಕಳಿಸಲಿಕೆ ದೇವಾ ಅರಣ್ಯಕ್ಕೆ ಕಳಿಸಲಿಕ್ಕೇ

ಯಾರು ಯಾರು ಬರುತ್ತಾರೋ ........ಧರ್ಮರಿಗೆ

ಯಾರು ಯಾರು ಬರುತ್ತಾರೋ ಭಳಿರೇ

ಪಾಂಡವರ ಹಿಂಬಾಲಕೈಯ

ಗುರುವಾದ ದ್ರೋಣಚಾರಿ ಭಳಿರೇ

ಗುರುವಾದ ದ್ರೋಣಚಾರಿ ತಮ್ಮ ಮುತ್ತಜ್ಜಿ ನೀವನಯ್ಯ

ಭಳಿರೇ ತಾತಂದಿರು ನಮ್ಮ ನೋಡಿರಿ

ಅಣ್ಣ ಕೌರವನು ಭಳಿರೇ

ಅಣ್ಣ ಕೌರವನು ಸ್ವಾಮಿ

ಮುಂದೆ ಹೋದ ಧರ್ಮರಾಯ ಭಳಿರೇ

ಹಿಂತಿರುಗಿ ನೋಡುತಾನೋ ಧರ್ಮರಾಯ

ತಮ್ಮ ನಿಲ್ಲಿರಿ ನಿಲ್ಲಿರಿ ತಮ್ಮ

ಗುರುಗಳೇ ಬರುತ್ತಾರೆ ತಮ್ಮ ಗುರುಗಳೇ ಬರುತ್ತಾರೆ

ಗುರುಗಳ ಪಾದ ಪೂಜೆಯ...

ತಮ್ಮ ಪಾದ ಪೂಜೆಗಳ ಮಾಡಿ ಮುಂದೆ ಹೋಗೋಣ ಎಂದ

ನಾಲ್ವರು ತಮ್ಮಂದಿರಿಗೆ ಗಂಧವನ್ನು ತಾವು ನಿಂದರಿಸಿಕೊಂಡು

ಎನ್ನುವ ಮಾತನ್ನು ದ್ರೌಪದಿ ಕೇಳಿ

ಎಂಥ ಶಬ್ದವ ಹೇಳಿದನು

ಕೇಳೆ ನಾರಿ ಕೇಳೆ ಪಾಂಚಾಲಿ ಐವರಿಗೆ ಒಬ್ಬಳೆ

ಗಂಗೆ ಸ್ನಾನಕ್ಕೆ ಹೋಗಿ ನೀನು

ದ್ರೌಪದಿಯೆ ಹಳ್ಳ ಕೊಳ್ಳಕ್ಕೆ ಹೋಗಿ

ಗುರುಗಳ ಪಾದ ಪೂಜೆಗೆ ಆಹಾ...

ದ್ರೌಪದಿ ಗಂಗೆ ತರಬೇಕು ಎಂದಾ...

ಗಂಗೆ ತರಬೇಕು ನಾರಿ ದ್ರೌಪದಿ ಗಂಗೆ ತರಬೇಕು

ಕೇಳಯ್ಯ ಪತಿ ದೇವಾ ಆಹಾ...

ಪತಿ ದೇವಾ ಕೇಳಯ್ಯ ಪತಿ ದೇವಾ

ಸುತ್ತ ಹನ್ನೆರಡು ಗಾವುದ ಸ್ವಾಮಿ

ಹಳ್ಳ ಕೊಳ್ಳಗಳೇ ಇಲ್ಲ

ಇಲ್ಲಿ ಬಾವಿ ನೀರುಗಳೆ ಇರುವುದಿಲ್ಲ (ಇಲ್ಲ)

ಸ್ವಾಮಿ ಇಲ್ಲದಾ ಗಂಗೆ ಸ್ವಾಮಿ

ನಾನು ಎಲ್ಲಿಂದ ತರಲಿ ಎಂದು

ಕಣ್ಣೀರು ಸುರಿಸುತ್ತಾಳೆ ದ್ರೌಪದಿ..... ಕಣ್ಣೀರು ಸುರಿಸುತಾಳೆ

ಸ್ವಾಮಿ ದ್ರೌಪದಿ ಎಂಥ ಮಾತನಾಡುತ್ತಾಳೆ

ಎಂಥ ಧರ್ಮರಾಯನಯ್ಯ ಶಿವನೇ

ಎಂಥ ಧರ್ಮರಾಯನೀವನು ಭಳಿರೇ

ಕೇಳೆ ನಾರಿ ಕೇಳೆ ಪಾಂಚಾಲಿ ಹಿಂದಿನಾ ಕಾಲದೊಳು

ದ್ರೌಪತಿಯೇ ಗಂಡು ಮಗ ದುಶ್ಯಾಸನು

ಸೀರೆಯನ್ನು ಸೆಳೆಯುವಾಗ ದ್ರೌಪದಿಯ ಮಾನ ಹೋದವು ಏನೇ

ಜೀವನ ಭಂಗವಾಯಿತೇನೆ

ಸತ್ಯ ಉರಿದು ಹೋದವೇನೆ

ಆ ಎರಡು ಮಾತ ಕೇಳಿ

ದ್ರೌಪತಿ ಕಣ್ಣೀರು ಸುರಿಸುತ್ತಾಳೆ

ಭಳಿರೇ ಕೃಷ್ಣನಾ ಧ್ಯಾನ ಮಾಡಿ

ದ್ರೌಪತಿ ಎರಡು ಕೈ ಜೋಡಿಸಿ

ಸುರಿದ ಮಳೆ ಭುಗಿಯ ವರುಣ

ಭಳಿರೇ ಕಣ್ಣೀರು ಹಿಡಿದುಕೊಂಡು

ದ್ರೌಪತಿ ಕಣ್ಣೀರು ಹಿಡಿದುಕೊಂಡು

ದ್ರೌಪತಿ ಗುರುಗಳ ಪಾದ ಪೂಜೆ

ಶಿವನೇ ತಾನೇ ಮಾಡುತ್ತಿರುವನಯ್ಯ

ಅಷ್ಟು ಜನ ಗುರುಗಳಲ್ಲಿ ಭಳಿರೇ

ಅಷ್ಟು ಜನ ಗುರುಗಳಲ್ಲಿ

ಸ್ವಾಮಿ ಒಬ್ಬ ಗುರುವಿಗಾದರು

ಭೂದೇವಾ ಕರುಣೆ ಹುಟ್ಟಲಿಲ್ಲ

ಮುಂದಕ್ಕೆ ಹೊರಟಿರುವರು ಆಹಾ...

ಪಾಂಡವರು ಕಳೆದ ಕಮಾಕ್ಷಿ ಒಲವು

ಕಮಾಕ್ಷಿ ಬನದ ಒಳಗೆ ಕಾಲ ಕಳೆಬೇಕಾದುರೆ

ಪಾಂಡವರು ವಾಸ ಮಾಡಬೇಕಾದುರೆ

ಶಿವ ಶಿವಾ ವಾಸಮಾಡಬೇಕಾದರೆ ಕಾಮಾಕ್ಷಿ ವನದ ಒಳಗೆ

ಪಾಂಡವರು ಆರು ತಿಂಗಳು ಕಾಲ

ಶಿವನೇ ಅವರು ಕಾಲ ಕಳೆಬೇಕಾದುರೆ

ಗೆಡ್ಡೆ ಗೆಣಸುಗಳ ತಿಂದು ಪಾಂಡವರು

ಕಾಡು ಬಿಕ್ಕಿಯಹಣ್ಣು ಕವಳೆ ಕಾರುಣ್ಯ ಏಂತು

ಪಾಂಡವರು ಕಾಲ ಕಳೆ ತೀರುವರಯ್ಯ

ಧರ್ಮರು ವಾಸಮಾಡುತಿರುವರಯ್ಯ.....

ವಾಸ ಮಾಡಬೇಕಾದುರೆ

ಅಲ್ಲಿಯೇ ಆರು ತಿಂಗಳಾಯಿತು

ಹಣ್ಣು ಹಂಪಲು ಮುಗಿದವು

ಡೊಳ್ಳು ಹೊಟ್ಟೆ ಭೀಮಸೇನ ಭಳಿರೇ

ರಾಕ್ಷಸ ಕುಲದಂಡಿ ಭೀಮ

ಅಣ್ಣಾ ನನಗೆ ಬಹಳ ಹಸಿವು ಆಗುತ್ತೈತಿ

ನನಗೆ ಅನ್ನ ಬೇಕು ಅಣ್ಣಾ

ನಾಡ ಸರಹೊತ್ತಿನಲ್ಲಿ ಭಳಿರೇ

ಧರ್ಮರಾಯ ಶೋಕ ಮಾಡುತ್ತ

ಯೋಚನೆ ಮಾಡುತ್ತಾ ಕುಳಿತನು ನೋಡಿ

ಹುಟ್ಟಿದ ಸೂರ್ಯದೇವ ಭಳಿರೇ

ಹುಟ್ಟಿದ ಸೂರ್ಯದೇವನು

ಇವರಿನ್ನೂ ಸತ್ಯ ಮರೆತಿರುವರೆಂದು

ಪಾಂಡವರು ದಾನ ಬಿಟ್ಟಿರುವರೆಂದು

ಜಂಗಮ ರೂಪತಾಳಿದ ಸೂರ್ಯದೇವ

ಜಂಗಮನ ರೂಪತಾಳಿ

ಅಂಗೈಗೆ ಆರು ಜೋಳಿಗೆ ಭಳಿರೇ

ಮುಂಗೈಗೆ ಮೂರು ಜೋಳಿಗೆ ಸ್ವಾಮಿ

ಒಟ್ಟು ಒಂಭತ್ತು ಜೋಳಿಗೆ ಧರಿಸಿ, ಸೂರ್ಯದೇವಾ

ಏಕ ಸನ್ಯಾಸಿಯಾಗಿ ಜಂಗಮ ರೂಪತಾಳಿ

ಬೇಗನೆ ಬರುವತಾನೆ ಧರ್ಮರಾಯ
ಪುರಾಣದಲ್ಲಿ ಭಿಕ್ಷಾ ಎಂದು
ಭೀಕ್ಷಾಂದೇಯಿ ಎಂದು ಆ ಶಿವನು
ಭಿಕ್ಷಾಂದೇಯಿ ಎಂದ
ಏನುದಾನ ಕೊಡಲಿ ಶಿವನೇ ಆಹಾ...
ಪರಮಾತ್ಮ ಏನು ಧರ್ಮ ನೀಡಲಿ...
ಪಟ್ಟಣ, ಪಾಳೆಗಳ ಬಿಟ್ಟು (ಪಟ್ಣ–ಪಾಳೆ)
ನಾವೂ ದೇಶ ಕೋಶಗಳ ಬಿಟ್ಟು
ಪರಮಾತ್ಮ ದೇಶ ಕೋಶಗಳ ಬಿಟ್ಟು
ಅಡವಿ ಅರಣ್ಯದಲ್ಲಿ ನಮಗೆ
ಉಣಲು ಅನ್ನಗಳಿಲ್ಲ, ಕುಡಿಯಲು ಬಾವಿ ನೀರುಗಳೆ ಇಲ್ಲ
ನಾವು ಇಬ್ಬನಿ ಸುರಿದ ನೀರು
ಪರಮಾತ್ಮ ಕುಬ್ಬರಗೆ ಕುಡಿಯತಾಲಿ
ಕಾಲಕಳೆಯುತ್ತಿರುವಯ್ಯ ಗುರುದೇವ ಏನು ದಾನ ನೀಡಲಿ
ನಾನು ನನ್ನ ಹತ್ರ ಬಂಧವರಿಗೆಲ್ಲ
ಸ್ವಾಮಿ ಇಲ್ಲ ಅಂತಾ ಕಳಿಸಲಾರೆ
ನಾರಿ ದ್ರೌಪತಿ ಏಳೇ ಪಾಂಚಾಲಿ
ಏಳೇ ಸ್ವಾಮಿ ಗುರುಗಳು ಬಂದಾರೆ ಏಳೆ...
ಕೇಳಿ ಜಂಗಮರೆ ನೀವು ಕೇಳಿ ಜಂಗಮರೇ ಕೇಳಿರಿ
ನಾವು ಐದು ಜನ ಕಟ್ಟಿರುವುದು
ಮುತ್ತಿನ ಮಾಂಗಲ್ಯವು
ಗುರುದೇವ ದಾನ ಕೊಡುವೆವು ನಿನಗೆ ಎಂದು
ದ್ರೌಪದಿ ಕೊರಳಿಗೆ ಧರ್ಮರಾಯ ಮಾಂಗಲ್ಯಕ್ಕೆ ಹಾಕಿದ
ಮೆಚ್ಚಿದೆ ಮೆಚ್ಚಿದೇ.....ಧರ್ಮರಾಯ ತಾಸು ತಡಿಯಯ್ಯೆ ನೀನು

ಧರ್ಮರಾಯ ತಾಸು ತಡಿಯಪ್ಪ ಎಂದಾ
ನಿನ್ನ ಸತ್ಯಕ್ಕೆ ಮೆಚ್ಚಿದೆ ನಾನು
ನಿನ್ನ ಧರ್ಮಕ್ಕೆ ಮೆಚ್ಚಿದೆ ಎಂದ ಜಂಗಮನು
ಬೇಡಿದ್ದು ಕೊಡುತಿನಿ ನಾನು ನೀನು
ಏನು ಬೇಡುತಿಯೆ ಬೇಡು
ಕೇಳಯ್ಯ ಸ್ವಾಮಿ ದೇವಾ ಆಹಾ...
ಗುರುದೇವಾ ದೇಶ-ಕೋಶಗಳು ಬೇಡ
ಸ್ವಾಮಿ ಪಟ್ಟಣ ಪಾಳೆಗಳು ಬೇಡ
ನನಗೆ ತುತ್ತು ಅನ್ನಗಳೇ ಸಾಕು
ಗುರುದೇವಾ ಬೊಗಸೆ ನೀರುಗಳೆ ಸಾಕು
ಅಷ್ಟೇ ಸಾಕು ಎಂದೆನಯ್ಯ ಧರ್ಮರಾಯ
ಅಷ್ಟೇ ಸಾಕು ಎಂದನಯ್ಯ
ಕೇಳಮ್ಮ ದ್ರೌಪದಿಯೆ ನೀನು
ಹಗಲು ಹೊತ್ತು ಹನ್ನೆರಡು ಗಂಟೆಗೆ (ಹಗಲತ್ತು)
ನೀನು ಅಂಗೈ ಅಗಲ ಸಾರಿಸು
ದ್ರೌಪದಿಯೆ ಮೂರು ಒಲೆಗುಂಡು ಇಟ್ಟು
ಶಿವನ ಧ್ಯಾನ ಮಾಡು ಅವ್ವಾ ನೀನು
ಸೂರ್ಯದೇವನ ಧ್ಯಾನ ಮಾಡಿ ಅವ್ವಾ
ಕೃಷ್ಣನ ಧ್ಯಾನ ಮಾಡಿ
ನೀನು ಎರಡು ಕೈ ಜೋಡಿಸಿ
ಶಿವನ ಧ್ಯಾನ ಮಾಡು ತಂಗಿಯಮ್ಮ (ತಂಗೆಮ್ಮ)
ದ್ರೌಪತಿಯೆ ಮೇಘಲೋಕಾವದಿಂದ ನಿಮಗೆ
ಏಳು ಅಗಲದ ಅಕ್ಷಯ ಪಾತ್ರೆ ಬರುವುದು
ಅಕ್ಷಯ ಪಾತ್ರೆ ಒಳಗೆ ನೋಡು

ಪ್ರತಿದಿನ ಅಮೃತದ ಅಡಿಗೆ ನೋಡಮ್ಮ
ಹನ್ನೆರಡು ವರ್ಷದ ತನಕ ನಿಮಗೆ
ಅಡುಗೆ ಆಗುವುದು ಎಂದು ಸ್ವಾಮಿ
ಗುರುದೇವಾ ಅಡುಗೆ ಎಂದು ಆಗುವುದು
ಮಾಯಾವಾದನಯ್ಯ ಜಂಗಮನು..... ಮಾಯವಾದನಯ್ಯಾ.
ಹನ್ನೆರಡು ಗಂಟೆ ಆಯಿತು ಭಳಿರೇ
ಹಗಲತ್ತನೆರಡು ಗಂಟೆಯಾಯಿತು
ದ್ರೌಪತಿ ಅಂಗ್ಯೆಗಲ ಸಾರಿಸಿ
ಶಿವನ ಧ್ಯಾನ ಮಾಡಿ ಗುರುದೇವಾ
ಕುಳಿತಿರುವ ಸಮಯದಲ್ಲಿ ಪರಮಾತ್ಮ
ಮೇಘಲೋಕಾವದಿಂದ ಶಿವನೇ
ಅದುವೇ ಅಕ್ಷಯಪಾತ್ರೆ ಬರುವುದು
ಗುರುದೇವಾ ಭೀಮ ನೋಡಿರುವನಯ್ಯಾ
ಕಣ್ಣಿಲ್ಲದ ಅಡುಗೆ ನೋಡಿರುವ ಭೀಮ
ಕೇಳೋ ಅಣ್ಣಯ್ಯ ಕೇಳೋ ನನಗೆ ಬಹಳ ಹಸಿವು ಆಗುತ್ತೈತಿ
ಅಣ್ಣಯ್ಯ ನಾನು ಊಟ ಮಾಡುವೆನು
ಊಟ ನಿಲ್ಲಿಸಯ್ಯ ತಮ್ಮ ನಿನ್ನ ಹಸಿವು ನಿಲ್ಲಿಸು
ಬಡವ ಬಗ್ಗರನ್ನು ಕರೆಯಿಸಿ ತಮ್ಮ
ನಾವು ಅನ್ನದಾನ ಮಾಡಬೇಕು ನಮಗೆ ಶಿವನು ಕೊಟ್ಟ ಅನ್ನವು
ತಮ್ಮ ನಾವೇ ಉಣಬಾರದು ಎಂದು ಧರ್ಮರಾಯ ಭೀಮನಿಗೆ ಹೇಳುತಾನೆ
ಕೇಳಯ್ಯ ತಮ್ಮ ಭೀಮ ಇನ್ನೂ ಸಾರು ಡಂಗುರುವ ಹೊಡೆಸು
ನಾವು ಪಂಚ ಪಾಂಡವರು ನಾವು ಭಳಿರೇ
ಪಂಚೈದೆ ಪಾಂಡವರು ನಾವು...
ಕಾಮಾಕ್ಷಿ ವನದೊಳಗೆ ನಾವು ಅನ್ನ ಕೊಡುತಿನಿ ಎಂದು

ಬಡಜನರು ಊಟ ಮಾಡಿ ಹೋಗಬಹುದು ಎಂದು ಡಂಗುರ ಹೊಡಿಸು

ಭೀಮ ಗಾವುದಕ್ಕೊಂದು ಜಾಬು ಇಟ್ಟು

ಭೀಮಾ ಭಳಿರೇ ಡಂಗುರ ಹೊಡೆಸುತ್ತಾನೆ

ಭೀಮ ಕೂಗಿಟ್ಟು ಕರೆಯುತ್ತಾನೆ

ಬನ್ನಿ.... ಬನ್ನೀರೇ....ಬನ್ನಿರಿ ಬಡ ಜನರೆ ನಾವು

ಅನ್ನ ಕೊಡುತೀವಿ ನಾವು ಎಂದು

ನಿಮಗೆ ಗಂಜಿ ಕೊಡುತಿವೆ ನಾವು ಎಂದು

ಬಂದಂತ ಬಡಜನರಿಗೆ ಊಟ ಉಪಚಾರ

ಭಳಿರೇ ಪಾಂಡವರು ಊಟಕ್ಕೆ ನೀಡಿರುವರು

ಸ್ವಾಮಿ ಮತ್ತೆ ಮಿಗಿದ ಅನ್ನವ (ಮಿಕ್ಕ)

ಬಡಜನರು ಗಂಟುಗಳ ಕಟ್ಟಿಕೊಂಡು

ಶಿವ ಶಿವಾ ಹಿಂತಿರುಗುವರು ಅವರವರ

ಪಟ್ಟಣಗಳಿಗೆ ತಾವು ಹೋಗಬೇಕಾದುರೆ

ಭಳಿರೇ ತವರೂರ ಪಟ್ಟಣದ ಮುಂದೆ

ಅವರುಗಳು ಎಂಥಾ ಮಾತು ಹೇಳುತಾರೆ

ದುರುಳ ಕೌರವನೀವನು ಭಳಿರೇ

ಪಾಪಿ ಕೌರವನೀವನು

ಭಳಿರೇ ಪಾಪಿ ಕೌರೂವನಿವನು ಇವನು ಅನ್ನ ಕೊಡುವವನು ಅಲ್ಲ

ಗಂಜಿ ಕೊಡುವವನು ಅಲ್ಲ

ಪಂಚ ಪಾಂಡವರು ಅವರೇ ಭಳಿರೇ

ಅರಣ್ಯದಲ್ಲಿದ್ದವರು ಅವರು ಅನ್ನದಾನ ಮಾಡಿರುವರು

ಶಿವ-ಶಿವ ಅವರಿಗೆ ದೇವರು ಹರಸಲಿ...

ಇದು ಹಂಡಿಜೋಗಿಗಳು ಹಾಡುವ ಮಹಾಭಾರತ ಕತೆಯ ಹಾಡಿನ ರೂಪವಾಗಿದೆ. ಹಂಡಿಜೋಗಿಗಳು ಹಾಗೂ ಸ್ಥಳೀಯರು ಈ ಹಾಡನ್ನು ಮಹಾಭಾರತ ಕತೆ, ಪಾಂಡವರ ಕತೆ

ಎಂದು ಕರೆಯುತ್ತಾರೆ. ಇಲ್ಲಿನ (ಹಾಡು) ಭಾಷೆ ಕನ್ನಡವಾಗಿದ್ದು, ಸ್ಥಳೀಯ ಪ್ರಾದೇಶಿಕ ರೂಪಗಳ ಬಳಕೆಯನ್ನು ಪ್ರಸ್ತುತ ಹಾಡಿನಲ್ಲಿ ಗುರುತಿಸಬಹುದಾಗಿದೆ. ಇಲ್ಲಿನ ಹಾಡು ಸಾಹಿತ್ಯ, ಸಂಗೀತ ಹಾಗೂ ನೃತ್ಯ ಮೊದಲಾದವುಗಳನ್ನು ಒಳಗೊಂಡು ನಿರೂಪಿತವಾಗುವುದನ್ನು ಗುರುತಿಸಬಹುದಾಗಿದೆ. ಮೂರು–ನಾಲ್ಕು ವ್ಯಕ್ತಿಗಳಿಂದ ಕೂಡಿ ಒಂದು ಗುಂಪಿನಲ್ಲಿ ಕಲಾ ಪ್ರದರ್ಶನವನ್ನು ನೀಡುವುದನ್ನು ಈ ಹಾಡಿನಲ್ಲಿ ಗುರುತಿಸಬಹುದಾಗಿದೆ. ಒಬ್ಬ ಪ್ರಧಾನ ಹಾಡುಗಾರ ಮುಮ್ಮೇಳ ಹಾಡುತ್ತಾ, ಇಡೀ ಕತೆಯನ್ನು ನಿರೂಪಿಸುತ್ತಾ ಮುಂದೆ ಸಾಗುತ್ತಾನೆ. ಉಳಿದ ಕಲಾವಿದರು ಪಲ್ಲವಿಯನ್ನು (ಹಾಡಿನ ಪ್ರಧಾನ ಭಾಗ) ಹಿಮ್ಮೇಳನದಲ್ಲಿ ಹಾಡುತ್ತಾ ಲಘು ನರ್ತನವನ್ನು ಮಾಡುವುದು ಕಂಡುಬರುತ್ತದೆ. ಹಾಡಿನಲ್ಲಿಯ ಚರಣಗಳ ಪುನರಾವರ್ತನೆ (ಪಲ್ಲವಿ) ತಾಳ, ಲಯ ಹಾಗೂ ಪ್ರಾಸ ಪ್ರಾಧಾನ್ಯತೆಯಿಂದ ಕೂಡಿರುವುದನ್ನು ಗುರುತಿಸಬಹುದಾಗಿದೆ. ಪ್ರಸ್ತುತ ಹಾಡಿನಲ್ಲಿ ಒಂದು ಪಲ್ಲವಿಯನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ಅಣ್ಣ ಕೌರವನು ಭಳಿರೇ

ಅಣ್ಣ ಕೌರವನು ಸ್ವಾಮಿ

ಮುಂದೆ ಹೋದ ಧರ್ಮರಾಯ ಭಳಿರೇ

ಹಿಂತಿರುಗಿ ನೋಡುತಾನೋ ಧರ್ಮರಾಯ

ತಮ್ಮ ನಿಲ್ಲಿರಿ ನಿಲ್ಲಿರಿ ತಮ್ಮ

ಗುರುಗಳೇ ಬರುತ್ತಾರೆ ತಮ್ಮ ಗುರುಗಳೇ ಬರುತ್ತಾರೆ

ಗುರುಗಳ ಪಾದ ಪೂಜೆಯೆ...

ಇಲ್ಲಿನ ಪ್ರಾಸವನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

ತಮ್ಮಾ ನಿಲ್ಲಿ, ನಿಲ್ಲೀರಿ ತಮ್ಮಾ

ಗುರುಗಳೇ ಬರುವತಾರೆ, ತಮ್ಮಾ ಗುರುಗಳೇ ಬರುವತಾರೆ

ಗುರುಗಳಾ ಪಾದ.... ಪೂಜೆ.... (ಪಲ್ಲವಿ)

ಎಂದು ಧರ್ಮರಾಯನು ಗುರುವಾದ ದ್ರೋಣಾಚಾರ್ಯರಿಗೆ ಅರ್ಪಿಸುವ ಗುರುಭಕ್ತಿಯನ್ನು ಕುರಿತು ವಿವರಿಸುತ್ತದೆ. ಜೊತೆಗೆ ಈ ಹಾಡಿನಲ್ಲಿ ಪ್ರಾಸದ ಬಳಕೆ ಅಧಿಕವಾಗಿರುವುದನ್ನು ಗುರುದಿಸಬಹುದಾಗಿದೆ.

ದ್ರೌಪಾತಿ ಮಾನ ಹೋದಾವು ಏನೇ

ಜೀವ ಭಂಗವಾಯಿತೇನೇ

ಸತ್ಯ ಉರಿದೋದವೇನೇ.... ದ್ರೌಪಾತಿ

ಎಂಬುದು ದುಶ್ಯಾಸನನು ದ್ರೌಪದಿಯ ಮಾನಭಂಗ ಮಾಡುವುದನ್ನು ಕುರಿತು ವಿವರಿಸುವಲ್ಲಿ ಅಂತ್ಯ ಪ್ರಾಸವನ್ನು ಬಳಸಲಾಗಿದೆ.

ಈ ಹಾಡಿನಲ್ಲಿ ಕೆಲವು ಪ್ರಾದೇಶಿಕ ಜೋಡಿ ಪದಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದಾಗಿದೆ.

ಹಳ್ಳ–ಕೊಳ್ಳ, ಬಾವಿ–ನೀರು, ಅನ್ನ–ನೀರು, ಪಟ್ಟಣ–ಪಾಳ್ಯ, ದೇಶ–ಕೋಶ, ಹಣ್ಣು–ಹಂಪಲು, ಅಡವಿ–ಅರಣ್ಯ ಮೊದಲಾದ ಪದಗಳನ್ನು ಹೆಸರಿಸಬಹುದಾಗಿದೆ.

ಪ್ರಾಸದ ಬಳಕೆ ಇಡೀ ಹಾಡಿನ ವೈಶಿಷ್ಟ್ಯವೆಂಬಂತೆ ಬಳಕೆ ಮಾಡಲಾಗಿದೆ.

ಬನ್ನಿ... ಬನ್ನೀರೆ... ಬಡಾ ಜನರೇ...

ನಾವು ಅನ್ನ ಕೊಡುತೀವಿ ಇಂದು ಪಾಂಡವರು

ಅನ್ನ ಕೊಡುತೀವಿ ನಿಮಗೆ, ಗಂಜಿ ಕೊಡುತೀವಿ ಎಂದು ಪಾಂಡವರು

ಭಳಿರೇ... ಪಾಪಿ ಕೌರೂವನೀವನು

ದುರುಳ ಕೌರೂವನೀವನು ಇವನು

ಅನ್ನ ಕೊಡುವವನು ಅಲ್ಲ

ಗಂಜಿ ಕೊಡುವವನು ಅಲ್ಲ

ಗಂಗೆ ಹೊಯ್ಯುವವನು ಅಲ್ಲ ಎಂದು ಮೊದಲಾದವುಗಳನ್ನು ಗುರುತಿಸಬಹುದಾಗಿದೆ.

**ಹರಕೆಯ ಹಾಡು (ದೇವರನ್ನು ಕುರಿತು)**

ಏಹೋ... ಜೈವಾಗಲಿ

ಚುಂಚನಗಿರಿ ಸಿದ್ಧ

ಮೂಡಲ ಗವಿಸಿದ್ಧ

ವದ್ದಿಕೇರಿ ಸಿದ್ಧ

ಕಾಲಭೈರವ ಸಿದ್ಧ

ರಾಯದುರ್ಗದೊಳಗೆ ರಸ ಸಿದ್ಧ

ಮುರುಡಿ ಆಂಜನೇಯ

ಕದರಿ ನರಸಿಂಹ

ಉಗ್ರಾ ನರಸಿಂಹ

ತಲಕಾತ್ಲ ಭೈರವ

ದಿಕ್ಕ ದಿಕ್ಕಲ ಭೈರವ

ಪಗಲಬಂಡೆ ಭೈರವ

ಸ್ವಾಮಲಬಂಡೆ ಭೈರವ

ನನ್ನತಲ ಭೈರವ

ನೀವು ಕೊಟ್ಟಾ ದಾನ

ತಾಯಿ-ತಂದೆಯರ ಮೇಲೆ

ಅಕ್ಕ ತಂಗಿಯರ ಮೇಲೆ

ಅಣ್ಣ ತಮ್ಮರು ಮೇಲೆ

ಉಜ್ಜಿನಿಯ ಮರುಳು ಸಿದ್ಧ

ಕೊಟ್ಟೂರು ಆಂಜನೇಯ

ಕೋಳೂರು ಬಸಪ್ಪ

ನೀವು ಕೊಟ್ಟಾ ದಾನ

ಹಟ್ಟೀ ತಿಪ್ಪೇರುದ್ರ

ಶ್ರೀ ಧರ್ಮಸ್ಥಳ ಮಂಜುನಾಥ

ರಾಘವೇಂದ್ರಸ್ವಾಮಿ

ಉಗ್ರ ನರಸಿಂಹ

ಮಲೆ ಭೈರಪ್ಪ

ಬೊಮ್ಮದೇವರು ನಿಮಗೆ

ಓಬಳದೇವರು ನಿಮಗೆ

ಚನ್ನಕೇಶವರಾಯ

ಕೋಲಾಳ ಕೆಂಚಯ್ಯ

ತಾಯಿ ತಂದೆಯರ ಮೇಲೆ

ದೇವಾನು ದೇವರು

ದಂಡಿನ ದುರುಗಮ್ಮ

ಬಳ್ಳಾರಿಯ ಕರಿಯಮ್ಮ

ಸವದತ್ತಿ ಯಲ್ಲಮ್ಮ

ಹುಚ್ಚಂಗಿ ಯಲ್ಲಮ್ಮ

ಪಿರಂಗಿ ಯಲ್ಲಮ್ಮ

ನೀವು ಕೊಟ್ಟ ದಾನ

ಎಲ್ಲಿ ಹೋದ ಕಾಲಕ್ಕೆ

ದೇವಾನು ದೇವರು

ಕೈಗೊಡಲವ್ವ

ಚುಂಚನಗಿರಿ ಸಿದ್ಧ

ಮೂಡಲ ಗವಿಸಿದ್ಧ

ವದ್ದಿಕೇರಿ ಸಿದ್ಧ

ಕಾಲಭೈರವ ಸಿದ್ಧ

ಹೋದಲ್ಲಿ ಬಂದಲ್ಲಿ

ಸುಖ ಸಂಪತ್ತು ನಿಮ್ಮದಾಗಲಿ

ದೇವರು ಕಾಪಾಡಲಿ

ಹಿಡಿದ ಕೆಲಸ ಕೈಗೂಡಲಿ

ಜಯಾ... ಜಯಾ... ಜಯಾ...

ಪ್ರಸ್ತುತ ದೈವವನ್ನು ಕುರಿತ ಈ ಹಾಡು ಸ್ಥಳನಾಮಗಳು ಮತ್ತು ವ್ಯಕ್ತಿನಾಮಗಳ ಅಧ್ಯಯನದಲ್ಲಿ ತುಂಬಾ ಮಹತ್ವದ ಆಕರಗಳನ್ನು ಒದಗಿಸುತ್ತದೆ. ಉದಾಹರಣೆಗೆ. ಚುಂಚನಗಿರಿ–ಸಿದ್ಧ, ವದ್ದೀಕೆರೆ–ಸಿದ್ದ, ಮೂಡಲ–ಗವಿಸಿದ್ದ, ಪಡಗಲಬಂಡೆ–ಭೈರವ, ಉಜ್ಜಯಿನಿ–ಮರುಳಸಿದ್ದ, ಹಟ್ಟಿ–ತಿಪ್ಪೇರುದ್ರ, ಸ್ವಾಮಲಬಂಡೆ–ಭೈರವ, ತಲಕಾತ್ಲ–ಭೈರವ ಮೊದಲಾದವು. ಪ್ರಸ್ತುತ ಹಾಡಿನಲ್ಲಿ ದೈವ ಹಾಗೂ ಸ್ಥಳ ಕುರಿತ ವಿವರಗಳನ್ನು ಅರಿಯಲು ಮೇಲಿನ ಹಾಡು ಮಹತ್ವವಾದುದಾಗಿದೆ.

**ಹೊಗಳಿಕೆಯ ಹಾಡು**

ತಿಪ್ಪೇಸ್ವಾಮಿ ಕೊಟ್ಟ ದಾನ ಅವರಿಗೆ ಮುಟ್ಟಲಯ್ಯ

ಸ್ವಾಮಿ ಕೊಟ್ಟ ದಾನ ತಿಪ್ಪೇಸ್ವಾಮಿಗೆ ಮುಟ್ಟಲಯ್ಯ
ಹುಚ್ಚಂಗಿ ಯಲ್ಲಮ್ಮಗೆ ಮುಟ್ಟಲಯ್ಯ ನೀವು ಕೊಟ್ಟ ದಾನಗಳು
ಸ್ವಾಮಿ ಕೊಟ್ಟ ದಾನ ಹುಚ್ಚಂಗಿ ಯಲ್ಲಮ್ಮನಿಗೆ ಮುಟ್ಟಲಿ
ಸ್ವಾಮಿ ಕೊಟ್ಟ ದಾನ ಸವದತ್ತಿ ಯಲ್ಲಮ್ಮನಿಗೆ ಮುಟ್ಟಲಿ
ನೀವು ಕೊಟ್ಟಂತಹ ದಾನ ಎಲ್ಲ ದೇವರಿಗೆ ಮುಟ್ಟಲಿ
ಹೋದಲ್ಲಿ ಬಂದಲ್ಲಿ ಸುಖ-ಸಂಪತ್ತು ಕೊಡಲಿ
ಎಲ್ಲಿಗೆ ಹೋದ ಕಾಲಕ್ಕೆ ಅಲ್ಲಿ ಜೋಗಿಗಳ ಹರಕೆ ಆಗಲಿ.

### ೩.೨.೨. ಅರ್ಜುನ ಜೋಗಿ ಹಾಡು

ಇದು ಹಂಡಿಜೋಗಿಗಳು ಹಾಡುವ ಕಿನ್ನರಿ ಸಂಪ್ರದಾಯದ ಪ್ರಮುಖವಾದ ಕಾವ್ಯ (ಹಾಡು)ವಾಗಿದೆ. ಜೋಗಿಗಳು ಈ ಹಾಡನ್ನು ಎರಡು ಸಂದುಗಳಲ್ಲಿ (ಭಾಗಗಳಲ್ಲಿ) ತಮ್ಮದೇ ಆದಂತಹ ಕಾವ್ಯ ಸಂಪ್ರದಾಯದಲ್ಲಿ ಹಾಡುತ್ತಿರುವುದು ಕಂಡುಬರುತ್ತದೆ.

ಹಾಡಿನ ಮೊದಲನೇ ಸಂದಿನಲ್ಲಿ ಅರ್ಜುನ ಮತ್ತು ದ್ರೌಪದಿಯ ಬದುಕಿನ ಚಿತ್ರಣ ಹಾಗೂ ಅರ್ಜುನ ಜೋಗಿಯಾಗುವ ಸಂದರ್ಭವನ್ನು ಹಾಡುತ್ತಾರೆ. ಎರಡನೇ ಭಾಗದಲ್ಲಿ ಅರ್ಜುನ ಜೋಗಿಯಾಗಿ ಮಣಿಪುರಕ್ಕೆ ಹೋಗಿ ಬರುವ ಸಂದರ್ಭವನ್ನು ಹಾಡುತ್ತಾರೆ. ಈ ಹಾಡಿನಲ್ಲಿ ಅರ್ಜುನ ಜೋಗಿಯಾಗುವ ಸಂದರ್ಭ ಇವರಿಗೆ ಹೆಚ್ಚು ಪ್ರಿಯವಾದ ಭಾಗವಾಗಿರುವುದನ್ನು ಕಲಾವಿದರು ವಿವರಿಸುತ್ತಾರೆ.

ಅರ್ಜುನ ಜೋಗಿಯ ಹಾಡಿನ ಕಥೆಯ ಸಾರಾಂಶವನ್ನು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ನೋಡಬಹುದಾಗಿದೆ.

ಅರ್ಜುನ ಜೋಗಿಯ ಹಾಡು ದೇವತಾ ಪ್ರಾರ್ಥನೆಯೊಂದಿಗೆ ಪ್ರಾರಂಭವಾಗುತ್ತದೆ. ಸಮುದಾಯದಲ್ಲಿ ಇವರು ಮೊದಲು ದೇವರಸ್ತುತಿ ಪದಗಳೊಂದಿಗೆ ಹಾಡುವುದನ್ನು ಪ್ರಾರಂಭಿಸುತ್ತಿರುವುದು ಕಂಡುಬರುತ್ತದೆ.

ಹಸ್ತಿನಾವತಿಯಲ್ಲಿ ಅರ್ಜುನನು ಮುತ್ತಿನ ಗದ್ದುಗೆಯೇರಿ ಶಿವಪೂಜೆಯಲ್ಲಿ ನಿರತನಾಗಿದ್ದನು. ಈ ಸಮಯದಲ್ಲಿ ಹಸ್ತಿನಾವತಿಯ ಅರಮನೆ ಬೀದಿಯಲ್ಲಿ ಯಾರೋ ಡಂಗುರ ಸಾರಿಸಿದ ಸದ್ದು ಅರ್ಜುನನಿಗೆ ಕೇಳಿಸಿತು. ಮಣಿಪುರದ ರಾಣಿಯರಾದ ಚಿತ್ರ-ಕುಸುಮಾಲೆಯರೇ ಆ ಡಂಗುರ ಸಾರಿಸಿರುವುದು ಅರಮನೆಯ ದಾಸಿಯರಿಂದ ಅರ್ಜುನ ಕೇಳಿ ತಿಳಿದನು. ಡಂಗುರದ ಸಾರಾಂಶ ಈ ಕೆಳಗಿನಂತಿದೆ.

ಚಿತ್ರ-ಕುಸುಮಾಲೆಯರು ತಮ್ಮನ್ನು ವಿವಾಹವಾಗಿ ಹೋದ ಕಲಿಪಾರ್ಥನು ಮೂರು ತಿಂಗಳಿಗೆ ಬರುತ್ತೇನೆಂದು ಹೇಳಿ ಹೊರಟು ಹೋದವನು ಹನ್ನೆರಡು ವರ್ಷಗಳು ಕಳೆದರೂ ತಮ್ಮತ್ತ ಸುಳಿದಿಲ್ಲ. ಅವನ ತದ್ರೂಪವನ್ನು ಬರೆದು ಕೊಟ್ಟವರಿಗೆ (ಹುಡುಕಿ ಕೊಟ್ಟವರಿಗೆ) ತಮ್ಮ ರಾಜ್ಯದಲ್ಲಿನ

ಅರ್ಧ ರಾಜ್ಯವನ್ನು ಜೊತೆಗೆ ಮುತ್ತಿನ ಹಾರವನ್ನು ಕೊಡುವುದು ನಿಶ್ಚಯವೆಂದು ಡಂಗುರ ಸಾರಿಸಲಾಗಿತ್ತು. ಅರಮನೆಯ ದಾಸಿಯರಿಂದ ಈ ಸುದ್ದಿಯನ್ನು ಕೇಳಿದ ಅರ್ಜುನನು ತುಂಬಾ ಬೇಸರಗೊಂಡು ಮಣಿಪುರದ ರಾಣಿಯರ ಕನವರಿಕೆಯಲ್ಲಿಯೇ ನಿದ್ದೆ ಹೋದನು.

ಮರುದಿನ ಬೆಳಿಗ್ಗೆ ಅರ್ಜುನನು ನಡೆದ ಸಂಗತಿಯನ್ನೆಲ್ಲಾ ಮಡದಿ ದ್ರೌಪದಿಗೆ ಬಣ್ಣಿಸಿ ಹೇಳುತ್ತಾನೆ. ಈ ಸಂಗತಿಯನ್ನು ಕೇಳಿಸಿಕೊಂಡ ದ್ರೌಪದಿ ಮನದಲ್ಲಿಯೇ ಕೋಪಗೊಂಡು ಅವರ ಬಗ್ಗೆ ಕೊಂಕು ಮಾತುಗಳನ್ನು ನುಡಿದಳು ಅದೇನೆಂದರೆ,

ದೊರೆಯೆ ಸಿರಿಯಾರ ಮನಸ್ಸು

ಏನೂ ಇಲ್ಲದೆ ಹರುದಾಡುತಾವೆ ಎಂದು ಹೇಳುತ್ತ,

ಅಂತ ಬಂಡ ಸತಿಯರ ಬಳಿಗೆ

ಹ್ಯಾಂಗೆ ಹೋಗುವಿರಿ ಎಂದು ಮಣಿಪುರದ ರಾಣಿಯರನ್ನು ಬಂಡಸತಿಯರು ಎನ್ನುತ್ತಾ ಕೊಂಕು ನುಡಿಯುತ್ತಾಳೆ. ದ್ರೌಪದಿಯ ಈ ಮಾತುಗಳು ಅರ್ಜುನನನ್ನು ತುಂಬಾ ಕೆಣಕಿದವು. ಕೂಡಲೇ ಅರ್ಜುನ ದ್ರೌಪದಿಯನ್ನೇ ಬಂಡಸತಿ ಎಂದು ಬಯ್ದು ತಾನು ಈ ಕ್ಷಣದಲ್ಲೇ ಮಣಿಪುರಕ್ಕೆ ಹೋಗುವುದಾಗಿ ತನ್ನ ನಿರ್ಧಾರವನ್ನು ಪ್ರಕಟಿಸುತ್ತಾನೆ. ಅರ್ಜುನನ ಈ ದಿಢೀರ್ ನಿರ್ಧಾರವನ್ನು ಕೇಳಿ ದ್ರೌಪದಿ ಕಂಗಾಲಾಗುತ್ತಾಳೆ. ತಾನು ತೊಟ್ಟಿದ್ದ ಉಡುಗೆ-ತೊಡುಗೆಗಳನ್ನು ನೆಲಕ್ಕೆ ಹೊಗೆಯುತ್ತ ತನ್ನ ಅಂತರಂಗದಲ್ಲಿನ ಅಸಮಾಧಾನವನ್ನು ಹಾಗೂ ಆತಂಕವನ್ನು ಹೊರಹಾಕುತ್ತಾನೆ. ದ್ರೌಪದಿಯ ಅಂತರಂಗವನ್ನು ಅರಿತಿದ್ದ ಅರ್ಜುನ ತನ್ನ ನಿರ್ಧಾರವನ್ನು ಹಿಂತೆಗೆದುಕೊಳ್ಳುತ್ತಾನೆ. ಆಗ ದ್ರೌಪದಿ ಹರ್ಷದಿಂದ ತಮ್ಮಿಬ್ಬರ ಮಧ್ಯೆ ಏನೂ ನಡೆದಿಲ್ಲವೆಂಬಂತೆ ಅರ್ಜುನನೊಡಗೂಡಿ ಪಂಚಾಮೃತದ ಸವಿಯೂಟವನ್ನು ಮಾಡುತ್ತಾಳೆ. ಊಟವಾದ ಬಳಿಕ ಪಗಡೆಯಾಟಕ್ಕೆ ಅರ್ಜುನನನ್ನು ಆಹ್ವಾನಿಸುತ್ತಾಳೆ. ನಂತರ ದ್ರೌಪದಿ ಪಂಥದ ಮೇಲೆ ಆಟವಾಡಿದರೆ ಸೊಗಸಿರುತ್ತದೆಂದು ಹೇಳಿ ಅರ್ಜುನನೊಡನೆ ಪಂಥ ಕಟ್ಟುತ್ತಾಳೆ.

ಪಂಥ: ದ್ರೌಪದಿಯು ಅರ್ಜುನನಿಗೆ ತಾನು ಸೋತರೆ ಮಣಿಪುರದ ರಾಣಿಯರ ದಾಸಿಯಾಗಿ ಅವರ ಸೇವೆ ಮಾಡುತ್ತೇನೆ, ನೀನು ಸೋತರೆ ಹನ್ನೆರಡು ವರ್ಷಗಳವರೆಗೆ ಜೋಗಿಯಾಗಿ ದೇಶಾಂತರ ಹೋಗಬೇಕೆಂದು ಪಂಥ ಕಟ್ಟುತ್ತಾಳೆ. ಅರ್ಜುನ ಆಗಲಿ ಎಂದು ಹೇಳುತ್ತಾನೆ.

ಅರ್ಜುನನು ಒಂದಲ್ಲ, ಮೂರುಭಾರಿ ಗೆಲುವಿನ ಹಾದಿಯಲ್ಲಿ ಆಟವಾಡಿದರೂ ಪ್ರಯೋಜನವಾಗಲಿಲ್ಲ. ಅಂತಿಮವಾಗಿ ದ್ರೌಪದಿಯೇ ಪಗಡೆಯಾಟದಲ್ಲಿ ಗೆಲ್ಲುತ್ತಾಳೆ. ಇದರಿಂದ ವಿನೋದ ವಿಕೋಪಕ್ಕೆ ತಿರುಗಿದಂತಾಯಿತು. ಅರ್ಜುನನು ಕ್ಷತ್ರಿಯ ಧರ್ಮ ಪಾಲಿಸಲು ಮಾತು ತಪ್ಪದೇ ವಚನ ಪಾಲಿಸಲು ಸನ್ಯಾಸಿ ವೇಷ ಧರಿಸಿ ಭೂಲೋಕದಲ್ಲಿ ಸಂತನಾಗಿ ಹೊರಡುತ್ತಾನೆ.

ಹೀಗೆ ದೇಶಾಂತರ ಹೊರಟ ಅರ್ಜುನ ಏಳು ತಲೆ ಗುಡ್ಡದಲ್ಲಿನ ಸಿದ್ಧರ ಮಠಕ್ಕೆ ಬಂದು

ತಲುಪುತ್ತಾನೆ. ಅಲ್ಲಿ ಏಳು ಮಂದಿ ಸಿದ್ದರ ಸೇವೆಯಲ್ಲಿ ನಿರತನಾಗುತ್ತಾನೆ. ನಂತರ ಅರ್ಜುನ ಸಿದ್ದರಲ್ಲಿ ತಾನು 'ಜೋಗಿಯಾಗುವುದಾಗಿ' ತನ್ನ ಮನದ ಇಂಗಿತವನ್ನು ವ್ಯಕ್ತಪಡಿಸುತ್ತಾನೆ. ಸಿದ್ದರು ಅರ್ಜುನನಿಗೆ ಮಾಳಾವತಿ ದೇಶದ ರಕ್ಕಸಿಯನ್ನು ಕೊಂದು ಅವಳ ದೇಹದಿಂದ ಕಿನ್ನೂರಿ ತಯಾರಿಸಿ ಅದನ್ನು ಅರ್ಜುನನಿಗೆ ನೀಡಿ, ಅವನಿಗೆ ಸಿದ್ದರು ಜೋಗಿದೀಕ್ಷೆಯನ್ನು ನೀಡಿದರು.

ಜೋಗಿ ದೀಕ್ಷೆ ಪಡೆದು ಜೋಗಿಯಾದ ಅರ್ಜುನನು ತನ್ನನ್ನು ಈ ವೇಷದಲ್ಲಿ ಗುರುತಿಸುತ್ತಾರೆಯೇ ಎಂಬುದನ್ನು ಪರೀಕ್ಷಿಸಲು ಮೊದಲು ತಮ್ಮ ಸಾಮ್ರಾಜ್ಯವಾದ ಹಸ್ತಿನಾವತಿಗೇ ಬರುತ್ತಾನೆ. ಹಸ್ತಿನಾವತಿಯ ರಾಜಬೀದಿಗಳೆಲ್ಲೆಲ್ಲಾ ಹಾಡಿ, ನರ್ತಿಸಿ ಅಲ್ಲಿನ ಜನರ ಗಮನ ಸೆಳೆಯುತ್ತಾಳೆ. ನಂತರ ಹಸ್ತಿನಾವತಿಯ ದೊರೆಯಾದ ಧರ್ಮರಾಯನು ಜೋಗಿಯನ್ನು ರಾಜಸಭೆಗೆ ಬರಮಾಡಿಕೊಂಡು ಅವನಿಂದ ಹಾಡು ಹಾಡಿಸಿ ನಂತರ ಜೋಗಿಯನ್ನು ಉಪಚರಿಸಿ ತಮ್ಮ ಭೋಜನಶಾಲೆಗೆ ಕಳುಹಿಸಿಕೊಡುತ್ತಾನೆ.

ಅರಮನೆಯಲ್ಲಿದ್ದ ಕುಂತಿಯು ದೇಶಾಂತರ ಹೋಗಿದ್ದ ತನ್ನ ಮಗ ಅರ್ಜುನನ ಬಗ್ಗೆ ತಿಳಿಯುವ ಆತುರದಿಂದ ಜೋಗಿಯ ಬಳಿಗೆ ಬಂದು ಅರ್ಜುನನ ಕುರುಹನ್ನೇನಾದರೂ ಕಂಡಿದ್ದರೆ ತನಗೆ ತಾವುಗಳು ತಿಳಿಸಬೇಕೆಂದು ಕೇಳಿಕೊಳ್ಳುತ್ತಾಳೆ. ಆಗ ಜೋಗಿಯು ಕುಂತಿಗೆ ಒಂದು ಕೋರಿಕೆಯನ್ನು ಸಲ್ಲಿಸುತ್ತಾನೆ.

'ತಾನು ಬೇಡಿದ್ದನ್ನು ಕೊಡುವುದಾದರೆ ಮಾತ್ರ ಹೇಳುವುದಾಗಿ ತಿಳಿಸುತ್ತಾನೆ.' ಅದಕ್ಕೆ ಕುಂತಿಯು ಜೋಗಿಗೆ ಬೇಡಿದ್ದನ್ನು ಕೊಡುವುದಾಗಿ ಒಪ್ಪಿಗೆ ಸೂಚಿಸುತ್ತಾಳೆ.

ಜೋಗಿಯ ವೇಷದಲ್ಲಿದ್ದ ಅರ್ಜುನನು ತಾಯಿ ಕುಂತಿಗೆ ಮರುಳುಗೊಳಿಸಿ ತನ್ನ ಕೈಯಲ್ಲಿದ್ದ ಬೆರಳ ಉಂಗುರವನ್ನು ತೋರಿಸಿ, ಇದನ್ನು ಅರ್ಜುನನು ತನಗೆ ಕೊಟ್ಟು ಕಳುಹಿಸಿರುವುದಾಗಿ ಹೇಳಿ ಕುಂತಿಯ ಕಾತರವನ್ನು ಮತ್ತಷ್ಟು ಹೆಚ್ಚಿಸುತ್ತಾನೆ. ಕುಂತಿಯ ಕುತೂಹಲ ಹೆಚ್ಚುತ್ತಾ ಅರ್ಜುನನ ಕುರಿತ ವಿವರಗಳನ್ನೆಲ್ಲಾ ಜೋಗಿಯಿಂದ ಕೆದಕಿ ತಿಳಿದುಕೊಳ್ಳುತ್ತಾಳೆ. ಜೋಗಿಯು ಚತುರತೆಯಿಂದಲೇ ಅರ್ಜುನನ ಎಲ್ಲಾ ವಿವರಗಳನ್ನು ಕುಂತಿಗೆ ವಿವರಿಸಿಕೊಡುತ್ತಾನೆ. ಇದಾದ ನಂತರ ಕುಂತಿಯು ಜೋಗಿಗೆ ಸಾಂಪ್ರದಾಯಿಕ ದಾನವನ್ನು ನೀಡಲು ಮುಂದಾಗುತ್ತಾಳೆ. ಆಗ ಜೋಗಿ ಆ ಸಾಂಪ್ರದಾಯಿಕ ದಾನವನ್ನು ನಿರಾಕರಿಸುತ್ತಾನೆ. ಕುಂತಿಗೆ ನೀನು ನನಗೆ ಬೇಡಿದ್ದನ್ನು ಕೊಡುವುದಾಗಿ ವಚನ ಕೊಟ್ಟಿರುವೆ ನೆನಪಿದೆಯಾ, ಹಾಗಾಗಿ ನನಗೆ ದ್ರೌಪದಿಯನ್ನೇ ದಾನ ಕೊಡಬೇಕೆಂದು ಕುಂತಿಯಲ್ಲಿ ಹಟ ಹಿಡಿಯುತ್ತಾನೆ. ಇದರಿಂದಾಗಿ ಕುಂತಿ ಪೇಚೆಗೆ (ಇಕ್ಕಟ್ಟಿಗೆ) ಸಿಲುಕುತ್ತಾಳೆ. ನಂತರ ಅರ್ಜುನನೊಬ್ಬನನ್ನು ಬಿಟ್ಟು ಉಳಿದ ಮಕ್ಕಳ ಸಮ್ಮತಿಯನ್ನು ಪಡೆದು ದ್ರೌಪದಿಯನ್ನು ಜೋಗಿಗೆ ಒಪ್ಪಿಸಿ ಘೋರ ಧರ್ಮಸಂಕಟದಿಂದ ಪಾರಾಗುತ್ತಾಳೆ.

ಹೀಗೆ ಅತ್ತೆಯ ಮಾತನ್ನು ತಿರಸ್ಕರಿಸಲಾಗದೆ ದ್ರೌಪದಿಯು ಜೋಗಿಯನ್ನು ಅರಮನೆಯೊಳಗೆ ಬರಮಾಡಿಕೊಳ್ಳುತ್ತಾಳೆ. ನಂತರ ಮುತ್ತಿನ ಮಣೆಯ ಮೇಲೆ ಜೋಗಿಯನ್ನು ನಿಲ್ಲಿಸಿ ಅವನ ಪಾದಗಳನ್ನು ತೊಳೆಯುತ್ತಾಳೆ. ಆಗ ದ್ರೌಪದಿ ಜೋಗಿಯ ಪಾದದಲ್ಲಿ ಪದ್ಮ (ಕಮಲ) ವಿದ್ದುದನ್ನು

ಗುರುತಿಸಿದಳು. ನಂತರ ಜೋಗಿಯ ಮುಖವನ್ನು ತೊಳೆದಳು ಆಗ ಹಲ್ಲಿನಲ್ಲಿ ರತ್ನವಿದ್ದುದನ್ನು ಕಂಡಳು. ಆಗ ದ್ರೌಪದಿಯು ಈ ಜೋಗಿಯು ಅರ್ಜುನನಲ್ಲದೇ ಮತ್ತಾರೂ ಅಲ್ಲವೆಂಬುದನ್ನು ಖಚಿತಪಡಿಸಿಕೊಂಡು ಅವನ ಪಾದಗಳಿಗೆ ಬಿದ್ದು, ಮೊದ ಮೊದಲು ತಾನು ಅತ್ತೆಗೆ ಅಸಮ್ಮತಿ ಸೂಚಿಸಿದ್ದಕ್ಕಾಗಿ ಅರ್ಜುನನಲ್ಲಿ ಕ್ಷಮೆ ಕೋರುತ್ತಾಳೆ.

ಹೀಗೆ ಅರ್ಜುನನ ನಿಜರೂಪ ಬಯಲಾದ ಮೇಲೆ ಭೀಮಸೇನನು ತಮ್ಮನಾದ ಅರ್ಜುನನಿಗೆ ಮಣಿಪುರದ ರಾಣಿಯರ ಪಾಡನ್ನು ವಿವರಿಸುತ್ತಾನೆ. ಆ ಕೂಡಲೇ ಅರ್ಜುನನು ಜೋಗಿರೂಪ ತಾಳಿ ಅಲ್ಲಿಂದ ಮಣಿಪುರಕ್ಕೆ ಹೊರಡುತ್ತಾನೆ. ಅಲ್ಲಿ ಮಣಿಪುರದ ರಾಣಿಯರೆದುರು ಅರೆ ಹುಚ್ಚನಂತೆ ವರ್ತಿಸಿ ಅವರನ್ನು ಕೆಡಿಸಲುಬಂದವನಂತೆ ನಟಿಸುತ್ತಾನೆ. ಶೀಲ ಸಂಪನ್ನೆಯರಾಗಿದ್ದ ಚಿತ್ರ-ಕುಸುಮಾಲೆಯರು ಉಪಾಯದಿಂದ ಜೋಗಿಯಿಂದ ತಪ್ಪಿಸಿಕೊಂಡು ಬಂದು ದ್ರೌಪದಿಯಲ್ಲಿ ಆಶ್ರಯ ಪಡೆಯುತ್ತಾರೆ.

ಮರುದಿನ ಶಿವಪೂಜೆ ವ್ರತ ನೇಮಾದಿಗಳನ್ನು ಮುಗಿಸಿಕೊಂಡು (ಪೂರೈಸಿಕೊಂಡು) ಬರಲು ನದಿಗೆ ಹೋಗಿದ್ದ ಅರ್ಜುನ ಮಣಿಪುರಕ್ಕೆ ಬಂದು ನೋಡಿದಾಗ ರಾಣಿಯರು ಅಲ್ಲಿಂದ ತಪ್ಪಿಸಿಕೊಂಡು ಹೋಗಿರುವುದು ವಿಧಿತವಾಗಿ ಹಸ್ತಿನಾವತಿಗೆ ಮರಳಿ ಬಂದನು. ಅರ್ಜುನನು ದ್ರೌಪದಿಯ ಬಳಿಗೆ ಬಂದು ಮಣಿಪುರದ ರಾಣಿಯರು ಗರತಿಯರೋ ಅಥವಾ ವಾರಂಗನೆರೋ ಎಂದು ಪ್ರಶ್ನಿಸುತ್ತಾನೆ. ಆಗ ದ್ರೌಪದಿಯು ತಾನಾಡಿದ ಮಾತಿನ ತಪ್ಪು ಅರಿವಾಗಿ ಪಶ್ಚತ್ತಾಪ ವ್ಯಕ್ತಪಡಿಸಿ ಮಣಿಪುರದ ರಾಣಿಯರನ್ನು ಕೊಂಡಾಡುತ್ತಾಳೆ. ಜೊತೆಗೆ ಅರ್ಜುನನಲ್ಲಿ ಕ್ಷಮೆ ಕೋರುತ್ತಾಳೆ.

ಹೀಗೆ ಕತೆಯು ಮುಂದುವರಿಯುವುದು ಕಂಡುಬರುತ್ತದೆ. ಈ ಹಾಡಿನಲ್ಲಿ ಜೋಗಿಮಠದ ಸಿದ್ದರು ಅರ್ಜುನನಿಗೆ ದೀಕ್ಷೆ ಕೊಡುವ ಸಂದರ್ಭದಲ್ಲಿ ದೇವಾನು ದೇವತೆಗಳ ಪ್ರಸ್ತುತಿಯನ್ನು ತುಂಬಾ ಅಲೌಕಿಕವಾಗಿ ಸೃಷ್ಟಿಸಿರುವುದನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ಜೋಗಿಗಳ ಜನಪದ ಕತೆಗಳ ಕಥಾ ಹಂದರವು ಲೌಕಿಕತೆಗಿಂತ ಹೆಚ್ಚು ಅಲೌಕಿಕ ಪ್ರಪಂಚದ ಕತೆಯನ್ನು ವರ್ಣಿಸುವವಂತಹವುಗಳಾಗಿರುವುದು ಮೇಲಿನ ಹಾಡುಗಳ ಮೂಲಕ ಕಂಡುಬರುತ್ತದೆ. ಅಂತಹ ಒಂದು ಅಲೌಕಿಕ (ದೈವಿಕ) ಚಿತ್ರಣದ ಸೃಷ್ಟಿಯನ್ನು ಅರ್ಜುನನಿಗೆ ದೀಕ್ಷೆ ನೀಡುವ ಸಂದರ್ಭ ವಿವರಿಸುತ್ತದೆ.

ಜೋಗಿಮಠದ ಸಿದ್ಧರು ಅರ್ಜುನನಿಗೆ ಜೋಗಿ ದೀಕ್ಷೆ ನೀಡುವಾಗ ದೇವಲೋಕದಿಂದ ದೇವಕನ್ನೆಯರನ್ನು ಬರಮಾಡಿಕೊಳ್ಳುವ ಸಂದರ್ಭ ಅಂತಹ ಒಂದು ಸನ್ನಿವೇಶವಾಗಿರುವುದನ್ನು ಗುರುತಿಸಬಹುದಾಗಿದೆ.

ದೇವಕನ್ನಿಕೆಯರು ಸೊಪ್ಪಿನ ಉಡುಗೆ ತೊಟ್ಟು ಬಂದು ಸೋಬಾನೆ ಹಾಡುಗಳನ್ನು ಹಾಡುತ್ತ ಅರ್ಜುನನಿಗೆ ನೀರೆರೆದು ಕಳಸಗನ್ನಡಿ ಹಿಡಿದು ವಿದ್ಯುಕ್ತ ರೀತಿಯಲ್ಲಿ ಅವನನ್ನು ಮಠಕ್ಕೆ ಕರೆತರುವುದು.

ಅಲ್ಲಿ ಋಷಿಗಳ ಎದುರಲ್ಲಿ ಕುಳ್ಳಿರಿಸಿ ಅರ್ಜುನನಿಗೆ ಸೇಸೆ ಹಾಕುವುದು. ಇವರ ಹಾಡಿನಲ್ಲಿ ಅರ್ಜುನನಿಗೆ ನೀಡಿದ ಜೋಗಿದೀಕ್ಷಾ ವಿಧಾನವನ್ನು ಪರಿಚಯಿಸಿ ವಿವರಿಸುತ್ತಿರುವುದು ಕಂಡುಬರುತ್ತದೆ.

ಜೋಗಿಮಠದ ಸಿದ್ಧರು ಅರ್ಜುನನಿಗೆ ಕಿವಿಯಲ್ಲಿ ರಂಧ್ರ ಮಾಡಿ ಕಾಮಾಕ್ಷೆ (ಕರ್ಣಕುಂಡಲ) ತೊಡಿಸುತ್ತಾರೆ. ನಂತರ ಕೊರಳಲ್ಲಿ ಸಿಂಗನಾದ ಹಾಕುತ್ತಾರೆ. ಜೊತೆಗೆ ಕತ್ತಿನ ತುಂಬ ಮುತ್ತಿನ ಕಂತೆಯ ಸರಗಳನ್ನು ಹಾಕುತ್ತಾರೆ. ಕಚ್ಚೆಪಂಚೆ, ಕಾವಿ ವಸ್ತ್ರ ತೊಟ್ಟು ಎರಡೂ ಬಗಲಿಗೆ ಎರಡು ಜೋಳಿಗೆಗಳನ್ನು ನೀಡುತ್ತಾರೆ. ಒಂದು ಕೈಗೆ ಗಗ್ಗರ, ಮತ್ತೊಂದು ಕೈಯಲ್ಲಿ ಕಿನ್ನೂರಿ, ಕಾಲಲ್ಲಿ ಕಿರುಗೆಜ್ಜೆ ತೊಡಿಸಿ ಕುಣಿಯಲು ಹೇಳುವುದು.

ಲೌಕಿಕ ಕಥೋಪಜೀವಿಗಳಾದ ಇವರು ಹಾಡುಗಾರಿಕೆ ಸಂಪ್ರದಾಯವನ್ನೇ ಮುಖ್ಯವಾಗಿ ತಮ್ಮ ವೃತ್ತಿಯನ್ನಾಗಿಸಿಕೊಂಡಿರುವ ಇವರು ತಮ್ಮ ಹಾಡುಗಳ ಮುಖಾಂತರ ನೀತಿ ಪ್ರತಿಪಾದನೆಯ ಜೊತೆಗೆ ಲೋಕವನ್ನು ತಿದ್ದುವಂತಹ ಕೆಲಸಗಳನ್ನು ಮಾಡುತ್ತಿರುವುದು ಕಂಡುಬರುತ್ತದೆ. ನೀತಿ ಪ್ರತಿಪಾದನೆಯೇ ಇವರ ಹಾಡುಗಳ ಪರಮ ಉದ್ದೇಶವಾಗಿರುವುದು ಕಂಡುಬರುತ್ತದೆ.

ಅರ್ಜುನ ಜೋಗಿಯ ಹಾಡಿನಲ್ಲಿ ಸಿದ್ದರ ಮೂಲಕ ಅರ್ಜುನನಿಗೆ ಭ್ರಷ್ಟತನಕ್ಕೆ ಇಳಿಯಬಾರದು ಎಂಬ ಉಪದೇಶವನ್ನು ಹೇಳುವ ಮೂಲಕ ಎಚ್ಚರಿಕೆಯನ್ನು ನೀಡಿ, ಆ ಮೂಲಕ ಸಚ್ಚಾರಿತ್ರ್ಯವನ್ನು ಸುಸಂಸ್ಕೃತ ನಡವಳಿಕೆಯನ್ನು ರೂಢಿಸಿಕೊಳ್ಳುವಂತೆ ಉಪದೇಶ ಮಾಡಲಾಗುತ್ತದೆ.

**ಸಿದ್ದರು ಅರ್ಜುನನ್ನು ಉದ್ದೇಶಿಸಿ ಹೇಳಿದ ಮಾತುಗಳು**

ಸಿರಿಮಾವೋ ಎಂಬೋದು



ಅರಾಜೂನ – ಬಾಳಾ ಕೆಟ್ಟದಯ್ಯ

ಅವರು ಮಯ್ಯಾ ಮೇಲೆ ಬೀಳುತಾರೆ

ನೀನು ಕಣ್ಣೆತ್ತಿ ನೋಡಬ್ಯಾಡ

ನೋಡು–ನಾವು ಕೊಟ್ಟಂತ ಮುದ್ರೀಕಿ (ದೀಕ್ಷೆ)

ಬ್ರಸ್ಟುತನಕೆ ಕೊಡುಬ್ಯಾಡ



ಎಂದು ಎಚ್ಚರಿಕೆಯ ಮಾತುಗಳನ್ನು ಆಡುತ್ತಾರೆ.

ಈ ಮೇಲಿನ ಅರ್ಜುನ ಜೋಗಿಯ ಹಾಡನ್ನು ಗಮನಿಸಿದರೆ ಅನೇಕ ಅಂಶಗಳನ್ನು ಗೋಚರಿಸುತ್ತವೆ. ಹಂಡಿಜೋಗಿಗಳು ಅರ್ಜುನ ಜೋಗಿಯ ಹಾಡಿನ ಮುಖಾಂತರ ಅನೇಕ ಗುಣಾವಗುಣಗಳನ್ನು ಕತೆ ಮೂಲಕ ತಿಳಿಸುತ್ತಿರುವುದು ಕಂಡುಬರುತ್ತದೆ. ಇವರು ಹೆಚ್ಚಾಗಿ 'ಪಾಂಡವರ ಕತೆ'ಯನ್ನು ಹಾಡುವುದರೊಂದಿಗೆ ಆ ಮೂಲಕ ಉದಾತ್ತ ಮೌಲ್ಯಗಳನ್ನು ಪ್ರತಿಪಾದಿಸುತ್ತಿರುವುದು ಕಂಡುಬರುತ್ತದೆ. ಪಾಂಡವರ ಕತೆಯ ಮೂಲಕ, ಸತ್ಯ, ಪ್ರಾಮಾಣಿಕತೆ, ದಾನ–ಧರ್ಮ, ಶೀಲ–

ಸಂಪನ್ನತೆ, ಸದ್ಗುಣಗಳು, ವಿನಯಪರತೆ, ನ್ಯಾಯ-ನೀತಿಗೆ ಸಂಬಂಧಿಸಿದ ಅನೇಕ ನಿದರ್ಶನಗಳನ್ನು ವಿವರಿಸುತ್ತ ಕತೆಯನ್ನು ಹಾಡುತ್ತಿರುವುದು ಕಂಡುಬರುತ್ತದೆ. ಕೌರವರ ಮೂಲಕ ದುರ್ನಡತೆ, ದ್ವೇಷ, ಅನ್ಯಾಯ, ಅಸೂಯೆ, ಅಪ್ರಾಮಾಣಿಕತೆ, ಅಧರ್ಮ, ಅನೀತಿ, ಕುಟಿಲತೆ, ಭ್ರಷ್ಟತನ, ಅನೈತಿಕತೆ ಮುಂತಾದ ದ್ವೇಷಬುದ್ಧಿಯ ಅವಗುಣಗಳನ್ನು ಕೌರವರ ಪಾತ್ರಗಳ ಮುಖಾಂತರ ಅಭಿವ್ಯಕ್ತಿಸುವುದನ್ನು ಗುರುತಿಸಬಹುದಾಗಿದೆ. ಮೂಲ ಕತೆಯ ನಿರೂಪಣೆಯ ಜೊತೆಗೆ ನೀತಿ ಪ್ರಧಾನತೆಯನ್ನು ಹೇಳುವುದು ಇವರ ಹಾಡುಗಳಲ್ಲಿನ ಪರಮ ಉದ್ದೇಶವಾಗಿರುವುದು ಕಂಡುಬರುತ್ತದೆ.

ಮಹಾಭಾರತದ ಅರ್ಜುನನೇ ನಮ್ಮ ಸಂಸ್ಕೃತಿಯ ನಾಯಕ. ಅವನಿಂದಲೇ ನಾವು ಸಮುದಾಯದ ಕುಲಸಂಕೇತಗಳನ್ನು (ಕಿನ್ನರಿ) ಪಡೆಯಲಾಯಿತು ಎಂದು ವಿವರಿಸುತ್ತಾರೆ. ಜೊತೆಗೆ ಇವರು ಅರ್ಜುನ ಜೋಗಿಯಾಗಿ ದೇಶಾಂತರ ಪರ್ಯಟನೆ ಮಾಡುವ ಭಾಗವನ್ನು ಹಾಗೂ ಜೋಗಿಯಾಗಿ ತಾಯಿ ಕುಂತಿಯನ್ನು ಭೇಟಿ ಮಾಡಿದ ಸಂದರ್ಭ ಕುರಿತು ತುಂಬಾ ಸೊಗಸಾಗಿ ಹಾಡುಗಳನ್ನು ಹಾಡುತ್ತಿರುವುದು ಕಂಡುಬರುತ್ತದೆ. ಪ್ರಮುಖವಾಗಿ ಪಾಂಡವರ ಕತೆಯನ್ನು ಆಯ್ದುಕೊಂಡು ಆ ಮೂಲಕ ನೀತಿ, ಸತ್ಯ, ಮೌಲ್ಯ, ಪ್ರಾಮಾಣಿಕತೆಗೆ ಜಯ ಯಾವಾಗಲೂ ದೊರಕುತ್ತದೆ ಎಂಬುದನ್ನು ಪ್ರತಿಪಾದಿಸುತ್ತಾರೆ. ಇವರ ಹಾಡುಗಳಲ್ಲಿ ನೀತಿಪರತೆ, ಸಮಾಜಪರತೆ, ಹಾಸ್ಯಭಾವ, ಪರಸ್ಪರ ವಿಡಂಬನೆಯನ್ನು ಗುರುತಿಸಬಹುದಾಗಿದೆ. ಇವರು ಹಾಡುವ ಮಹಾಭಾರತದ ಕತೆ ಶಿಷ್ಟ ರಚನೆಗಿಂತ ತುಂಬಾ ಭಿನ್ನತೆಯಿಂದ ಕೂಡಿರುವುದು ಕಂಡುಬರುತ್ತದೆ. ಮಹಾಭಾರತದಲ್ಲಿನ ಒಂದೊಂದು ಪಾತ್ರಗಳನ್ನು ಒಂದೊಂದು ಗುಣಕ್ಕೆ ಹೊಂದಿಸಿಕೊಂಡು ಹಾಡುವ ಮನೋಭಾವವನ್ನು ಗುರುತಿಸಬಹುದಾಗಿದೆ.

ಶೂರ-ಅರ್ಜುನ

ಬಲ-ಭೀಮ

ದುರುಳ-ಕೌರವ

ಪಾಪಿ-ದುಶ್ಯಾಸನ

ಹೀಗೆ ಅನೇಕ ಗುಣ-ಅವಗುಣಗಳನ್ನು ಒಂದೊಂದು ವ್ಯಕ್ತಿತ್ವಕ್ಕೆ ಆರೋಪಿಸಿ ಹಾಡುವುದನ್ನು ಕಾಣಬಹುದಾಗಿದೆ.

ಮಹಾಭಾರತ ಕತೆಯ ಜೊತೆಗೆ ಶಿವ-ಪಾರ್ವತಿಯ ಕುರಿತಾಗಿ ಅನೇಕ ಹಾಡುಗಳನ್ನು ಹಾಡುತ್ತಿರುವುದು ಕಂಡುಬರುತ್ತದೆ. ಶಿವನ ಸಾಂಸಾರಿಕ ಜೀವನಕ್ರಮವನ್ನು ಕುರಿತು ಬಹು ಸುಂದರವಾಗಿ ಹಾಡುಗಳಲ್ಲಿ ವರ್ಣಿಸಿ ಹಾಡುತ್ತಿರುವುದನ್ನು ಕಾಣಬಹುದಾಗಿದೆ. ಪ್ರಮುಖ ಈ ಕೆಳಗಿನ ಹಾಡುಗಳನ್ನು ಹಾಡುತ್ತಾರೆ. ಇವು ಶಿವನ ಕತೆಗೆ ಸಂಬಂಧಿಸಿದವುಗಳಾಗಿರುತ್ತವೆ.

ಶಿವ-ಪಾರ್ವತಿಯ ಕತೆ

ಗಂಗೆ-ಗೌರಿಯ ಕತೆ

ಭೈರವ–ಮಾಳವ್ವರ ಕತೆ

ಭೈರವ–ಕಾಳಿಯ ಕತೆ ಹೀಗೆ ಶಿವನಿಗೆ ಸಂಬಂಧಿಸಿದ ಅನೇಕ ಕತೆಗಳನ್ನು ಮೌಖಿಕ ಸಂಪ್ರದಾಯದಲ್ಲಿ ತಮ್ಮದೇ ಆದ ಧಾಟಿಯಲ್ಲಿ ಹಾಡುವುದನ್ನು ಗುರುತಿಸಬಹುದಾಗಿದೆ.

ಇದರ ಜೊತೆಗೆ ಸಾಂಸಾರಿಕ, ಕುಟುಂಬ ಜೀವನಕ್ಕೆ ಸಂಬಂಧಿಸಿದ ಅನೇಕ ಲಾವಣಿಗಳನ್ನು ಹಾಡುತ್ತಾರೆ. ಇವು ಕುಟುಂಬದ ಸದಸ್ಯರಲ್ಲಿನ ಮನೋವಿಚಾರಗಳಿಗೆ ಸಂಬಂಧಿಸಿದವುಗಳಾಗಿರುತ್ತವೆ. ಅಂತಹ ಪ್ರಮುಖ ಲಾವಣಿಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

ಅಣ್ಣ–ತಂಗಿಯ ಹಾಡು

ಗಂಡ–ಹೆಂಡತಿಯ ಹಾಡು

ಅತ್ತೆ–ಸೊಸೆಯ ಹಾಡು

ಪ್ರಸಿದ್ಧವಾದವುಗಳಾಗಿವೆ. ಇವುಗಳು ಜನಪದರ ರಚನೆಗಳಿಗೆ ಸಂಬಂಧಿಸಿದವುಗಳಾಗಿರುವುದನ್ನು ಗುರುತಿಸಬಹುದಾಗಿದೆ. ಇವರ ಹಾಡು ಹಾಗೂ ಕತೆಗಳಲ್ಲಿನ ವಿಷಯವಸ್ತು ಮತ್ತು ಪಾತ್ರಗಳು ಜನಸಾಮಾನ್ಯರು ಹಾಗೂ ಸಾಮಾಜಿಕತೆಗೆ (ವಾಸ್ತವತೆಗೆ) ಸಂಬಂಧಪಟ್ಟವುಗಳಾಗಿರುವುದನ್ನು ಗುರುತಿಸಬಹುದಾಗಿದೆ. ಇವರ ಕಥನ ಕಲೆಯ ನಿರೂಪಣೆ ತುಂಬಾ ಸರಳತೆಯಿಂದ ಕೂಡಿರುತ್ತದೆ.

ಜೊತೆಗೆ ಇವರು ತಮ್ಮದೇ ಶೈಲಿಯಲ್ಲಿ ಧಾರ್ಮಿಕವಲ್ಲದ ಅನೇಕ ಸರಳ ಜನಪದ ಕತೆಗಳನ್ನು ಸಹ ಹಾಡುತ್ತಿರುವುದನ್ನು ಗುರುತಿಸಬಹುದಾಗಿದೆ. ಈ ಜನಪದ ಕತೆಗಳ ಮುಖಾತರ ಸಾಮಾಜಿಕ ಮೌಲ್ಯಗಳನ್ನು ಸಾರುವ ಕೆಲಸವನ್ನು ಇವರು ಮಾಡುತ್ತಿರುವುದು ಕಂಡುಬರುತ್ತದೆ. ನೀತಿ ಪ್ರತಿಪಾದಿಸಿಯೇ ಇವರ ಹಾಡುಗಳ ಪ್ರಧಾನ ಧ್ಯೇಯವಾಗಿರುತ್ತದೆ. ಅಂತಹ ನೀತಿ ಪ್ರಧಾನವಾದ ಜನಪದ ಕತೆಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ. ಅವುಗಳೆಂದರೆ,

ರಾಜಹಂಸ – ಪರಮಹಂಸ

ಶಿವಸಂಕಿನ ಕುಮಾರ

ಆಶಾವತಿ (ಆಸಾವತಿ)

ಶಾಮಸೇನ (ಶೂರಸೇನ)

ಚಿತ್ರಶೇಖರ – ಸೋಮಶೇಖರ

ಧರ್ಮಸೇನರಾಜ

ಬಸವಕುಮಾರ–ಲೋಹಿತಕುಮಾರ

ಸತಿಶೀಲಾವತಿ

ವೀರಸೇನ – ಕೋಕಿಲೆ

ಗೋಪಮ್ಮನ ಕತೆ ಪ್ರಮುಖವಾದವುಗಳಾಗಿವೆ.

ಇವೆಲ್ಲವುಕ್ಕಿಂತ ಮುಖ್ಯವಾಗಿ ಆಧುನಿಕತೆಗೆ ಸಂಬಂಧಿಸಿದಂತೆ ಮನುಷ್ಯರ ಸ್ವಭಾವಗಳನ್ನು ಗುರುತಿಸಿ ಕ್ಷಣಮಾತ್ರದಲ್ಲಿಯೇ ಹಾಡುಗಳ ಮುಖಾಂತರ ವ್ಯಕ್ತಪಡಿಸುವ ಕಲಾವಿದರಾಗಿದ್ದಾರೆ.

ಕೇಳುಗರ ಸ್ವಭಾವ (ಮನಸ್ಥಿತಿ)ಯನ್ನು ಅರಿತು ಆಯಾ ಸ್ಥಳದಲ್ಲಿಯೇ ಸಂದರ್ಭಕ್ಕೆ ತಕ್ಕಂತೆ ಹಾಡುಗಳನ್ನು ಪ್ರತಿಕ್ರಿಯೆಯ ರೂಪದಲ್ಲಿ ಕಟ್ಟಿ ಹಾಡುವುದನ್ನು ಕಾಣಬಹುದಾಗಿದೆ. ಇವರ ಹಾಡುಗಳಲ್ಲಿ ಸಾಮಾಜಿಕ ವಿಡಂಬನೆ, ಸಾಮಾಜಿಕ ಸಂಗತಿಗಳ ವಿಮರ್ಶೆ, ಅಹಂಕಾರ, ದಬ್ಬಾಳಿಕೆಯ ವಿರುದ್ಧದ ನವಿರಾದ ವ್ಯಂಗ್ಯತೆ ಎದ್ದು ಕಾಣುತ್ತದೆ.

ಹಂಡಿಜೋಗಿಗಳಲ್ಲಿ ಏಕವ್ಯಕ್ತಿಯಿಂದ ಹಿಡಿದು ೩-೫ ಜನರಿಂದೊಡಗೂಡಿ ಕಲಾ ಪ್ರದರ್ಶನವನ್ನು ನೀಡುವ ಪದ್ಧತಿ ರೂಢಿಯಲ್ಲಿರುವುದು ಕಂಡುಬರುತ್ತದೆ. ಹಾಡುಗಾರಿಕೆ ಕಲೆಯ ಪ್ರದರ್ಶನದಲ್ಲಿ ತೊಡಗಬೇಕಾದರೆ ಸಮುದಾಯದಲ್ಲಿ ಕೆಲವು ನಿಯಮಗಳಿರುತ್ತದೆ.

ಹಂಡಿಜೋಗಿಗಳು ತಮ್ಮ ಕುಲದಲ್ಲಿ (ಕುಟುಂಬದಲ್ಲಿ) ಹೆಣ್ಣು ಮಕ್ಕಳು ಮೈನೆರೆದರೆ, ಹೆಣ್ಣುಮಗಳನ್ನು ಮನೆಯೊಳಗೆ ಕರೆತರುವತನಕ ಕುಟುಂಬದಲ್ಲಿನ ಪುರುಷರು ಹಾಡುಗಾರಿಕೆ ಕಲಯ ಪ್ರದರ್ಶನದಲ್ಲಿ ಪಾಲ್ಗೊಳ್ಳುವುದಿಲ್ಲ.

ಹಂಡಿಜೋಗಿಗಳು ತಮ್ಮ ಕುಟುಂಬದಲ್ಲಿ ಯಾರಾದರೂ ಸಾವನ್ನಿಪ್ಪಿದರೆ ಸತ್ತ ವ್ಯಕ್ತಿಯ ತಿಥಿ ಕಾರ್ಯಗಳು ಮುಗಿಯುವವರೆಗೆ ಹಾಡುಗಾರಿಕೆಯ ಕಲಾ ಪ್ರದರ್ಶನಕ್ಕೆ ಹೋಗುವುದಿಲ್ಲ.

ಕುಟುಂಬದಲ್ಲಿ ತಿಂಗಳ ಮುಟ್ಟಾದ ಮಹಿಳೆಯರು ಸಹ ಜೋಗಿಯ ಉಪಕರಣಗಳಾದ (ಸಂಕೇತಗಳು) ತ್ರಿಶೂಲ, ಸಿಂಗನಾದ, ರುದ್ರಾಕ್ಷಿ, ಹಂಡೆ (ಭಿಕ್ಷಾಪಾತ್ರೆ), ಕಿನ್ನರಿ ಇವುಗಳನ್ನು ಮುಟ್ಟುವಂತಿಲ್ಲ. ಮುಟ್ಟಿಂದರೆ ಅಶುಭ ಅಥವಾ ಮೈಲಿಗೆಯಾಗುತ್ತದೆ ಎಂಬ ಭಾವನೆ (ಕಲ್ಪನೆ) ಸಮುದಾಯದಲ್ಲಿ ರೂಢಿಯಲ್ಲಿದೆ.

ಕಲಾವಿದರು ಪ್ರದರ್ಶನಕ್ಕೆ ಹೊರಟರೆ ಜೋಗಿಯ ಬಿರುದು ಬಾವಲಿಗಳನ್ನು ತಪ್ಪದೇ ಧರಿಸಬೇಕು. ಅಂದರೆ ಸಮುದಾಯದ (ಜೋಗಿ) ಕುಲಸಂಕೇತಗಳಾದ ಸಿಂಗನಾದ, ಹಂಡೆ, ತ್ರಿಶೂಲ, ಕರ್ಣಕುಂಡಲ, ಜೋಳಿಗೆ ಹಾಗೂ ಕಿನ್ನೂರಿ ಈ ಉಪಕರಣಗಳ ಜೊತೆಗೆ ವಿಶೇಷವಾಗಿ ಜೋಗಿಯು ವೇಷಭೂಷಣಗಳನ್ನು (ಉಡುಗೆ-ತೊಡುಗೆಗಳು) ಧರಿಸಿಕೊಳ್ಳಬೇಕು.

ಇವರ ಪ್ರಮುಖ ಸಂಗೀತಸಾಧನವೆಂದರೆ ಕಿನ್ನೂರಿ. ಇದರ ಜೊತೆಗೆ ಇನ್ನೂ ಕೆಲವು ಉಪಕರಣಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ. ಅವುಗಳೆಂದರೆ ಪಿಳ್ಳಂಗೋವಿ, ಚಿಟಕಿ, ದಂಬರಿಗೆ, ಗಗ್ಗರ ಹಾಗೂ ಕಿರುಗೆಜ್ಜೆ ಮುಂತಾದವುಗಳನ್ನು ಕಿನ್ನೂರಿ ವಾದ್ಯದ ಜೊತೆಗೆ ಸಹಕಾರಿಯಾಗಿ ಬಳಸುತ್ತಾರೆ.

ಹಂಡಿಜೋಗಿಗಳು ಕನ್ನಡ ಹಾಗೂ ಮನೆಮಾತಾದ ಮರಾಠಿ ಎರಡೂ ಭಾಷೆಗಳಲ್ಲೂ ಹಾಡುಗಳನ್ನು ಹಾಡುತ್ತಾರೆ. ಸಮುದಾಯದ ಸಾಂಸ್ಕೃತಿಕ ಆಚರಣೆಗಳಾದ ದೀಕ್ಷೆ, ವಿವಾಹ

ಮುಂತಾದ ಆಚರಣೆಗಳಲ್ಲಿ ಸಂಪ್ರದಾಯದ ಹಾಡುಗಳನ್ನು ಮರಾಠಿಯಲ್ಲಿ ಹಾಡುತ್ತಾರೆ. ಉಳಿದಂತೆ ಸಾಮಾಜಿಕವಾಗಿ ಸ್ಥಳೀಯ ಪರಿಸರದಲ್ಲಿ ಕಲಾ ಪ್ರದರ್ಶನವನ್ನು ನೀಡುವ ಸಂದರ್ಭದಲ್ಲಿ ಕನ್ನಡದಲ್ಲಿ ಹಾಡುಗಳನ್ನು ಹಾಡುತ್ತಾರೆ. ಹಂಡಿಜೋಗಿಗಳು ನೆಲೆಸಿರುವ ಪರಿಸರದಲ್ಲಿ ಯಾವುದೇ ಹಬ್ಬ, ಉತ್ಸವ, ಜಾತ್ರೆಗಳು ನಡೆದರೆ ಅವರಿಗೆ ವಿಶೇಷ ಆಹ್ವಾನವನ್ನು ನೀಡಿ ಅವರಿಂದ ಕಲಾ ಪ್ರದರ್ಶನಗಳನ್ನು ಏರ್ಪಡಿಸಲಾಗುತ್ತದೆ. ಇವುಗಳನ್ನು ಜೋಗಿಯಾಟ, ಜೋಗಿ ಕತೆ, ಅರ್ಜುನ ಜೋಗಿಹಾಡು ಮಹಾಭಾರತ ಕತೆ, ಭಾರತ ಕತೆ ಎಂದು ಕರೆಯುತ್ತಾರೆ.

ಹಂಡಿಜೋಗಿಗಳು ಹಾಡುವ ಹಾಡುಗಳಲ್ಲಿನ ಕಥಾವಸ್ತು ರಾಮಾಯಣ, ಮಹಾಭಾರತ ವಿಷಯಕ್ಕೆ ಸಂಬಂಧಪಟ್ಟವುಗಳಾಗಿರುತ್ತವೆ. ಜೊತೆಗೆ ಸಾಮಾಜಿಕ ಹಾಗೂ ಜನಪದ ವಿಷಯಗಳಿಗೆ ಸಂಬಂಧಿಸಿದ್ದಾಗಿರುತ್ತದೆ. ಸಾಮಾಜಿಕ ಪಿಡುಗುಗಳು, ವಿಡಂಬನೆಯ ಜೊತೆಗೆ ಹಾಸ್ಯ ವಿಷಯವಸ್ತು ಪ್ರಧಾನವಾದ ಹಾಡುಗಳನ್ನು ಸಹ ಹಾಡುತ್ತಾರೆ. ಸ್ಥಳೀಯ ಹಬ್ಬ, ಉತ್ಸವಗಳ ಸಂದರ್ಭದಲ್ಲಿ ನಾಲ್ಕು ಅಥವಾ ಐದು ಜನ ಜೋಗಿಗಳು ಸೇರಿ ಒಂದು ಮೇಳವನ್ನು ಸಂಘಟಿಸುತ್ತಾರೆ. ಈ ಮೇಳದಲ್ಲಿ ಜನಪದಕತೆ, ಗಂಗೆ–ಗೌರಿ, ಶಿವ–ಪಾರ್ವತಿ, ಭೈರವ–ಕಾಳಿ, ಮಹಾಭಾರತ ಕಥಾವಸ್ತುವನ್ನು ಒಳಗೊಂಡ ಹಾಡುಗಳನ್ನು ಹಾಡುತ್ತಾರೆ. ಒಬ್ಬ ಪ್ರಧಾನ ಹಾಡುಗಾರ ಹಾಡುತ್ತಾನೆ. ಉಳಿದವರು ಲಘು ನರ್ತನ ಮಾಡುತ್ತ ಮೇಳದಲ್ಲಿ ಹಿನ್ನೆಲೆಯಾಗಿ ಹಾಡುತ್ತಾರೆ.

ಹಂಡಿಜೋಗಿ ಸಮುದಾಯ ಅಥವಾ ಸ್ಥಳೀಯ ಪರಿಸರದಲ್ಲಿನ ಇತರೇ ಸಮುದಾಯದ ಯಾರಾದರೂ ವ್ಯಕ್ತಿಗಳು ಸತ್ತರೆ ಅಲ್ಲಿಗೆ ಜೋಗಿಗಳಿಗೆ ಆಹ್ವಾನ ನೀಡಿ ಅವರಿಂದ 'ಗರುಡ ಪುರಾಣ'ವನ್ನು ಹಾಡಿಸಲಾಗುತ್ತದೆ. ಇದರ ನಂತರ ಸತ್ತ ವ್ಯಕ್ತಿಯ ಗುಣಗಾನ ಮಾಡಿ ಅವನ ಸಮುದಾಯದವರಿಂದ ದವಸಧಾನ್ಯ, ಹಣವನ್ನು ಕಾಣಿಕೆಯ ರೂಪದಲ್ಲಿ ಪಡೆಯುತ್ತಾರೆ. ಹಂಡಿಜೋಗಿಗಳು ಹಾಡುವ ಹಾಡುಗಳಲ್ಲಿನ ಕಥಾವಸ್ತುವನ್ನು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ವಿವರಿಸಬಹುದಾಗಿದೆ.

**ದೈವವನ್ನು ಕುರಿತ ಹಾಡುಗಳು**

ಹಂಡಿಜೋಗಿಗಳು ತಮ್ಮ ಸಮುದಾಯದ ಕುಲದೈವಗಳನ್ನು ಕುರಿತ ಹಾಡುಗಳನ್ನು ಹಾಡುತ್ತಾರೆ. ಆದರಲ್ಲೂ ಮುಖ್ಯವಾಗಿ ಭೈರವನನ್ನು, ಶಿವನನ್ನು ಕುರಿತ ಹಾಡುಗಳು ಪ್ರಧಾನವಾದವುಗಳಾಗಿವೆ. ಸವದತ್ತಿ ಯಲ್ಲಮ್ಮ, ಹುಲಿಗಿಯ ಹುಲಿಗೆಮ್ಮನ ಕುರಿತು ಹಾಡುಗಳನ್ನು ಹಾಡುತ್ತಾರೆ. ಇವುಗಳ ಜೊತೆಗೆ ಹಾಸ್ಯ, ವಿಡಂಬನಾತ್ಮಕ ಹಾಡುಗಳನ್ನು ತಕ್ಷಣದಲ್ಲೇ ರಚಿಸಿ ಹಾಡುತ್ತಾರೆ. ನಂತರ ಅನೇಕ ಜನಪದ ಮೌಖಿಕ ಕಥೆಗಳನ್ನು ಹಾಡುತ್ತಾರೆ. ಅವುಗಳನ್ನು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

**ಭೈರವನ ಎರಡು ಪ್ರೇಮ ಕತೆಗಳು**

ಭೈರವ ಲಕ್ಷ್ಮೀದೇವಿಯ ಪ್ರೇಮ ಕತೆ

ಭೈರವ ಮಾಳವ್ವರ ಪ್ರೇಮ ಕತೆ

ಬ್ರಹ್ಮಹತ್ಯೆ ದೋಷವನ್ನು ಕಳೆದುಕೊಳ್ಳಬೇಕು ಎಂದು ಭೈರವನು ಭೂಮಿಗೆ ಬಂದಾಗ ಮೊದಲು ಕಂಡಿದ್ದು ಚುಂಚನ ಗಿರಿಯಬೆಟ್ಟ. ಅವನು ಅಲ್ಲಿ ಉರಿಗದ್ದುಗೆಯ ಮೇಲೆ ಕೂತಾಗ ಒಂಭತ್ತು ಬೆವರಿನ ಹನಿಗಳು ಮೂಡಿ ಅವುಗಳಿಂದ ೯ ಮೀನುಗಳು ಹುಟ್ಟಿ ಅವರೇ ನವನಾಥರಾಗುತ್ತಾರೆ.

೧. ಆದಿನಾಥ

೨. ಮತ್ಸ್ಯೇಂದ್ರನಾಥ

೩. ಗೋರಕ್ಷನಾಥ

೪. ಚೌರಂಗೀನಾಥ

೫. ಜಾಲಂಧರನಾಥ

೬. ಚರ್ಪಟನಾಥ

೭. ಗೌರಾಯಿ

೮. ಗಂಗಾದೇವಿ

೯. ಮುಕ್ತಾಯಿ ಅಥವಾ ಮಿಠಾಯಿ

ನಂತರ ಭೈರವನು ಭಂಗಿ ಸೇದುತ್ತ ಕಿನ್ನುರಿ ನುಡಿಸುತ್ತ ವಿಶ್ರಾಂತಿ ತೆಗೆದುಕೊಳ್ಳುತ್ತಾನೆ. ಅವನು ಬಿಟ್ಟ ಭಂಗಿಯ ಹೊಗೆ ಕಾರ್ಮೋಡದಂತೆ ಆಗಸವನ್ನು ತುಂಬಿಕೊಳ್ಳುತ್ತದೆ. ಆ ಹೊತ್ತಿಗೆ ಆ ದಾರಿಯಲ್ಲಿ ಬಂದ ಲಕ್ಷ್ಮೀದೇವಿಗೆ ಭಂಗಿ ಹೊಗೆ ಸೇವಿಸಿದ ಕಾರಣ ಗರ್ಭಧಾರಣೆಯಾಗುತ್ತದೆ. ಅವಳು ಮನೆಗೆ ಬಂದು ಮದುಮಗಳಂತೆ ಸಿಂಗರಿಸಿಕೊಂಡು ತನ್ನನ್ನು ವರಿಸಬೇಕೆಂದು ಹೋಗಿ ಭೈರವನನ್ನು ಕೇಳುತ್ತಾಳೆ. ಆಗ ಭೈರವ ನಿರಾಕರಿಸುತ್ತಾನೆ. ಆಗ ಆಕೆಯ ಸೋದರ ಚುಂಚನು ಸಾರಂಗದ ರೂಪದಲ್ಲಿ ಭೈರವನ ಮೇಲೆ ಏರಿ ಹೋಗುತ್ತಾನೆ. ಆದರೆ ಚುಂಚನು ಕೈಗಂಟಿನ ಕಪಾಲದಿಂದ ನೋವುಣ್ಣುತ್ತಿರುವ ಭೈರವನನ್ನು ಕಂಡು ನಾಯಿಯಾಗಿ ನೆಕ್ಕಿ ಅದರಿಂದ ವಿಮೋಚನೆ ಮಾಡಿಸುತ್ತಾನೆ. (ನಾಯಿ-ಭೈರವನ ವಾಹನ) ಭೈರವನು ಪ್ರಸನ್ನನಾದಾಗ ತನ್ನ ತಂಗಿಯನ್ನು ಲಗ್ನವಾಗಬೇಕೆಂದೂ, ಚುಂಚನಗಿರಿಯಲ್ಲೇ ನೆಲೆಸಿ ತನ್ನನ್ನು ವಾಹನವನ್ನಾಗಿ ಮಾಡಿಕೊಳ್ಳಬೇಕೆಂದು ಬೇಡುತ್ತಾನೆ. ಭೈರವ ಒಪ್ಪಿಕೊಂಡು ಲಕ್ಷ್ಮಿಯ ಜೊತೆ ಸಂಸಾರ ಆರಂಭಿಸುತ್ತಾನೆ. ಅವರಿಗೆ ಮಂಟೇಸ್ವಾಮಿ, ಮಲೆಮಾದೇಶ್ವರ ಮುಂತಾದ ೫ ಮಕ್ಕಳು ಹುಟ್ಟುವರು.

**ಭೈರವ-ಮಾಳವ್ವರ ಪ್ರೇಮಕತೆ**

ಎರಡನೇ ಘಟ್ಟದಲ್ಲಿ ಭೈರವನ ಪ್ರೇಮ ಸಾಹಸ ಹಾಗೂ ಸಾಂಸಾರಿಕ ಕಷ್ಟಗಳ ಕತೆ ಆರಂಭವಾಗುತ್ತದೆ. ಒಮ್ಮೆ ಭೈರವನು ಲಕ್ಷ್ಮಿಯ ಸರಸದಲ್ಲಿರುವಾಗ, ಅವಳಕ್ಕ ಮಾಳಮ್ಮನ ಮಾತು ಬರುತ್ತದೆ. ನನ್ನಕ್ಕನನ್ನು ಪಗಡೆಯಾಟದಲ್ಲಿ ಸೋಲಿಸುವವರೇ ಇಲ್ಲ ಎಂದು ಲಕ್ಷ್ಮೀ ಹೇಳುತ್ತಾಳೆ.

ಭೈರವನು ಇದನ್ನು ಸವಾಲಾಗಿ ಸ್ವೀಕರಿಸಿ ಅವಳನ್ನು ಗೆಲ್ಲಲು ಹೊರಡುತ್ತಾನೆ. ಮಾಳಮ್ಮನ ಮುಂದೆ ಬಂದು ಕಿನ್ನೂರಿ ನುಡಿಸುತ್ತಾನೆ, ಸಿಂಗನಾದ ನುಡಿಸುತ್ತಾನೆ. ಚುಂಚನಗಿರಿಯ ತನಕ ಸಂಪಿಗೆ ಹೂವು ಕೊಡಿಸುವ ಆಮಿಷ ಒಡ್ಡುತ್ತಾನೆ. ಭೈರವನು ಹೆಣ್ಣನ್ನು ಒಲಿಸಿಕೊಳ್ಳಲು ಮಾಡುವ ನಾನಾ ಬಗೆಯ ಯತ್ನಗಳನ್ನು ಕಾವ್ಯ ವರ್ಣಿಸುತ್ತದೆ. ತನ್ನ ಯತ್ನಗಳು ಫಲಕೊಡದಾಗ ಭೈರವನು ಭಂಗಿ ಹೊಗೆಯನ್ನು ಬಿಟ್ಟು ಅವಳನ್ನು ಹೊತ್ತುಕೊಂಡು ಬರುತ್ತಾನೆ. ಮನೆಗೆ ಬಂದರೆ ಲಕ್ಷ್ಮಿದೇವಿ ಬಾಗಿಲು ತೆಗೆಯುವುದಿಲ್ಲ.

'ಸೂಳೆ ಮಾಳಮ್ಮ ಒಡಗೊಂಡು ಭೈರವ, ನೀನು ರಾಜಬೀದಿಲಿ ಬರಬಹುದೇ? ಎಂದು ಪ್ರಶ್ನಿಸುತ್ತಾಳೆ. ಅಪಮಾನಿತಳಾದ ಮಾಳಮ್ಮ ಮುನಿಸಿಕೊಂಡು ಹೊರಡುತ್ತಾಳೆ. ಅವಳು ಹೋಗದಂತೆ ಭೈರವ ಶಾಪಕೊಟ್ಟು ಕಲ್ಲು ಮಾಡುತ್ತಾನೆ. ಭೈರವ ಹಾಗೂ ಮಾಳವ್ವನ ಈ ಪ್ರೇಮ ಪ್ರಕರಣವು ಶಿವ ಹಾಗೂ ಗಂಗೆಯ ಪ್ರೇಮ ಪ್ರಸಂಗಗಳನ್ನು ನೆನಪಿಸುತ್ತದೆ.

### ೩.೨.೩. ಕಿನ್ನರಿ ಮೇಳ

ಸಮುದಾಯದಲ್ಲಿ ದೀಕ್ಷಬದ್ಧವಾದ ೫ ಜನ ಜೋಗಿಗಳು ಒಂದು ಗುಂಪಿನಲ್ಲಿ ನೀಡುವ ಕಲಾಪ್ರದರ್ಶನಕ್ಕೆ ಕಿನ್ನರಿ ಮೇಳ ಎಂದು ಕರೆಯುತ್ತಾರೆ. ಈ ಮೇಳದಲ್ಲಿ ಕಿನ್ನೂರಿ ವಾದ್ಯವನ್ನು ಹಿಡಿದಿರುವವನು ಪ್ರಧಾನ ಹಾಡುಗಾರನಾಗಿರುತ್ತಾರೆ. ಇವರು ಮುಮ್ಮೇಳ ಹಾಡುತ್ತಾ ಲಘು ನರ್ತನವನ್ನು ಮಾಡುತ್ತಿರುತ್ತಾನೆ. ಉಳಿದ ಕಲಾವಿದರು ಅವನ ಜೊತೆ ಹಾಡಿಗೆ ಹಿಮ್ಮೇಳನವನ್ನು ಹಾಡುತ್ತಾ, ಕತೆಗೆ ಹೂಂ ಗುಟ್ಟುತ್ತ ಇವರೂ ಕೂಡ ನರ್ತಿಸುತ್ತ ನೋಡುಗರಿಗೆ ಮನರಂಜನೆಯನ್ನು ಉಂಟುಮಾಡುತ್ತಾರೆ. ಹೀಗೆ ಇವರ ಹಾಡಿನಲ್ಲಿ ಸಾಹಿತ್ಯ, ಸಂಗೀತ, ನೃತ್ಯ ಒಟ್ಟೊಟ್ಟಿಗೆ ಸಾಗುತ್ತಿರುತ್ತದೆ.

ಹಾಡಿನ ಪ್ರಾರಂಭವನ್ನು 'ಹರಹರನೆ ಹರನೆ ಜಯತೋ ಸಿವಾ ಸಿವಾ ಮುಕ್ತಿದಾಯಕನೇ ಜಯತೋ' ಎಂಬ ಸೊಲ್ಲಿನಿಂದಲೇ ಆರಂಭಿಸುವ ಮೂಲಕ ಸಕಲ ಕುಲ ಕೋಟಿ ಜೀವರಾಶಿಗಳಿಗೂ ಲೇಸನ್ನು ಮಾಡುವಂತೆ ಶಿವನಲ್ಲಿ ಮೊರೆ ಇಡುತ್ತಾರೆ. ಕೊನೆಯಲ್ಲಿ 'ಹೋದಲ್ಲಿ ಬಂದಲ್ಲಿ ಸುಖ-ಸಂಪತ್ತು ನಿಮ್ಮದಾಗಲಿ... ಶಿವಾ ಶಿವಾ...' ಎನ್ನುತ್ತಾ ಹಾಡಿಗೆ ಮಂಗಳವನ್ನು ಹಾಡುತ್ತಾರೆ.

ಸಮುದಾಯದಲ್ಲಿ 'ಕಿನ್ನೂರಿ'ಯನ್ನು ಅನ್ನ ನೀಡುವ ದೈವ ಎಂದು ಆರಾಧಿಸಿ ಪೂಜಿಸುವುದು ಕಂಡುಬರುತ್ತದೆ. ಇದನ್ನು ಬಳಸದ ದಿನಗಳಲ್ಲಿ ತಮ್ಮ ಮನೆಯಲ್ಲಿನ ದೈವಗಳ ಜೊತೆ ಇರಿಸಿ ಪ್ರತಿನಿತ್ಯ ಪೂಜೆ ಸಲ್ಲಿಸುತ್ತಿರುವುದು ಕಂಡುಬರುತ್ತದೆ. ನವರಾತ್ರಿ ಮುಂತಾದ ಹಬ್ಬಗಳ ಸಂದರ್ಭಗಳಲ್ಲಿ ಇದಕ್ಕೆ ಕೋಳಿಯನ್ನು ಬಲಿ ನೀಡಿ, ಹಣ್ಣು ಕಾಯಿಗಳನ್ನಿಟ್ಟು ಪೂಜೆ ಸಲ್ಲಿಸುತ್ತಾರೆ.

ಸಮುದಾಯದಲ್ಲಿ ಮುಟ್ಟಾದ ಹೆಂಗಸರು ಕಿನ್ನೂರಿ ವಾದ್ಯವನ್ನು ಮುಟ್ಟುವಂತಿಲ್ಲ. ಮುಟ್ಟಿದರೆ ಕಿನ್ನೂರಿ ವಾದ್ಯದ ತಂತಿ ಹರಿಯುತ್ತದೆ ಎಂಬ ನಂಬಿಕೆ ಸಮುದಾಯದಲ್ಲಿದೆ.

ಮೇಲಿನ ಆಚರಣೆಗಳನ್ನು ಗಮನಿಸಿದರೆ ಇಡೀ ಜೋಗಿ ಸಂಪ್ರದಾಯ ಹೆಚ್ಚು ಪುರುಷ ಪ್ರಧಾನವಾಗಿರುವುದು ಕಂಡುಬರುತ್ತದೆ. ಸಮುದಾಯದ ಸಾಂಸ್ಕೃತಿಕ ಆಚರಣೆಯಾದ ಕಾಂಚೀರ

(ಜೋಗಿ ದೀಕ್ಷೆ) ಪುರುಷ ಪ್ರಧಾನವಾಗಿದ್ದು, ದೀಕ್ಷೆ ಪಡೆದ ೨ ದಿನಗಳವರೆಗೆ ಮಹಿಳೆಯರು ದೀಕ್ಷೆ ಪಡೆದ ಹುಡುಗನನ್ನು ಮುಟ್ಟುವಂತಿಲ್ಲ. ಹೀಗೆ ಅನೇಕ ಆಚರಣೆಗಳಲ್ಲಿ ಮಹಿಳೆಯರಿಗೆ ನಿಷಿದ್ದವಿರುವುದು ಕಂಡುಬರುತ್ತದೆ. ಸಮುದಾಯದ ಕುಲ ಸಂಕೇತಗಳನ್ನು ಕೇವಲ ಪುರುಷರು ಮಾತ್ರ ಧರಿಸುತ್ತಾರೆ. ಮಹಿಳೆಯರಿಗೆ ಇವು ನಿಷಿದ್ಧವಾಗಿರುತ್ತದೆ. ಅವುಗಳೆಂದರೆ ಕರ್ಣಕುಂಡಲ, ತ್ರಿಶೂಲ, ಕಿನ್ನೂರಿ, ಜೋಳಿಗೆ, ಸಿಂಗನಾದ ಇವುಗಳನ್ನು ಸಮುದಾಯದಲ್ಲಿ ಮಹಿಳೆಯರು ಧರಿಸುವಂತಿಲ್ಲ. ಇವುಗಳು ಮಹಿಳೆಯರಿಗೆ ನಿಷಿದ್ಧವಾಗಿರುತ್ತವೆ.

**ಕಿನ್ನೂರಿ ವಾದ್ಯದ ರಚನೆ**

ಕಿನ್ನೂರಿ ವಾದ್ಯವನ್ನು ಸಮುದಾಯದಲ್ಲೇ ತಯಾರಿಸಿಕೊಳ್ಳುತ್ತಾರೆ. ಸಮುದಾಯದ ಹಿರಿಯ ವ್ಯಕ್ತಿಗಳು ಅನೇಕ ಪರಿಕರಗಳಿಂದ ಇದನ್ನು ಸಿದ್ದಪಡಿಸುತ್ತಾರೆ. ಕಿನ್ನೂರಿ ವಾದ್ಯಕ್ಕೆ ಬಳಸುವ ಮೂಲ ಪರಿಕರಗಳೆಂದರೆ ಮಾಗಿದ ೩ ಅಥವಾ ೫ ಸೋರೆಕಾಯಿಗಳು (ಸಮುದಾಯದಲ್ಲಿ ಇವುಗಳಿಗೆ ಕಿನ್ನೂರಿ ಕಾಯಿ ಎನ್ನುತ್ತಾರೆ), ಕಬ್ಬಿಣದ ತಂತಿ, ಬಿದಿರು ಇವುಗಳನ್ನು ಬಳಸಿ ತಯಾರಿಸುತ್ತಾರೆ. ಮೂರು ಮೊಳ ಉದ್ದನೆಯ ಬಿದಿರು ಗಳುವಿಗೆ ಮೂರು ಮಾಗಿದ ಸೋರೆ ಬುರುಡೆಗಳನ್ನು ಜೋಡಿಸಲಾಗಿರುತ್ತದೆ. ಇವುಗಳಲ್ಲಿ ೨ ಸೋರೆ ಬುರುಡೆಗಳು ಒಂದೇ ಗಾತ್ರದವು, ಒಂದು ಚಿಕ್ಕ ಸೋರೆ ಬುರುಡೆಯನ್ನು ಗಳುವಿನ ಹೊರ ಮೈಮೇಲೆ ಮುಳ್ಳುಹಂದಿಯ ಚಿಪ್ಪಿನಿಂದ ತಯಾರಿಸಿದ ೧೦ ಮೆಟ್ಟಿಲುಗಳನ್ನು ಒಂದರ ಪಕ್ಕದಲ್ಲೊಂದು ಸಾಲಾಗಿ ಜೋಡಿಸಲಾಗಿರುತ್ತದೆ. ಇವುಗಳನ್ನು 'ಸಾರೆ' ಎನ್ನುತ್ತಾರೆ. ಈ ಸಾರೆಗಳನ್ನು ಜೇನುಮೇಣದಿಂದ ಬಿದಿರಿನ ಗಳುವಿಗೆ ಅಂಟಿಸಲಾಗಿರುತ್ತದೆ. ಬಿದಿರಿನ ಒಂದು ತುದಿಗೆ ತಿರುಪುಳ್ಳ (ತಿರುಗಲು ಸಹಾಯಕವಾಗುವ) ಶೂಲದ ಕಡ್ಡಿಯನ್ನು ಬಂಧಿಸಿ ಸಾರೆಗಳ ಮೇಲಿಂದ ಹಾದುಬಂದಿರುವ ತಂತಿಗಳು ಗಳುವಿನ ಇನ್ನೊಂದು ತುದಿಯ ಗಿಣಿಯಾಕಾರದ (ಕಡ್ಡಿ)ಯನ್ನು ಸುತ್ತುವರೆದಿರುತ್ತದೆ.

ಗಳುವಿನ ತುದಿಗಳಲ್ಲಿರುವ ಶೂಲದ ಕಡ್ಡಿಗಳನ್ನು ತಿರುಗಿಸಿ ಶೃತಿ ಮಾಡಿಕೊಳ್ಳಲಾಗುತ್ತದೆ. ಶೂಲದ ಕಡ್ಡಿಯ ನಂತರ ಬಿದಿರಿನ ಗಳುವಿನ ತುದಿಯನ್ನು ನವಿಲುಗರಿಗಳಿಂದ ಸಿಂಗರಿಸಿ ಅಲಂಕಾರಗೊಳಿಸಲಾಗಿರುತ್ತದೆ.

ಹಂಡಿಜೋಗಿಗಳು ಮಾಂಸಹಾರಿಗಳಾಗಿದ್ದರೂ ಜಿಂಕೆಯ ಮಾಂಸ ಹಾಗೂ ನವಿಲನ್ನು ಎಂದೂ ತಿನ್ನುವುದಿಲ್ಲ. ಇವುಗಳ ಬಗ್ಗೆ ಸಮುದಾಯದಲ್ಲಿ ದೈವಿಕ ಮನೋಭಾವನೆಯಿದ್ದು, ಸಮುದಾಯದಲ್ಲಿ ಇವುಗಳನ್ನು ಪೂಜಿಸುತ್ತಾರೆ. ಇವುಗಳ ಬಗ್ಗೆ ಪೂಜ್ಯ ಮನೋಭಾವನೆ ಇವರಲ್ಲಿರುವುದು ಕಂಡುಬರುತ್ತದೆ. ಈ ಭಾವನೆಗೆ ಕಾರಣವನ್ನು ಅವರೇ ಹೀಗೆ ವಿವರಿಸುತ್ತಾರೆ. ನಮ್ಮ ಸಮುದಾಯದ ಕುಲಸಂಕೇತವಾದ ಸಿಂಗನಾದ, ದೈವದ ಸಮಾನ ಇದು ಜಿಂಕೆ ಕೊಂಬಿನ ವಾದ್ಯವಾಗಿದೆ. ಆದರೆ ಈಗ ಬೆಳ್ಳಿಯ ಸಿಂಗನಾದ ಬಳಸುತ್ತಿರುವುದು ಕಂಡುಬರುತ್ತದೆ. ಜೊತೆಗೆ ನವಿಲುಗರಿಗಳನ್ನು ತಮ್ಮ ಅಲಂಕಾರಕ್ಕೆ ಹಾಗೂ ಕಿನ್ನೂರಿವಾದ್ಯದ ಅಲಂಕಾರಕ್ಕೆ ಬಳಸಿಕೊಳ್ಳುತ್ತಿರುವುದರಿಂದ ನಾವು ಈ

ಪ್ರಾಣಿಗಳನ್ನು ಕೊಲ್ಲುವುದಿಲ್ಲ ಎಂದು ಅವುಗಳ ಬಗ್ಗೆ ಪೂಜ್ಯ ಭಾವನೆಯನ್ನು ವ್ಯಕ್ತಪಡಿಸುತ್ತಿರುವುದು ಕಂಡುಬರುತ್ತದೆ.

ಹಂಡಿಜೋಗಿಗಳ ಕುಟುಂಬದಲ್ಲಿ ಯಾರಾದರು ಸಾವನ್ನಪ್ಪಿದರೆ ಕಲಾಪ್ರದರ್ಶನದಲ್ಲಿ ಪಾಲ್ಗೊಳ್ಳುವುದಿಲ್ಲ. ಕುಟುಂಬದಲ್ಲಿ ೯-೧೬ನೇ ದಿವಸದ ಕಾರ್ಯಗಳೆಲ್ಲವೂ ಮುಗಿಯುವವರೆಗೆ ವೇಷಭೂಷಣಗಳು ಹಾಗೂ ಕಿನ್ನೂರಿವಾದ್ಯವನ್ನು ಧರಿಸುವುದಿಲ್ಲ. ಇವರಲ್ಲಿ ಹುಟ್ಟು (ಜನನ), ಮುಟ್ಟು (ಋತುಮತಿ), ಸಾವು (ಮರಣ) ಈ ಮೂರು ಆಚರಣೆಗಳ ಬಗ್ಗೆ ಸೂತಕದ ಭಾವನೆ ಇರುವುದು ಕಂಡುಬರುತ್ತದೆ. ಈ ಮೇಲಿನ ಮೂರು ಸಂದರ್ಭಗಳಲ್ಲಿ ಸಮುದಾಯದಲ್ಲಿ ಹಾಡುಗಾರಿಕೆ ಕಲೆಯ ಪ್ರದರ್ಶನ ನಿಷಿದ್ಧವಾಗಿರುತ್ತದೆ.

### ೩.೨.೪. ಲಾವಣಿ ಹಾಡುಗಳು

ಹಂಡಿಜೋಗಿಗಳು ಕಿನ್ನೂರಿ ಎಂಬ ಜನಪದ ತಂತೀವಾದ್ಯವನ್ನು ಬಳಸಿಕೊಂಡು ಪುರಾಣ, ಚರಿತ್ರೆಗೆ ಸಂಬಂಧಿಸಿದ ಅನೇಕ ಕಥನಗೀತೆಗಳನ್ನು (ಲಾವಣಿ) ಹಾಡುತ್ತಾರೆ. ಇವರು ತಮ್ಮ ಸ್ಮರಣಶಕ್ತಿಯ ಸಾಮರ್ಥ್ಯದಿಂದ ಕ್ಷಣಾರ್ಧದಲ್ಲಿಯೇ ಹಾಡುಗಳನ್ನು ಸೃಷ್ಟಿಸಿ ಹಾಡುವ ಕಲಾವಿದರಾಗಿದ್ದಾರೆ. ಇವರ ಕಂಠಮಾಧುರ್ಯ ಎಂತಹವರನ್ನೂ ತಮ್ಮೆಡೆಗೆ ಸೆಳೆದುಕೊಳ್ಳುತ್ತದೆ. ಇವರು ಹಾಡುವ ಹಾಡುಗಳು ಒಂದು ವಿಶಿಷ್ಟ ಆವರಣವನ್ನು ಸೃಷ್ಟಿಸಿ ಹಾಡುವವನ ಮತ್ತು ಕೇಳುವವರ ನಡುವೆ ಉಲ್ಲಾಸ ಹಾಗೂ ಮನೋರಂಜನೆಯನ್ನು ಉಂಟುಮಾಡುತ್ತವೆ. ಇವರಲ್ಲಿ ಒಬ್ಬನೇ ವ್ಯಕ್ತಿಯಿಂದ ಹಿಡಿದು ೫-೬ ಜನರ ಗುಂಪಿನೊಂದಿಗೆ ಮೇಳಗಳನ್ನು ಸಂಘಟಿಸಿಕೊಂಡು ಹಾಡುವ ಪದ್ಧತಿ ರೂಢಿಯಲ್ಲಿದೆ. ಅನೇಕ ಐತಿಹಾಸಿಕ, ಪೌರಾಣಿಕ ಲಾವಣಿಗಳನ್ನು ಒಬ್ಬನೇ ವ್ಯಕ್ತಿಯು ಸೊಗಸಾಗಿ ಕಂಠಮಾಧುರ್ಯ ಹಾಗೂ ಸ್ಮರಣಶಕ್ತಿಯಿಂದ ಹಾಡುವುದನ್ನು ಗುರುತಿಸಬಹುದಾಗಿದೆ.

ಹಂಡಿಜೋಗಿಗಳು ಹಾಡುವ ಲಾವಣಿಗಳು ಭಾವಗೀತೆಗಳಿಂದ ಕೂಡಿ ಅತ್ಯಂತ ವಿಸ್ತಾರವಾದ ಕಥಾನಕವನ್ನು ಒಳಗೊಂಡಿರುವ ಸಾಂಪ್ರದಾಯಿಕ ಹಾಡುಗಳಾಗಿರುತ್ತವೆ. ಇವರು ಸುಧೀರ್ಘ ರಚನೆಗಳಿಂದ ಕೂಡಿದ ಅನೇಕ ಲಾವಣಿಗಳನ್ನು ಹಾಡುತ್ತಾರೆ. ಸುಧೀರ್ಘ ಹಾಗೂ ವಿಸ್ತಾರವಾದ ಇಂಥ ಹಾಡುಗಳು ಹಾಡುಗನಿಗೆ ಹೆಚ್ಚು ಕಾಲ (ಸಮಯ)ವನ್ನು ಉಳಿಸಿಕೊಡುವುದರೊಂದಿಗೆ ಹತ್ತಾರು ಮನೆಗಳ ಭಿಕ್ಷಾಟನೆಗೆ ನೆರವಾಗುವುದನ್ನು ಕಾಣಬಹುದಾಗಿದೆ. ಇಂಥ ಸುಧೀರ್ಘ ರಚನೆಯಿಂದ ಕೂಡಿದ ಲಾವಣಿಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

೧. ಶಿವ-ಪಾರ್ವತಿಯ ಕಥೆ (ಗೌರಮ್ಮನ ಮದುವೆ)

೨. ಗಂಗೆ-ಗೌರಿಯ ಜಗಳ

೩. ಕೃಷ್ಣ-ಪಾರಿಜಾತ

೪. ಕಲಿಯುಗದ ಬಾಲೆ ಮುಂತಾದವು.

ಇದರ ಜೊತೆಗೆ ಅತ್ಯಂತ ಕಡಿಮೆ ಅವಧಿಯಲ್ಲಿ ಹಾಡಿ ಮುಗಿಸಬಹುದಾದಂತಹ ಲಾವಣಿಗಳನ್ನು ಸಹ ರಚಿಸಿ ಹಾಡುವುದನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ ಕಾಳಿಂಗರಾಯನ ಕತೆ, ಗುಣಸಾಗರಿಯ ಕತೆ, ಕೆರೆಹೊನ್ನಮ್ಮ, ಧರ್ಮಸೀಲರಾಜನ ಕತೆ.

ಹಂಡಿಜೋಗಿಗಳು ನೆಲೆಸಿರುವ ಪರಿಸರದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಹಬ್ಬಗಳು, ಜಾತ್ರೆ, ಉತ್ಸವಗಳು ನಡೆದರೆ ಅಲ್ಲಿಗೆ ತಪ್ಪದೇ ಇವರನ್ನು ಕರೆಯಸಿ ಹಾಡುಗಳನ್ನು ಹಾಡಿಸುವ ಪದ್ಧತಿ ಇಂದಿಗೂ ಅನೇಕ ಭಾಗಗಳಲ್ಲಿ ರೂಢಿಯಲ್ಲಿದೆ. ಇಂತಹ ಸಂದರ್ಭದಲ್ಲಿ ಸಮುದಾಯದ ಸಾಂಸ್ಕೃತಿಕ ವಾದ್ಯಗಳೊಂದಿಗೆ ಆಗಮಿಸಿ ಅನೇಕ ಲಾವಣಿಗಳನ್ನು ಹಾಡುತ್ತಾರೆ. ಇದರ ಜೊತೆಗೆ ಪುರಾಣ, ಭಕ್ತಿ, ಆಧ್ಯಾತ್ಮ, ನೀತಿಪರತೆ ಹಾಗೂ ಸಾಮಾಜಿಕ ಮೌಲ್ಯಗಳನ್ನು ಸಾರುವ ಹಾಡುಗಳನ್ನು ರಚಿಸಿ ಹಾಡುತ್ತಾರೆ. ಹಾಡುಗಾರಿಕೆ ಮುಗಿದ ನಂತರ ತಮಗೆ ಆಹ್ವಾನ ನೀಡಿದವರಿಂದ ಅಲ್ಪ ಮೊತ್ತದ ಹಣ, ದವಸಧಾನ್ಯಗಳು, ವಸ್ತ್ರ, ಉಡುಗೊರೆಗಳನ್ನು ಪಡೆಯುತ್ತಾರೆ. ಇಲ್ಲಿ ಹಾಡುಗಾರ ಸ್ಥಳೀಯರು ಕೊಡುವ ಹಣ, ದವಸಧಾನ್ಯಕ್ಕಿಂತ ಅವರು ತಮ್ಮ ಗಾಯನ ಕಲೆಗೆ ನೀಡುವ ಗೌರವ ದೊಡ್ಡದು ಎಂದು ಭಾವಿಸುತ್ತಾರೆ.

ಹಂಡಿಜೋಗಿಗಳು ಅರ್ಧಗಂಟೆಗಳಲ್ಲಿ ಹಾಡಿ ಮುಗಿಸಬಹುದಾದ ಪದಗಳಿಂದ ಹಿಡಿದು ಇಡೀ ರಾತ್ರಿ ಹಾಗೂ ಹಲವು ರಾತ್ರಿಗಳ ವರೆಗೆ ಹಾಡುವಷ್ಟು ಹಾಡುಗಳು ಅವರ ಸ್ಮರಣಶಕ್ತಿಯಲ್ಲಿರುತ್ತವೆ. ಇವರು ಹಾಡುವ ಲಾವಣಿಕತೆಗಳು ಅನೇಕ ವಸ್ತು ವೈವಿಧ್ಯಯಿಂದ ಕೂಡಿರುತ್ತದೆ. ಲಾವಣಿಗಳಲ್ಲಿನ ಅಂತಹ ವಿಷಯವಸ್ತುವನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

ಇತಿಹಾಸ (ಚರಿತ್ರೆ), ಪುರಾಣ, ಸಾಮಾಜಿಕ ಜೀವನ, ಯುದ್ಧ, ಅತಿಮಾನುಷ ಘಟನೆ, ಸಾಧುಸಂತರ ಜೀವನ, ಐತಿಹ್ಯ (ದಂತಕತೆ), ತತ್ವವಿಚಾರ (ವೈಚಾರಿಕತೆ), ಮನುಷ್ಯನ ಸಣ್ಣತನ (ಕುಟಿಲತೆ), ವಂಚನೆ (ಮೋಸ), ಪ್ರೇಮ (ಶೃಂಗಾರ), ನೀತಿಬೋಧನೆ, ದೇಶಾಭಿಮಾನ, ಸ್ವಾತಂತ್ರ್ಯ ಹೋರಾಟ ಹೀಗೆ ಹಲವು ವಿಷಯಗಳಿಗೆ ಸಂಬಂಧಿಸಿದ ಅನೇಕ ಲಾವಣಿಗಳನ್ನು ಹಾಡುವ ಕಲಾವಿದರು ಇವರಾಗಿದ್ದಾರೆ. ಕೇವಲ ಕಂಠಸ್ಥ ಸಂಪ್ರದಾಯದಲ್ಲಿಯೇ ಇವರು ತಮ್ಮ ಕಥನ ಕಲೆಯನ್ನು ಇಂದಿಗೂ ಸಂರಕ್ಷಿಸಿಕೊಂಡು ಬಂದಿರುವುದನ್ನು ನೋಡಬಹುದಾಗಿದೆ. ಕಳೆದ ೩-೪ ದಶಕಗಳ ಹಿಂದೆ ಇವರು ತಾವು ನೆಲೆಸಿರುವ ಪರಿಸರದಲ್ಲಿನ ಇತರೇ ಸಮುದಾಯದವರ ಪ್ರತೀ ಮನೆ ಮನೆಗಳಿಗೆ ತೆರಳಿ ಹಾಡುಗಳನ್ನು ಹಾಡುತ್ತ, ಹಣ ಹಾಗೂ ದವಸ ಧಾನ್ಯಗಳನ್ನು ಪಡೆಯುತ್ತಿದ್ದರು. ಇಂತಹ ಸಂದರ್ಭಗಳಲ್ಲಿ ಸುಧೀರ್ಘ ರಚನೆಯ ಹಾಡುಗಳನ್ನು ಹಾಡದೆ ಒಂದೊಂದು ಪಲ್ಲವಿಯನ್ನು ಹಾಡುತ್ತ ಮುಂದೆ ಸಾಗುತ್ತಿದ್ದರು. ವಿಶೇಷ ಸಂದರ್ಭಗಳಲ್ಲಿ ಆಹ್ವಾನಿಸಿದಾಗ ಮಾತ್ರ ಸುಧೀರ್ಘ ರಚನೆಯ ಲಾವಣಿಗಳನ್ನು ಹಾಡುತ್ತಿದ್ದರು.

ಸ್ಥಳೀಯ ಪರಿಸರದಲ್ಲಿರುವ ಇತರೇ ಸಮುದಾಯದವರು ಕತೆ ಮಾಡಿಸುವ ಸಲುವಾಗಿಯೇ ಇವರಿಗೆ ವೀಳ್ಯ ನೀಡಿ ಆಹ್ವಾನಿಸುತ್ತಿದ್ದರು. ಇಂತಹ ಸಂದರ್ಭಗಳಲ್ಲಿ ಇವರು ೩-೪ ಜನರು

ಕೂಡಿಕೊಂಡು ಒಂದು ಗುಂಪಿನಲ್ಲಿ ಮೇಳವನ್ನು ಸಂಘಟಿಸಿ ಹಾಡುಗಳನ್ನು ಹಾಡುತ್ತಿದ್ದರು. ವಿಶಾಲವಾದ ಪ್ರದೇಶದಲ್ಲಿ ಅಪಾರ ಸಂಖ್ಯೆಯ ಜನತೆಯ ಸಮ್ಮುಖದಲ್ಲಿ ಇವರು ತಮ್ಮ ಕಥನ ಕಲೆಯ ಪ್ರದರ್ಶನವನ್ನು ಮಾಡುತ್ತಿದ್ದರು. ಇವರು ಹಾಡುವ ಸತ್ಯ, ನೀತಿಯಿಂದ ಕೂಡಿದ ಪುಣ್ಯ ಕತೆಗಳು ಜನತೆಯ ಕಣ್ಣಲ್ಲಿ ನೀರು ತರಿಸುತ್ತಿದ್ದವು. ಇವರು ಹಾಡಿನ ಸಂಪ್ರದಾಯಕ್ಕೆ ತಕ್ಕಂತೆ ವಾದ್ಯಗಳನ್ನು ಬಳಸಿಕೊಂಡು ಹಾಡುತ್ತಿರುವುದು ಕಂಡುಬರುತ್ತದೆ.

ಇವರು ಧಾರ್ಮಿಕ ವೃತ್ತಿಗಾಯಕರಂತೆ ಯಾವುದೇ ನಿರ್ಧಿಷ್ಟ ದೈವ ಹಾಗೂ ಧಾರ್ಮಿಕ ಪಂಥಕ್ಕೆ ತಮ್ಮನ್ನು ಮೀಸಲಾಗಿಟ್ಟುಕೊಂಡವರಲ್ಲ. ಸ್ವತಂತ್ರವಾಗಿ ತಮ್ಮದೇ ಆದ ಕಥನ ಕಲೆಯನ್ನು (ಹಾಡುಗಾರಿಕೆ) ಸಾಂಪ್ರದಾಯಿಕವಾಗಿ ಮುಂದುವರೆಸಿಕೊಂಡು ಬಂದಿದ್ದಾರೆ. ಇವರು ಇತರೇ ಜನಪದ ಧಾರ್ಮಿಕ ಪರಂಪರೆಯ ಕಲಾವಿದರಂತೆ ನಿರ್ಧಿಷ್ಟ ದೇವರ ಜಾತ್ರೆ, ನಿರ್ಧಿಷ್ಟ ದೈವಗಳ ಉತ್ಸವಗಳಲ್ಲಿ ಭಾಗವಹಿಸುವುದಾಗಲಿ, ನಿರ್ದಿಷ್ಟ ಬಿರುದು ಬಾವಲಿಗಳನ್ನು ನಿತ್ಯ ಧರಿಸುವುದಾಗಲಿ ಮಾಡುವುದಿಲ್ಲ. ಇವರು ಸ್ವತಂತ್ರರು. ತಮಗೆ ಅನುಕೂಲವಾದ ದಿನಗಳಲ್ಲಿ ಭಿಕ್ಷಾಟನೆ ಹಾಗೂ ಹಾಡುಗಾರಿಕೆಯನ್ನು ನಡೆಸುತ್ತಾರೆ. ಈ ಸಮಯದಲ್ಲಿ ಸಮುದಾಯದ ಸಂಪ್ರದಾಯದಿಂದ ಬಂದ ವಾದ್ಯಗಳನ್ನು (ಕಿನ್ನೂರಿ) ಬಳಸಿಕೊಂಡು ಮೇಳಗಳನ್ನು ಸಂಘಟಿಸುತ್ತಾರೆ. ಹಾಡುಗಾರೆಕೆಯನ್ನೇ ಪ್ರಧಾನ ವೃತ್ತಿಯನ್ನಾಗಿಸಿಕೊಂಡಿರುವ ಇವರಲ್ಲಿ ಮೊದಲನೇ ತಲೆಮಾರಿನ ಕೆಲವು ಹಿರಿಯರು ಗುಂಪು-ಗುಂಪುಗಳಲ್ಲಿ ಇಂದಿಗೂ ಹಾಡುಗಳನ್ನು ಹಾಡುತ್ತ ವರ್ಷದ ಹೆಚ್ಚಿನ ದಿನಗಳನ್ನು ಸಂಚಾರಲ್ಲಿಯೇ ಕಳೆಯುವುದನ್ನು ಕಾಣಬಹುದಾಗಿದೆ. ಇಂತಹ ಸಂದರ್ಭದಲ್ಲಿ ರಾತ್ರಿಯಾಗುತ್ತಲೇ ಊರಿನ ಹಾಳು ದೇವಾಲಯ, ಊರ ಹೊರಗಿನ ಛಾವಡಿ, ಹಾಳು ಮಂಟಪಗಳೇ ಇವರ ವಾಸಸ್ಥಾನಗಳು. ಸುಗ್ಗಿಯ ದಿನಗಳನ್ನು ಇವರು ಹೆಚ್ಚು ಸಂಚಾರದಲ್ಲಿಯೇ ಕಳೆಯುತ್ತಾರೆ. ಇವರು ಜೀವನ ನಿರ್ವಹಣೆ ಭಿಕ್ಷಾಟನೆ (ಆಹಾರ ಸಂಗ್ರಹಣೆಗೆ, ದವಸ ಧಾನ್ಯ, ಕಾಣಿಕೆ ಸಂಗ್ರಹಣೆ, ವಸ್ತ್ರ ಉಡುಗೊರೆ) ಮಾಡುವವರಂತೆ ಕಂಡರೂ ಇವರು ಅಪಾರವಾದ ಜನಪದ ಹಾಡುಗಾರಿಕೆಯನ್ನು ತಮ್ಮ ಸ್ಮೃತಿಯಲ್ಲಿ ಹುದುಗಿಸಿಟ್ಟುಕೊಂಡ ಜನಪದ ಕಲಾವಿದರಾಗಿದ್ದಾರೆ.

ಸಮುದಾಯದ ಸಾಂಪ್ರದಾಯಿಕ ವೇಷಭೂಷಣಗಳು ಹಾಗೂ ವಾದ್ಯ ಪರಿಕರಗಳನ್ನು ಧರಿಸಿಕೊಂಡು ಅನೇಕ ಜನಪದ ಕತೆಗಳನ್ನು, ಲಾವಣಿಗಳನ್ನು ರಚಿಸಿ ಸಹಸ್ರ ಸಂಖ್ಯೆಯ ಜನರೆದುರಿಗೆ ಅಭಿನಯದ ಮೂಲಕ ನರ್ತಿಸಿ ಹಾಡುವ ಕಲಾನಿಪುಣರು ಇವರಾಗಿದ್ದಾರೆ. ಇವರು ಹಾಡುವ ಲಾವಣಿ ಕತೆಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

ನೀಲಕಂಠ-ಪಾರ್ವತಿ

ಬಸವ ಕುಮಾರ

ಲೋಹಿತ ಕುಮಾರ

ಅರಣ್ಯಕುಮಾರ ಇನ್ನು ಮುಂತಾದವರು.

ಇವರು ಹಾಡುವ ಒಂದು ಸಾಮಾಜಿಕ ಲಾವಣಿಯನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

**ಲಾವಣಿ ಹಾಡು**

ನಾಡಕೆ ದೊಡ್ಡದು ನಾಗರ ಪಂಚಮಿ
ಬಂದಿತಣ್ಣ ಒಳ್ಳೆ ಸೋಮವಾರ
ಎಂದು ಇಲ್ಲದ ತಾಯಿ ತಂದೆಗೆ
ಹುಟ್ಟಿತಪ್ಪ ಮಕ್ಕಳ ಪ್ರೀತಿ...
ಹೋಗಪ್ಪಾ ಮಗನೆ ಬೀಗರೂರಿಗೆ
ಕರಿಯಬೇಕ ನಿನ್ನ ತಂಗೆಮ್ಮನಾ...
ತಾಯಿ ಹಾಡಿದ ಮಾತು ಕೇಳಿ
ಮಗ ಹೊರಟನಪ್ಪಾ ಭಲಭುಜ
ತಾಯಿ ಮಾಡಿದ ಮಸಾಲ ತುಪ್ಪ ರೊಟ್ಟಿ ಕಟ್ಟಿ
ಏರುತಾನೆ ತನ್ನ ಎತ್ತಿನ ಮೇಲೆ
ಒಂಟಿ ಎತ್ತಿಗೆ ಗಂಟಿ ಸರಪಳಿ
ಏರಿಸಿದನಪ್ಪಾ ಬಹಳ ಮಜವಾಗಿ
ಅದೇ ಎತ್ತಿನ ಮೇಲೆ ಕುಳಾತಕೊಂಡು
ಹೊರಡುತಾನೆ ಬೀಗರೂರಿಗೆ ತಾ...
ಬೀಗನ ಮುಂದೆ ಬೇಗಾನೇ ಹೋಗಿ
ತೆಗೆಯುತಾನೆ ಒಳ್ಳೆಯ ಸುದ್ದಿನಾ...
ಗಾಡಿ ಎತ್ತು ನಾನು ಬಿಟ್ಟು ಬಂದಿರುವೆ
ನೀವು ಕಳಸಿ ಕೊಡಿ ನನ್ನ ತಂಗಿಯಮ್ಮನಾ...
ಹೊಲ ಮನೆ ನಾನು ಬಿಟ್ಟು ಬಂದಿನಿ
ಕಳಸಿ ಕೊಡಿ ನನ್ನ ತಂಗಿಯಮ್ಮನಾ...
ಅಣ್ಣಾ ಹಾಡಿದ ಮಾತನ್ನು ಕೇಳಿ
ತಂಗಿಗೆ ಆಯ್ತು ಬಹಳ ಖುಷಿ
ಜರತಾರಿ ಕುಪ್ಪಸ, ಜರತಾರಿ ಸೀರೆಯನ್ನು
ಉಟ್ಟಳಪ್ಪ ಬಹಳ ಮಜವಾಗಿ
ಬಾರಮ್ಮ ತಂಗಿ ಹೋಗೋಣ ಎಂದು
ಕರೆಯುತಾನೆ ತನ್ನ ಅಣ್ಣಾ...
ಅಣ್ಣಾನು ಹಾಡಿದ ಮಾತು ಕೇಳಿ
ತಂಗಿಗೆ ಹುಟ್ಟಿತು ಬಲು ಖುಷಿ...
ಅಣ್ಣನು ತಂಗಿ ಇಬ್ಬರು ಸೇರಿ
ಹೊರಡುತಾರೆ ತವರೂರಿಗೆ ನಾ...

ತಂಗಿಯ ಕಡೆಗೆ ಅಣ್ಣನು ಕಂಡು
ಏನೆಂದುಕೊಂಡನು ಮನಸ್ಸಿನಾಗೆ
ತಂಗೀಯ ಕೊಂದರೆ ನಾನು
ಸಾಯೋತನಕ ಉಣಬಹುದು ಈ ಒಡವೆನಾ...
ಅಣ್ಣನು ತಂಗಿ ಇಬ್ಬರು ಸೇರಿ
ಹೊರಡುತಾರೆ ತವರೂರಿಗೆ ನಾ...
ತವರೂರಿಗೆ ಹೋಗುವ ದಾರಿಯಲ್ಲಿ
ಗುಡ್ಡ ಗವಾರದ ಅರಣ್ಯದಲ್ಲಿ ಸುತ್ತ ನೋಡಿದರು ಯಾರಿಲ್ಲ...
ಊರಿನ ದಾರಿಯ ಬಿಟ್ಟು ಬೇರೆ ದಾರಿಯ ಕಡೆಗೆ ಹೊಡೆದನು
ಎತ್ತಿನ ಗಾಡಿಯನ್ನು ಅಣ್ಣಯ್ಯ...
ಯಾಕೋ ಅಣ್ಣಯ್ಯ ಊರಿನ ದಾರಿಯ ಬಿಟ್ಟು ಬೇರೆ ದಾರಿಯ ಕಡೆಗೆ ಹೊರಟೀಯಾ....
ಬಾರಮ್ಮ ತಂಗಿ ಇಲ್ಲಿ ಹೋದರೆ ಊರಿಗೆ ಹತ್ತಿರ ಆಗುತೈತಿ.... ತಂಗಿಯಮ್ಮ
ರಸ್ತೇಲಿ ಹೋದರೆ ದೂರ ಆಗುವುದು
ಎಂದು ಹೇಳಿದ ಅಣ್ಣಯ್ಯ...
ನಡುದಾರಿಗೆ ಹೋದ ಮೇಲೆ
ಅಣ್ಣ ಮಾಡಿದ ಮಸಲತ್ತು...
ಎಲ್ಲೋ ಅಣ್ಣ ಎಲ್ಲೋ ತಂಗಿ
ತಂಗಿಗೆ ಮಾಡಿದ ಮಸಲತ್ತೆಲ್ಲ ಪರಶಿವನ ಎಚ್ಚರಿಕೆ...
ತಂಗಿಯ ಸೀರೆ ಜಗ್ಗಿದನಪ್ಪಾ ಅಣ್ಣಯ್ಯ
ತಂಗಿಯ ಕೈಕಾಲು ಕಟ್ಟುತಾನೆ ಅಣ್ಣಯ್ಯ...
ಅದೇ ಸಮಯಕ್ಕೆ ಒಂದು ಹಾವು ಬಂದು
ಕಾಳಿಂಗ ಸರ್ಪವಾಗಿ ಸರಿದು ಮಲಗಿತು ಬಂಡೆಗೆ ತಾ...
ಕೈಯಿಂದ ಬಡಿದರೆ ಹೋಗಲಾರದು
ಬಂಡ ಹೆಣ್ಣಿನ ಜನ್ಮವಾ...
ತಂಗಿಯ ತಲೆಯ ಮೇಲೆ
ಬಂಡೆಯನ್ನು ಎತ್ತಿ ಹಾಕಬೇಕು ಎಂದು ಹೇಳಿ...
ಅದೇ ಬಂಡೆಗೆ ಕೈ ಚಾಚಿದಾಗ ಸರ್ಪ
ಕಚ್ಚುತಾದೆ ಕಿರುಬೆರಳಿಗೆ ನಾ
ವಿಷವು ಏರಿತು ತಂಗೆಮ್ಮ
ನೀರನು ಕೊಡು ತಂಗೆಮ್ಮ...
ಹೇಗೆ ಕೊಡಲಿ ಅಣ್ಣಯ್ಯ ನಾನು
ಕೈಕಾಲು ಬಿಚ್ಚುವರು ಯಾರಿಲ್ಲ...
ಅದೇ ಸಮಯದಲ್ಲಿ ಪರಶಿವನು

ಮಾರುವೇಶದಲ್ಲಿ ಬಂದು ಕೈಕಾಲು ಬಿಚ್ಚುವ ಹೊತ್ತಿಗೆ...
ಅಣ್ಣನ ಪ್ರಾಣವು ಕೈಲಾಸ ಸೇರಿತು...
ಕೇಳಪ್ಪಾ ಸ್ವಾಮಿ ಅಣ್ಣನ ಜನ್ಮ
ಉಳಿಸಪ್ಪಾ ನೀನು ತಾಸೊಳಗೆ
ಕೇಳಮ್ಮ ಮಗಳೆ ಪಾಪಿಯ ಜನ್ಮವನು
ನಾನು ಉಳಿಸಲಾರೆ...
ಹೋಗಮ್ಮ ಮಗಳೆ ಗಂಡನ ಮನೆಗೆ
ಹೋಗಿ ನೀನು ಸುಖವಾಗಿ ಬಾಳು...
ಅದೇ ಮಾತನ್ನು ಹೇಳಿದ ಶಿವನು
ಮಾಯವಾದನು ಶಿವರಾಯ...
ಅದೇ ಎತ್ತಿನ ಮೇಲೆ ಕುಳಾತುಕೊಂಡು
ಹೊರಡುತಾಳೆ ತವರೂರಿಗೆ ನಾ...
ಮಗಳು ಬರುವುದ ಕಂಡು
ತಾಯಿ-ತಂದೆ ಓಡಿ ಓಡಿ ಬರುತಾರೆ ಅಡ್ಡಾ....
ಏನಮ್ಮ ಮಗಳೇ ಒಬ್ಬಳೇ ಬಂದಿಯಾ
ಅಣ್ಣನು ಎತ್ತ ಕಡೆ ಹೋದನು...
ಅಣ್ಣನು ಮಾಡಿದ ಮಸಲತ್ತನ್ನೆಲ್ಲ
ಬಿಚ್ಚಿ ಹೇಳಿದಳು ತಾಯಿ ಮುಂದೆ...
ಬಾರಮ್ಮ ಮಗಳೆ ದೊಡ್ಡ ಜಾಲಿ
ಸಣ್ಣ ಜಾಲಿ ಮುಳ್ಳು ತುಳಿದು ಬಂದಿಯಾ
ಸತ್ತ ಶವವನು ತಂದು ತಾಯಿ ತಂದೆಗೆ
ಕೊಟ್ಟರೆ ತಮ್ಮ ಹಿರಿ ಮಗನಾ
ದಿವಸ ಕಾರ್ಯಗಳು ಮುಗಿಸಾರೆ ತಾಯಿ ತಂದೆ
ಹೋಗಮ್ಮ ಮಗಳೆ ಗಂಡನ ಮನೆಗೆ
ಗಂಡನ ಮನೆಗೆ ಹೋಗಿ ಸುಖವಾಗಿ ಬದುಕು ಎಂದು ಹೇಳಿದರು
ಜರತಾರಿ ಕುಪ್ಪಸ ಜರತಾರಿ ಸೀರೆ
ಉಡಿಸುತಾಳೆ ತನ್ನ ಮಗಳಿಗೆ...
ಹೊರಲಾರದಷ್ಟು ಒಡವೆ ವಸ್ತ್ರ
ಧರಿಸುತಾಳೆ ತನ್ನ ಹೆತ್ತ ತಾಯಿ...
ಎತ್ತಿನ ಮೇಲೆ ಕೂರಿಸಿ ಕಳಿಸುತಾರೆ
ತನ್ನ ಗಂಡನ ಮನೆಗೆ...
ನಾಡಕ ದೊಡ್ಡದು ನಾಗರ ಪಂಚಮಿ
ಬಂದಿತಣ್ಣ ಒಳ್ಳೆ ಸೋಮವಾರ.

ಹೀಗೆ ಹಂಡಿಜೋಗಿಗಳು ಕೌಟುಂಬಿಕ ಸಂಬಂಧಗಳನ್ನು ಕುರಿತು ವಿವರಿಸುವ ಅನೇಕ ಲಾವಣಿಗಳನ್ನು ಹಾಡುವುದು ಕಂಡುಬರುತ್ತದೆ. ಪ್ರಮುಖವಾಗಿ ಅಣ್ಣ-ತಂಗಿ, ಗಂಡ-ಹೆಂಡತಿ, ಅತ್ತೆ-ಸೊಸೆಯರಿಗೆ ಸಂಬಂಧಿಸಿದ ಲಾವಣಿಗಳನ್ನು ಹೆಚ್ಚು ಹಾಡುವುದು ಕಂಡುಬರುತ್ತದೆ. ಒಟ್ಟಾರೆ ಹಂಡಿಜೋಗಿಗಳ ಲಾವಣಿ ಹಾಡುಗಳೆಲ್ಲವೂ ಸಹ ಕನ್ನಡದಲ್ಲಿರುವುದನ್ನು ಗುರುತಿಸಬಹುದಾಗಿದೆ. ಸಮುದಾಯದ ಸಾಂಪ್ರದಾಯಿಕ ಹಾಡುಗಳನ್ನು ಸಮುದಾಯದ ಸಾಂಸ್ಕೃತಿಕ ಆಚರಣೆಗಳಾದ ದೀಕ್ಷೆ, ವಿವಾಹ, ಋತುಮತಿ ಮೊದಲಾದ ಆಚರಣೆಗಳಲ್ಲಿ ಮಾತ್ರ ಹಾಡುವುದು ಕಂಡುಬರುತ್ತದೆ.

### ೩.೩. ಹಂಡಿಜೋಗಿ ಸಮುದಾಯದ ಸಾಂಸ್ಕೃತಿಕ ನಾಯಕರು

ಶೈವ ಆರಾಧನಾ ಕೇಂದ್ರಗಳ ಭಕ್ತರಾದ ಹಂಡಿಜೋಗಿಗಳು ಭೈರವನ ಒಕ್ಕಲಿಗೆ ಸೇರಿದವರಾಗಿದ್ದಾರೆ. ಭೈರವನನ್ನು ತಮ್ಮ ಸಮುದಾಯದ ಕುಲದೈವವೆಂದು ಪೂಜಿಸುತ್ತಿರುವುದು ಕಂಡುಬರುತ್ತದೆ. ತ್ರಿಶೂಲರೂಪಿಯಾದ ಕಾಲಭೈರವನೇ ಹಂಡಿಜೋಗಿಗಳ ಆರಾಧ್ಯ ದೈವವಾಗಿರುವುದನ್ನು ಗುರುತಿಸಬಹುದಾಗಿದೆ. ಹಂಡಿಜೋಗಿಗಳು ತಮ್ಮ ನೆಲೆಗಳಲ್ಲಿ ಎಲ್ಲಿಯೂ ಸಹ ಕಾಲಭೈರವನಿಗೆ ದೇವಸ್ಥಾನವನ್ನು ನಿರ್ಮಿಸದಿರುವುದು ಕಂಡುಬರುತ್ತದೆ. ಆದರೆ ಸಮುದಾಯದ ಪ್ರತಿಯೊಂದು ನೆಲೆಗಳಲ್ಲಿಯೂ ದೊಡ್ಡ ಕಲ್ಲಿನ ರಾಶಿಯ ಮಧ್ಯದಲ್ಲಿ ತ್ರಿಶೂಲವನ್ನಿರಿಸಿ ಭೈರವನನ್ನು ಪ್ರತಿಷ್ಠಾಪಿಸಿರುವುದು ಕಂಡುಬರುತ್ತದೆ. ಶಿವನ ಆಯುಧವಾದ ತ್ರಿಶೂಲವನ್ನು ಸಮುದಾಯದ ಪ್ರತಿಯೊಂದು ಕುಟುಂಬವೂ ಪೂಜಿಸುತ್ತಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ ತ್ರಿಶೂಲವನ್ನು ಭೈರವ ಸಂಕೇತ ಎಂದು ವಿವರಿಸುತ್ತಾರೆ. ಜೊತೆಗೆ ತ್ರಿಶೂಲವು ನಮ್ಮ ಸಮುದಾಯದ ಕುಲ, ಸಂಕೇತ (ಚಿಹ್ನೆ, ಬಿರುದು) ಎಂದು ಸಮುದಾಯದ ಹಿರಿಯರು ವಿವರಿಸುವುದು ಕಂಡುಬರುತ್ತದೆ. ನಮ್ಮ ಸಮುದಾಯದ ಕುಲ ಸಂಕೇತವನ್ನು ಶಿವನಿಂದ ಪಡೆದುಕೊಳ್ಳಲಾಯಿತು. ಶಿವನೇ ನಮಗೆ ಕಿನ್ನುರಿ, ಜೋಳಿಗೆ, ತ್ರಿಶೂಲ ಮೊದಲಾದ ಕುಲಸಂಕೇತಗಳನ್ನು ನೀಡಿರುವನು. ಜೊತೆಗೆ ಶಿವನಿಗೂ ಸಹ ಕುಂಡಲ ದೀಕ್ಷೆಯಾಗಿರುವುದನ್ನು ವಿವರಿಸುತ್ತ, ನಾವೂ ಸಹ ಭೈರವನ (ಶಿವ) ಸನ್ನಿಧಿಯಲ್ಲಿ ಕುಂಡಲದೀಕ್ಷೆ ಪಡೆಯುವುದಾಗಿ ವಿವರಿಸುವುದು ಕಂಡುಬರುತ್ತದೆ. ಹಾಗಾಗಿ ಪರಮೇಶ್ವರನೇ (ಶಿವ) ಆದಿಜೋಗಿ ನಾವುಗಳು ಅವನ ಮಕ್ಕಳು ಎಂದು ಪುರಾಣ ಕತೆಯನ್ನು ಸಮುದಾಯದ ಹಿರಿಯರು ವಿವರಿಸುತ್ತ ಪರಮೇಶ್ವರನೇ ನಮ್ಮ ಸಮುದಾಯದ ಸಂಸ್ಕೃತಿಯ ನಾಯಕ ಎಂದು ವಿವರಿಸುವುದು ಕಂಡುಬರುತ್ತದೆ. ಸಮುದಾಯದ ವಕ್ತೃಗಳು ವಿವರಿಸುವಂತೆ ಹಂಡಿಜೋಗಿ ಸಮುದಾಯದ ಸಂಸ್ಕೃತಿಯ ನಾಯಕರನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

**ಸಮುದಾಯದ ಸಂಸ್ಕೃತಿಯ ನಾಯಕರು**

೧. ಪರಮೇಶ್ವರ (ಶಿವ)

೨. ಅರ್ಜುನ

೩. ಗೋರಕ್ಷನಾಥ (ಗೋರಖನಾಥ)

೪. ಮಚ್ಚೇಂದ್ರನಾಥ (ಮತ್ಸೇಂದ್ರನಾಥ)

ಮೇಲಿನ ಎಲ್ಲರೂ ತಮ್ಮ ಸಮುದಾಯದ ಸಂಸ್ಕೃತಿಯ ಮೂಲ ಪುರುಷರು ಎಂದು ಅದಕ್ಕೆ ಸಂಬಂಧಿಸಿದ ಪುರಾಣ ಕತೆಗಳನ್ನು ಸಮುದಾಯದ ವಕ್ತೃಗಳು ವಿವರಿಸುತ್ತಿರುವುದು ಕಂಡುಬರುತ್ತದೆ. ಈ ಪುರಾಣ ಕತೆಗಳನ್ನು 'ಹಂಡಿಜೋಗಿ ಸಮುದಾಯದ ಮೂಲ' ಎಂಬ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಹಂಡಿಜೋಗಿಗಳು ಶೈವಮತವಾದ ನಾಥಪಂಥದ ಅನುಯಾಯಿಗಳಾಗಿರುವುದು ಕಂಡುಬರುತ್ತದೆ. ಶೈವಮತಾನುಚರಣೆ, ನಾಥಪಂಥದ ಆಚರಣೆ ಹಾಗೂ ಹಂಡಿಜೋಗಿಗಳ ಸಾಂಸ್ಕೃತಿಕ ಆಚರಣೆಗಳಲ್ಲಿ ಒಂದಕ್ಕೊಂದು ಸಾಮ್ಯತೆ ಇರುವುದು ಕಂಡುಬರುತ್ತದೆ.

ಜನಿವಾರ, ಉಪನಯನ, ಕುಂಡಲದೀಕ್ಷೆ, ಸಿದ್ಧಭುಕ್ತಿ ಮೊದಲಾದ ಆಚರಣೆಗಳಲ್ಲಿ ಮೇಲಿನ ಅಂಶಗಳನ್ನು ಗುರುತಿಸಬಹುದಾಗಿದೆ. ಹಂಡಿಜೋಗಿಗಳು ಶೈವ ಮತದ ಹೆಸರುಗಳನ್ನು ತಮ್ಮ ಸಮುದಾಯದ ವ್ಯಕ್ತಿಗಳಿಗೆ ಇಟ್ಟಿರುವುದನ್ನು ಗುರುತಿಸಬಹುದಾಗಿದೆ. ಶಿವಶಂಕರ, ಶಂಕರಪ್ಪ, ಪರಮೇಶ, ಶಿವಪ್ಪ, ಭೈರವ, ಸಾಂಭಶಿವ, ಶಿವಮೂರ್ತಿ, ಜಯಮೇಜಯ ಮೊದಲಾದವುಗಳನ್ನು ಗುರುತಿಸಬಹುದಾಗಿದೆ.

ಇದರ ಜೊತೆಗೆ ನಾಥಪಂಥದ ಪ್ರತಿಪಾದಕರಾದ ಗೋರಖನಾಥ ಮತ್ತು ಮಚ್ಚೇಂದ್ರನಾಥರು ತಮ್ಮ ಸಂಸ್ಕೃತಿಯ ನಾಯಕರೆಂದು ವಿವರಿಸುವುದು ಕಂಡುಬರುತ್ತದೆ. ಸಮುದಾಯದಲ್ಲಿ ನಾಥಪಂಥದ 'ನಾಥ' ಸಂಬಂಧಿಯಾದ ವ್ಯಕ್ತಿನಾಮಗಳಿರುವುದು ಕಂಡುಬರುತ್ತದೆ.

ಶಂಕರನಾಥ, ಸಾರಂಗನಾಥ, ಪ್ರೇಮನಾಥ, ಪವಾಡನಾಥ, ಡೊಂಗರನಾಥ, ಕೇರನಾಥ, ಶಾಂತನಾಥ ಮೊದಲಾದ ಹೆಸರುಗಳನ್ನು ಗುರುತಿಸಬಹುದಾಗಿದೆ. ಸಮುದಾಯದ ಅನೇಕ ಆಚರಣೆಗಳು ನಾಥಪಂಥದ ಆಚರಣೆಗಳಾಗಿರುವುದನ್ನು ಗುರುತಿಸಬಹುದಾಗಿದೆ. ಉದಾ. ಭಂಗಿಸೇವನೆ, ಸಿದ್ಧಭುಕ್ತಿ, ಸಿಂಗನಾದ ಮೊದಲಾದವು.

ಇದರ ಜೊತೆಗೆ ಹಂಡಿಜೋಗಿಗಳು ಮಹಾಭಾರತದ ಪಾಂಡವರ ಅರ್ಜುನನು ನಮ್ಮ ಸಂಸ್ಕೃತಿಯ ನಾಯಕ ಎಂದು ವಿವರಿಸುತ್ತಾರೆ. ಅರ್ಜುನನಿಂದಲೇ ನಮ್ಮ ಸಮುದಾಯದ ಕುಲಸಂಕೇತಗಳಾದ ಕಿನ್ನೂರಿ, ಜೋಳಿಗೆ ಮೊದಲಾದವುಗಳನ್ನು ಪಡೆಯಲಾಯಿತು ಎಂದು ವಿವರಿಸುತ್ತಾರೆ. ಪರಮಾತ್ಮನಿಗೆ ಅತಿ ಅಚ್ಚುಮೆಚ್ಚಿನ ಶಿಷ್ಯನಾದ ಅರ್ಜುನನೇ ನಮ್ಮ ಸಮುದಾಯದ ಮೂಲಪುರುಷ. ಅರ್ಜುನನೇ ಮೊದಲು ಜೋಗಿ ವೇಷ ಧರಿಸಿ ಮೊದಲ ಜೋಗಿಯಾಗಿದ್ದನು. ನಂತರ ನಮಗೆ ಆ ವೇಷವನ್ನು ನೀಡಿದನು. ಅಂದಿನಿಂದ ನಾವು ಜೋಗಿ ವೇಷ ಧರಿಸಿ ಜೋಗಿಗಳಾಗಿ ಪಾಂಡವರ ಕತೆಯನ್ನು ಹಾಡಿಕೊಂಡಿರುವುದಾಗಿ ವಿವರಿಸುತ್ತಾರೆ. ಹಂಡಿಜೋಗಿಗಳು ನಾವು ಅರ್ಜುನನ ಸಂತತಿಗೆ ಸೇರಿದವರಾಗಿದ್ದರಿಂದ ನಮಗೆ ಎಂದೂ ಸಿಡಿಲು ಬಡಿಯುವುದಿಲ್ಲ. ಇಂದಿಗೂ ಸಹ ಜೋಗಿಗಳಿಗೆ ಸಿಡಿಲು ಬಡಿದಿರುವ ನಿದರ್ಶನಗಳಿಲ್ಲ. ಅರ್ಜುನ ನಮಗೆ ಸಿಡಿಲಿನಿಂದ ರಕ್ಷಣೆ ನೀಡಿರುವುದಾಗಿ ವಿವರಿಸುತ್ತಾರೆ. ಸಿಡಿಲಿನ ಶಬ್ದ ಕೇಳಿದ ಕೂಡಲೇ 'ಅರ್ಜುನ' ಎಂದು

ಹೇಳುವುದು ಕಂಡುಬರುತ್ತದೆ. ಅಲೆಮಾರಿಗಳಾದ ನಾವು ಅಡವಿ, ಕಾಡು ಮೇಡುಗಳ ಅಂಚಿನಲ್ಲಿ ಡೇರೆಗಳನ್ನು ನಿರ್ಮಿಸಿಕೊಂಡು ಬದುಕುವವರಾದ್ದರಿಂದ ನಮ್ಮ ಮೇಲೆ ಅರ್ಜುನನ ದಯೆ ಇದೆ ಎಂದು ವಿವರಿಸುತ್ತಾರೆ.

ಜೊತೆಗೆ ಹಂಡಿಜೋಗಿ ಸಮುದಾಯದ ಪ್ರತಿಯೊಂದು ನೆಲೆಗಳಲ್ಲಿಯೂ 'ಅರ್ಜುನ' ಎಂಬ ಹೆಸರಿನ ಅನೇಕ ವ್ಯಕ್ತಿಗಳಿರುವುದು ಕಂಡುಬರುತ್ತದೆ. ಅರ್ಜುನ, ಅರ್ಜುನಪ್ಪ, ದಳವಾಯಿ ಅರ್ಜುನಪ್ಪ ಮೊದಲಾದವು. ಜೊತೆಗೆ ಹಂಡಿಜೋಗಿಗಳು ತಮ್ಮ ಸಮುದಾಯದ ಮೂಲ ಹಾಗೂ ಶ್ರೇಷ್ಠತೆಗೆ ಸಂಬಂಧಿಸಿದಂತೆ ಪರಮೇಶ್ವರನೇ ಆದಿ ಜೋಗಿ ನಾವು ಅವನ ಮಕ್ಕಳು ಜೋಗಿಗಳು ಎಂದು ವಿವರಿಸುತ್ತಾರೆ.

ಒಟ್ಟಾರೆ ಹಂಡಿಜೋಗಿಗಳು ಶೈವ ಮತ ಪಂಥದ ಆರಾಧಕರಾಗಿರುವುದು ಕಂಡುಬರುತ್ತದೆ. ಹಾಗಾಗಿ ಇವರು ಪರಮೇಶ್ವರನ ಮಕ್ಕಳು ನಾವುಗಳು ಎಂದು ವಿವರಿಸುವುದು ಸಹಜವಾದುದಾಗಿದೆ. ಜೊತೆಗೆ ಇವರು ನಾಥಪಂಥದ ಮತಾನುಸರಣೆಯನ್ನು ಮಾಡುವುದು ಕಂಡುಬರುತ್ತದೆ. ನಾಥಪಂಥದ ಪ್ರವರ್ತಕರಾದ ಗೋರಖ ಹಾಗೂ ಮಚ್ಚೇಂದ್ರರ ಶಿಷ್ಯರಾಗಿದ್ದಾರೆ. ಗೋರಖನ ಹೆಸರಿನಲ್ಲಿ ತಮ್ಮ ಸಮುದಾಯದ ಅಭಿವೃದ್ಧಿಯ ಸಂಘ ಸಂಸ್ಥೆಗಳನ್ನು ಸ್ಥಾಪಿಸುವುದನ್ನು ಗುರುತಿಸಬಹುದಾಗಿದೆ.

### ೩.೪. ಹಂಡಿಜೋಗಿಗಳ ಅಲೆಮಾರಿ ಜೀವನ ಕ್ರಮ

ಹಂಡಿಜೋಗಿಗಳು ಮೂಲತಃ ಅಲೆಮಾರಿ ಸಮುದಾಯಕ್ಕೆ ಸೇರಿದವರಾಗಿದ್ದು, ಕಳೆದ ಎಂಟು-ಹತ್ತು ದಶಕದಿಂದೀಚೆಗೆ ಕರ್ನಾಟಕದ ಕೆಲವು ಭಾಗಗಳಲ್ಲಿ ಶಾಶ್ವತ ನೆಲೆಗಳನ್ನು ನಿರ್ಮಿಸಿಕೊಂಡು ಜೀವಿಸುತ್ತಿರುವುದು ಕಂಡುಬರುತ್ತದೆ. ಇಂದಿಗೂ ಸಹ ವರ್ಷದ ಕೆಲವು ತಿಂಗಳುಗಳು ಸಂಚಾರದಲ್ಲಿ ನಿರತರಾಗಿರುವುದನ್ನು ಗುರುತಿಸಬಹುದಾಗಿದೆ. ಅಲೆಮಾರಿತನ ಈ ಸಮುದಾಯದ ಮೂಲ ಗುಣವಾಗಿರುವುದನ್ನು ಗುರುತಿಸಬಹುದಾಗಿದೆ. ಮೂಲತಃ ಹಾಡುಗಾರರಾದ ಇವರು ತಮ್ಮ ಸಮುದಾಯದ ಪರಂಪರೆಯ ವಾದ್ಯವಾದ ಕಿನ್ನೂರಿಯನ್ನು ಹಿಡಿದು ಸಾಂಪ್ರದಾಯಿಕ ವೇಷಭೂಷಣಗಳನ್ನು ಧರಿಸಿಕೊಂಡು ಊರು-ಊರು ಸಂಚರಿಸಿ ಹಾಡುತ್ತಾ ಹೋಗುತ್ತಿರುವುದು ಕಂಡುಬರುತ್ತದೆ. ಸಮುದಾಯದಲ್ಲಿನ ಕೆಲವು ಕುಟುಂಬಗಳು ಇಂದಿಗೂ ಸಹ ಹಾಡುಗಾರಿಕೆ ವೃತ್ತಿಯ ಮೂಲಕ ಜೀವನ ನಿರ್ವಹಿಸುತ್ತಿರುವುದು ಕಂಡುಬರುತ್ತದೆ. ಸಮುದಾಯದಲ್ಲಿನ ಹಾಡುಗಾರರು ಎರಡು-ಮೂರು ವ್ಯಕ್ತಿಗಳು ಗುಂಪು ಗುಂಪಾಗಿ ಊರಾಡಲು ಹೋಗುತ್ತಾರೆ. ಇವರು ತಾವು ನೆಲೆಸಿರುವ ಸ್ಥಳೀಯ ಪ್ರದೇಶದ ಸುತ್ತಮುತ್ತಲಿನ ಊರುಗಳಿಗೆ ಅದರಲ್ಲೂ ವಿಶೇಷವಾಗಿ ನಾಗರಪಂಚಮಿ ಹಬ್ಬ, ಗೌರಸಮುದ್ರದ ಮಾರಮ್ಮ ಹಬ್ಬ, ದಸರಾ ಹಬ್ಬ, ದೀಪಾವಳಿ, ಕಾರ್ತೀಕ ಮಾಸ, ಸಂಕ್ರಾಂತಿ (ಸುಗ್ಗಿಯ ಹಬ್ಬ), ಶಿವರಾತ್ರಿ ಹಬ್ಬ, ಯುಗಾದಿ ಹಬ್ಬ ಈ ಹಬ್ಬಗಳಲ್ಲಿ ವಿಶೇಷವಾಗಿ ಊರಾಡಲು ಹೋಗುತ್ತಿರುವುದು ಕಂಡುಬರುತ್ತದೆ. ಮೂಲತಃ ವೃತ್ತಿಗಾಯಕರಾದ ಇವರು ಸ್ಥಳೀಯ ದೈವಗಳನ್ನು ಕುರಿತು ಹರಕೆಯ ಹಾಡುಗಳನ್ನು ಮೇಲಿನ ಸಂದರ್ಭಗಳಲ್ಲಿ ಹಾಡುವುದು ಕಂಡುಬರುತ್ತದೆ.

ಹಬ್ಬದ ಸಂದರ್ಭದಲ್ಲಿ ಕಡ್ಡಾಯವಾಗಿ ಹಾಡಲು ಬೇರೆ ಬೇರೆ ಊರುಗಳಿಗೆ ಹೋಗುವ ಪದ್ಧತಿಯನ್ನು ಇಂದಿಗೂ ಸಹ ಕೆಲವು ಭಾಗಗಳಲ್ಲಿ ಗುರುತಿಸಬಹುದಾಗಿದೆ. ಹಬ್ಬದ ಸಂದರ್ಭದಲ್ಲಿ ಇತರೇ ಸಮುದಾಯಗಳಿಗೆ ಸೇರಿದ ಪ್ರತಿಯೊಬ್ಬರ ಮನೆಗಳಿಗೆ ಭೇಟಿ ನೀಡುವುದು. ಆ ಸಮಯದಲ್ಲಿ ವಿವಿಧ ಬಗೆಯ ಹಾಡುಗಳನ್ನು ಹಾಡುವುದು ಆ ಮೂಲಕ ಮನೆಯವರಿಂದ ಅಲ್ಪ ಮೊತ್ತದ ಹಣ, ಮುಖ್ಯವಾಗಿ ದವಸ-ಧಾನ್ಯಗಳನ್ನು ಉಡುಗೊರೆಯಾಗಿ ಪಡೆಯುವುದು (ರಾಗಿ, ಜೋಳ, ಅಕ್ಕಿ ಬೇಳೆ, ಉರುಳಿ ಮುಂತಾದವು). ಅದರಲ್ಲೂ ಮುಖ್ಯವಾಗಿ ದೀಪಾವಳಿ ಮತ್ತು ಸಂಕ್ರಾಂತಿಯು ರೈತರಿಗೆ ಸುಗ್ಗಿಯ ಸಂದರ್ಭವಾಗಿರುವುದರಿಂದ ಈ ಸಮಯದಲ್ಲಿ ಇವರು ಹಾಡುಗಳನ್ನು ಹಾಡುತ್ತಾ ಪ್ರತಿ ಮನೆ ಹಾಗೂ ಕಣಗಳಿಗೆ ತೆರಳಿ ದವಸ ಧಾನ್ಯಗಳನ್ನು ಉಡುಗೊರೆಯಾಗಿ ಪಡೆಯುತ್ತಿರುವುದನ್ನು ಗುರುತಿಸಬಹುದಾಗಿದೆ.

ಸುಗ್ಗಿಯ ಸಂದರ್ಭದಲ್ಲಿ ಜೋಗಿಯ ಇಡೀ ಕುಟುಂಬವೇ ಸಂಚಾರದಲ್ಲಿ ಇರುವುದು ಕಂಡುಬರುತ್ತದೆ. ಜೋಗಿಗೆ ಸಂಚಾರದ ಸಂದರ್ಭದಲ್ಲಿ ಊರಿನ ಹೊರಭಾಗದಲ್ಲಿರುವ ದೇವಾಲಯ, ಮಂಟಪಗಳು, ಶಾಲಾ ಕಟ್ಟಡಗಳೇ ವಸತಿಗಳಾಗಿರುವುದು ಕಂಡುಬರುತ್ತದೆ. ಕೇವಲ ಸಮುದಾಯದ ಪುರುಷ ವ್ಯಕ್ತಿಗಳು ಸಂಚಾರದಲ್ಲಿದ್ದಾಗ ಮೇಲಿನ ನೆಲೆಗಳನ್ನು ಆಶ್ರಯಿಸುತ್ತಾರೆ. ಕೆಲವೊಮ್ಮೆ ಸಕಲ ಪರಿವಾರದೊಂದಿಗೆ ಸಂಚಾರ ಹೋಗುವುದೂ ಸಹ ಕಂಡು ಬರುತ್ತದೆ. ಜೋಗಿಗಳು ತಾವು ನೆಲೆಸಿದ ನೆಲೆಯಲ್ಲಿ ಬರಗಾಲವಿದ್ದ ಸಮಯದಲ್ಲಿ ಇಡೀ ಕುಟುಂಬವೇ ಬೇರೊಂದು ಊರಿಗೆ ಸಂಚಾರ ಹೊರಡಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ಸಮುದಾಯದಲ್ಲಿನ ಅನೇಕ ಕುಟುಂಬಗಳು ಸೇರಿಕೊಂಡು ಒಂದು ಗುಂಪಿನಲ್ಲಿ ಮಳೆ ಬೆಳೆ ಹಾಗೂ ಹುಲ್ಲುಗಾವಲು ಹೆಚ್ಚಿರುವ ಪ್ರದೇಶಗಳಿಗೆ ಸಂಚಾರ ಹೊರಡುತ್ತಾರೆ. ಈ ಸಂದರ್ಭದಲ್ಲಿ ಕುಟುಂಬದಲ್ಲಿನ ಮಕ್ಕಳು, ಹಿರಿಯರು ಜೊತೆಗೆ ತಮ್ಮ ಸಾಕುಪ್ರಾಣಿಗಳಾದ ದನ-ಕರುಗಳು, ಕುರಿ-ಮೇಕೆಗಳು, ಕುದುರೆ-ಕೋಳಿಗಳು ಎಲ್ಲಾ ಪ್ರಾಣಿಗಳೊಡಗೂಡಿ ಸಂಚಾರ ಹೋಗುವುದು ಕಂಡುಬರುತ್ತದೆ. ಕುಟುಂಬದಲ್ಲಿನ ಹಿರಿಯ ಪುರುಷರು ಹಾಡುಗಾರಿಕೆಯ ಮೂಲಕ ಮನೆ ಮನೆಗೆ ತೆರಳಿ ದವಸ ಧಾನ್ಯಗಳನ್ನು ಸಂಗ್ರಹಿಸಿಕೊಂಡು ಬರುವುದು, ಕುಟುಂಬದಲ್ಲಿನ ಇತರೇ ಸದಸ್ಯರು ಸಾಕು ಪ್ರಾಣಿಗಳನ್ನು ಮೇಯಿಸುವ ಕೆಲಸಗಳಲ್ಲಿ ನಿರತವಾಗಿರುವುದು ಕಂಡುಬರುತ್ತದೆ.

**ವಸತಿ ವ್ಯವಸ್ಥೆ**

ಸಮುದಾಯದಲ್ಲಿ ಇಡೀ ಕುಟುಂಬ ಸಂಚಾರದಲ್ಲಿದ್ದಂತಹ ಸಂದರ್ಭದಲ್ಲಿ ತಾತ್ಕಾಲಿಕ ವಸತಿಗಳನ್ನು ನಿರ್ಮಿಸಿಕೊಂಡು ಜೀವನ ಸಾಗಿಸುತ್ತಿರುವುದು ಕಂಡುಬರುತ್ತದೆ. ಅಂತಹ ತಾತ್ಕಾಲಿಕ ವಸತಿ ನೆಲೆಗಳಿಗೆ ಡೇರೆಗಳು (ಟೆಂಟ್‌ಗಳು-ಶೆಡ್‌ಗಳು) ಎಂದು ಕರೆಯುತ್ತಾರೆ.

ಊರ ಹೊರಭಾಗದ ವಿಶಾಲ ಮೈದಾನದಲ್ಲಿ ಇವರು ತಾತ್ಕಾಲಿಕ ವಸತಿ ನೆಲೆಗಳನ್ನು ನಿರ್ಮಿಸುತ್ತಾರೆ. ಸಮುದಾಯದಲ್ಲಿನ ಹಿರಿಯ ಮಹಿಳೆಯರು ಹಳೆಯ ಸೀರೆಗಳಿಂದ ಕೌದಿಗಳನ್ನು

ನಿರ್ಮಿಸಿರುತ್ತಾರೆ. ಸ್ಥಳೀಯ ಪರಿಸರದಲ್ಲಿ ದೊರೆಯುವ ಕಟ್ಟಿಗೆ ಅಥವಾ ಬಿದಿರಿನಿಂದ ಕಮಾನುಗಳ ಆಕಾರದಲ್ಲಿ ಗುಡಿಸಲು ನಿರ್ಮಿಸಿ, ಅವುಗಳಿಗೆ ಕೌದಿಗಳಿಂದ ರಕ್ಷಣೆ ಒದಗಿಸಲಾಗುತ್ತದೆ. ಜೊತೆಗೆ ವಯರ್ ಹಗ್ಗದಿಂದ ಕುರಿ ಮೇಕೆಗಳಿಗೆ ಬಲೆಗಳನ್ನು ನಿರ್ಮಿಸಿ ಅವುಗಳಿಗೆ ತಾತ್ಕಾಲಿಕ ವಸತಿಗಳನ್ನು (ಹಟ್ಟಿಗಳು) ಮಾಡುವುದು ಕಂಡುಬರುತ್ತದೆ.

ಹಂಡಿಜೋಗಿಗಳು ಹೆಚ್ಚು ಈಚಲ ಮರಗಳು ಅಧಿಕವಾಗಿರುವ ಹಳ್ಳ-ತೊರೆಗಳ ಪಕ್ಕದಲ್ಲಿ ಬೀಡು ಬಿಟ್ಟಿರುತ್ತಾರೆ. ಏಕೆಂದರೆ ಶೇಂದಿ ಪ್ರಿಯರಾದ ಇವರು ಈಚಲು ಮರದಿಂದ ಸೇಂದಿ ದೊರಕುತ್ತದೆ. ಜೊತೆಗೆ ಸಮುದಾಯದಲ್ಲಿನ ಕೆಲ ಹಿರಿಯ ಪುರುಷ ಹಾಗೂ ಮಹಿಳೆಯರು ಈಚಲು ಮರದ ಗರಿಗಳಿಂದ ಅನೇಕ ವಸ್ತುಗಳನ್ನು ತಯಾರಿಸುತ್ತಾರೆ. ಅವುಗಳೆಂದರೆ,

ಈಚಲು ಚಾಪೆ ಹೆಣೆಯುವುದು

ಈಚಲು ಪೊರಕೆ ನಿರ್ಮಿಸುವುದು

ಬುಟ್ಟಿ ಹೆಣೆಯುವುದು

ತೂಗು ನಿಲುವು ತಯಾರಿಸುವುದು

ಹೀಗೆ ಈಚಲು ಮರದಿಂದ ಅನೇಕ ವಸ್ತುಗಳನ್ನು ಸಮುದಾಯದ ಪುರುಷ ಹಾಗೂ ಮಹಿಳೆಯರು ತಯಾರಿಸುತ್ತಿರುವುದು ಕಂಡುಬರುತ್ತದೆ. ಮೇಲಿನ ವಸ್ತುಗಳನ್ನು ನಿರ್ಮಿಸಿ ಸ್ಥಳೀಯ ಪ್ರದೇಶ ಹಾಗೂ ಪಟ್ಟಣಗಳಿಗೆ ತೆರಳಿ ಮಾರಾಟ ಮಾಡುವುದು ಕಂಡುಬರುತ್ತದೆ.

ಹಂಡಿಜೋಗಿಗಳು ಮೂಲತಃ ಹಾಡುಗಾರರಾದರೂ ಇಂದು ಅನೇಕ ಸ್ಥಳೀಯ ವೃತ್ತಿಗಳನ್ನು ಮಾಡುತ್ತಿರುವುದು ಕಂಡುಬರುತ್ತದೆ. ಇವರು ಆಯ್ದುಕೊಂಡಿರುವ ಬಹುತೇಕ ವೃತ್ತಿಗಳು ಅಲೆಮಾರಿ ವೃತ್ತಿಗಳಾಗಿರುವುದನ್ನು ಗುರುತಿಸಬಹುದಾಗಿದೆ. ಸ್ಥಳೀಯ ಪರಿಸರದಲ್ಲಿ ನಡೆಯುವ ಹಬ್ಬಗಳ ಸಂದರ್ಭದಲ್ಲಿ ಮನೆ ಮನೆಗೆ ತೆರಳಿ ಪಾಂಡವರ ಕತೆ, ಗಂಗೆ ಗೌರಿಯ ಕತೆ, ಶಿವ ಪಾರ್ವತಿಯ ಕತೆ, ಅರ್ಜುನ ಜೋಗಿಯ ಕತೆಗಳನ್ನು ಹಾಡುವುದು ಕಂಡುಬರುತ್ತದೆ. ಇವರ ಹಾಡುಗಳು ಮೇಲಿನ ವಿಷಯಗಳಿಗೆ ಸಂಬಂಧಿಸಿದ ಕಥಾವಸ್ತುವನ್ನು ಒಳಗೊಂಡಿದ್ದರೂ ಅದರ ಮೂಲಕ ಅನೇಕ ಸಾಮಾಜಿಕ ಅಂಶಗಳನ್ನು ಕುರಿತು ವಿವರಿಸುವುದನ್ನು ಗುರುತಿಸಬಹುದಾಗಿದೆ.

ನೀತಿ ಪ್ರತಿಪಾದನೆ

ದಾನದ ಶ್ರೇಷ್ಠತೆ

ಸತ್ಯ ಮತ್ತು ಪ್ರಾಮಾಣಿಕತೆ

ಶೀಲವಂತಿಕೆ (ಉತ್ತಮ ಗುಣ ಚರಿತ್ರೆ)

ಕರುಣೆ, ಮಮತೆ

ಪರಸ್ಪರ ಸಹಕಾರ ಮುಂತಾದ ಸಾಮಾಜಿಕ ಗುಣಗಳನ್ನು ಪ್ರತಿಪಾದಿಸುವುದು ಇವರ

ಹಾಡುಗಳ ಪರಮ ಉದ್ದೇಶವಾಗಿರುತ್ತದೆ. ಇದರ ಜೊತೆಗೆ, ಅನ್ಯಾಯ, ಅನೀತಿ, ಅಧರ್ಮ, ಭ್ರಷ್ಟತನ, ದ್ವೇ.ಷ ಭೇದ ನೀತಿ, ಕುಟಿಲತೆ, ಅನೈತಿಕತೆ ಮುಂತಾದ ದುರ್ಗುಣಗಳಿಂದ ಒದಗುವ ದುಸ್ಥಿತಿಯನ್ನು ಕುರಿತು ವಿವರಿಸುತ್ತಿರುವುದು ಕಂಡುಬರುತ್ತದೆ. ಮಹಾಭಾರತದ ಕತೆಯಲ್ಲಿನ ಕಥಾವಸ್ತುವಿನಲ್ಲಿ ಕೌರವರ ಕತೆಯನ್ನು ಹಾಡುವಾಗ ಈ ಮೇಲಿನ ದುರ್ನಡತೆಗಳ ನಿರೂಪಣೆ ಕಂಡುಬರುತ್ತದೆ. ಪಾಂಡವರ ಕತೆಯಲ್ಲಿ ನೀತಿ, ನ್ಯಾಯ, ಧರ್ಮಪರಿಪಾಲನೆ ಮುಂತಾದ ಉದಾತ್ತ ಗುಣಗಳ ನಿರೂಪಣೆ ಒಳಗೊಂಡಿರುವುದು ಕಂಡುಬರುತ್ತದೆ. ಇವುಗಳ ಜೊತೆಗೆ ಸಾಮಾಜಿಕತೆಗೆ ಸಂಬಂಧಿಸಿದಂತೆ ವ್ಯವಸ್ಥೆಯ (ರಾಜಕೀಯ) ವಿಡಂಬನೆ, ಹಾಸ್ಯ ಇವರ ಹಾಡುಗಳಲ್ಲಿ ಕಂಡುಬರುತ್ತದೆ. ತಮ್ಮ ಹಾಡುಗಳ ಮುಖಾಂತರ ವ್ಯವಸ್ಥೆಯನ್ನು ತಿದ್ದುವಂತಹ ಅಲ್ಪಮಟ್ಟದ ಕೆಲಸದಲ್ಲಿ ಇವರು ನಿರತರಾಗಿರುವುದನ್ನು ಗುರುತಿಸಬಹುದಾಗಿದೆ. ಸ್ಥಳೀಯ ಪ್ರದೇಶದಲ್ಲಿ ಇವರು ಹೊಗಳಿಕೆಯ ಹಾಡುಗಳಿಗಾಗಿ ಹೆಚ್ಚು ಪ್ರಸಿದ್ಧರಾಗಿರುವುದು ಕಂಡುಬರುತ್ತದೆ. ಮುಖ್ಯವಾಗಿ ವ್ಯಕ್ತಿ ಹಾಗೂ ಮನೆತನದ ಕುರಿತಾಗಿ ಹೊಗಳಿಕೆಯ ಪದಗಳು ಇರುತ್ತವೆ.

ದೈವಕ್ಕೆ ಸಂಬಂಧಿಸಿದಂತೆ ದೈವವನ್ನು ಕುರಿತು ಹರಕೆಯ ಹಾಡುಗಳು ಪ್ರಸಿದ್ಧವಾಗಿರುವುದನ್ನು ಗುರುತಿಸಬಹುದಾಗಿದೆ. ಹಂಡಿಜೋಗಿ ಸಮುದಾಯದಲ್ಲಿ ಪ್ರತಿಯೊಂದು ಕುಟುಂಬಗಳು ಮೂಲವೃತ್ತಿಯ ಜೊತೆಗೆ ಒಂದೊಂದು ಉಪವೃತ್ತಿಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಸಮುದಾಯದ ಮೂಲವೃತ್ತಿಯಾದ ಹಾಡುಗಾರಿಕೆ (ಊರಾಡುವುದು) ವೃತ್ತಿ ಇಂದು ಸಮುದಾಯದಲ್ಲಿ ಕೇವಲ ಪಾರಂಪರಿಕ ಆಚರಣೆಯ ಭಾಗವಾಗಿ ಮಾತ್ರ ಉಳಿದುಕೊಂಡಿರುವುದು ಕಂಡುಬರುತ್ತದೆ. ಕರ್ನಾಟಕಕ್ಕೆ ಇವರು ವಲಸಿಗರಾದರೂ ಕೆಲವು ಭಾಗದಲ್ಲಿ ಕೃಷಿ ಭೂಮಿಯನ್ನು ಹೊಂದಿ ಕೆಲವು ಕುಟುಂಬಗಳು ರೇಷ್ಮೆ ಕೃಷಿಯಂತಹ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿರುವುದು ಕಂಡುಬರುತ್ತದೆ. ಕೃಷಿ ವೃತ್ತಿಯಲ್ಲಿ ತೊಡಗಿರುವವರ ಸಂಖ್ಯೆ ವಿರಳವಾಗಿದ್ದು, ಇತರೇ ವೃತ್ತಿಗಳಲ್ಲಿ (ಬಡಗಿತನ, ಗಾರೆ ಕೆಲಸ, ಮೀನುಗಾರಿಕೆ, ಸಿದ್ಧವಸ್ತುಗಳ-ಮಾರಾಟ (ವ್ಯಾಪಾರ) ತೊಡಗಿರುವವರ ಸಂಖ್ಯೆ ಸಮುದಾಯದಲ್ಲಿ ಅಧಿಕವಾಗಿರುವುದು ಕಂಡುಬರುತ್ತದೆ.

### ೩.೫. ಸಮುದಾಯದ ಉಪ-ಕುಲ-ಕಸುಬುಗಳು (ಉಪ ವೃತ್ತಿಗಳು)

ಹಂಡಿಜೋಗಿಗಳು ಸಮುದಾಯದಲ್ಲಿ ಅನೇಕ ಉಪವೃತ್ತಿಗಳಲ್ಲಿ ತೊಡಗಿರುವುದನ್ನು ಗುರುತಿಸಬಹುದಾಗಿದೆ. ಸಮುದಾಯದ ಮೂಲ ವೃತ್ತಿಯಾದ ಹಾಡುಗಾರಿಕೆಯಿಂದ ಜೀವನ ನಿರ್ವಹಣೆ ಕಷ್ಟಸಾಧ್ಯವಾದ್ದರಿಂದ ಇಂದು ಸಮುದಾಯದ ವ್ಯಕ್ತಿಗಳು ವಿವಿಧ ವೃತ್ತಿಗಳಿಗೆ ಪಲ್ಲಟ ಗೊಂಡಿರುವುದು ಕಂಡುಬರುತ್ತದೆ. ಸಮುದಾಯದ ಮೂಲವೃತ್ತಿಯಾದ ಹಾಡುಗಾರಿಕೆ ಇಂದು ಕೇವಲ ತಮ್ಮ ಸಾಂಪ್ರದಾಯಿಕ ಪಾರಂಪರಿಕ ಆಚರಣೆಯ ಭಾಗವಾಗಿ ಮಾತ್ರ ಉಳಿದುಕೊಂಡಿರುವುದನ್ನು ಗುರುತಿಸಬಹುದಾಗಿದೆ. ಹಂಡಿಜೋಗಿಗಳ ಕೆಲವು ನೆಲೆಗಳಲ್ಲಿ ಶಾಶ್ವತ ಕೃಷಿ ಭೂಮಿಯನ್ನು ಹೊಂದಿ ಕೃಷಿ ಚಟುವಟಿಕೆಗಳಲ್ಲಿ ತೊಡಗಿರುವುದನ್ನು ಗುರುತಿಸಬಹುದಾಗಿದೆ. ಕೃಷಿ ಚಟುವಟಿಕೆಯ ಮೂಲಕ ಅನೇಕ ವಿಧದ ಬೆಳೆಗಳನ್ನು ಬೆಳೆಯುತ್ತಿರುವುದನ್ನು ನೋಡಬಹುದಾಗಿದೆ.

ಕೃಷಿಯಿಂದ ಅನೇಕ ವಿಧದ ಆಹಾರ ಬೆಳೆಗಳು ಮತ್ತು ವಾಣಿಜ್ಯ ಬೆಳೆಗಳನ್ನು ಬೆಳೆಯುವುದರೊಂದಿಗೆ ತೋಟಗಾರಿಕೆ ಕೃಷಿಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಇವರು ರಾಗಿ, ಭತ್ತ, ನವಣೆ, ಜೋಳ, ತೊಗರಿ ಮುಂತಾದ ಆಹಾರ ಬೆಳೆಗಳು ಮತ್ತು ಹತ್ತಿ, ಶೇಂಗಾ, ಮೆಕ್ಕೆಜೋಳ, ಈರುಳ್ಳಿ ಮುಂತಾದ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ. ಇದರ ಜೊತೆಗೆ ನೀರಾವರಿ ಆಶ್ರಿತವಾಗಿ ರೇಷ್ಮೆ ಕೃಷಿ ಮಾಡುವುದು ಕಂಡುಬರುತ್ತದೆ. ಕೂಡ್ಲಿಗಿ ಪರಿಸರದ ಬಿಷ್ಣಹಳ್ಳಿ ಗ್ರಾಮದಲ್ಲಿ ನೆಲೆಸಿರುವ ಬಹುತೇಕ ಕುಟುಂಬಗಳು ರೇಷ್ಮೆ ಕೃಷಿ ಮಾಡುವುದನ್ನು ಗುರುತಿಸಬಹುದಾಗಿದೆ. ಕೃಷಿ ಚಟುವಟಿಕೆಗಳಲ್ಲಿ ಸಮುದಾಯದ ಪುರುಷ ಮತ್ತು ಮಹಿಳೆಯರು ನಿರತರಾಗಿರುವುದು ಕಂಡುಬರುತ್ತದೆ. ಸಮುದಾಯದ ಪ್ರತಿಯೊಂದು ಕುಟುಂಬವೂ ಸಹ ಕೃಷಿ ಚಟುವಟಿಕೆಗೆ ಸಹಕಾರಿಯಾಗಿ ಕುರಿಸಾಕಾಣಿಕೆ, ಪಶುಪಾಲನೆ (ದನ ಕರುಗಳ ಪಾಲನೆ) ಮಾಡುತ್ತಿರುವುದನ್ನು ಗುರುತಿಸಬಹುದಾಗಿದೆ. ಹೈನುಗಾರಿಕೆ ಸಮುದಾಯದಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಅನೇಕ ಕುಟುಂಬಗಳು ಇಂದು ಹೈನುಗಾರಿಕೆಯಿಂದಲೇ ಜೀವನ ನಿರ್ವಹಣೆ ಮಾಡುವುದು ಕಂಡುಬರುತ್ತದೆ. ಸಮುದಾಯದಲ್ಲಿ ಜವಾರಿ ಹಸಗಳು ಮತ್ತು ವಿವಿಧ ತಳಿಗಳ ಹಸುಗಳನ್ನು ಸಾಕುತ್ತಿದ್ದಾರೆ. ಇವುಗಳಿಂದ ಹೈನುಗಾರಿಕೆಗೆ ತುಂಬಾ ಸಹಕಾರಿಯಾಗುತ್ತದೆ. ಸಮುದಾಯದಲ್ಲಿ ಶಾಶ್ವತ ಭೂಮಿಯನ್ನು ಹೊಂದಿರುವ ಕುಟುಂಬಗಳು ಕೃಷಿ, ಹೈನುಗಾರಿಕೆ, ರೇಷ್ಮೆ ಕೃಷಿ, ತೋಟಗಾರಿಕೆ (ತೆಂಗು, ಎಲೆ, ಬಾಳೆ ತೋಟಗಳು), ಪಶುಪಾಲನೆ, ಕುರಿಸಾಕಾಣಿಕೆ ಮುಂತಾದ ವೃತ್ತಿಗಳಲ್ಲಿ ತೊಡಗಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ ಈ ಮೇಲಿನ ವೃತ್ತಿಗಳಲ್ಲಿ ತೊಡಗಿರುವರ ಸಂಖ್ಯೆ ತುಂಬಾ ವಿರಳವಾಗಿರುವುದನ್ನು ಗುರುತಿಸಬಹುದಾಗಿದೆ. ಇನ್ನುಳಿದ ಸಮುದಾಯದ ಬಹುತೇಕ ಕುಟುಂಬಗಳು ವಿವಿಧ ಅಲೆಮಾರಿ ವೃತ್ತಿಗಳಲ್ಲಿ ತೊಡಗಿರುವುದನ್ನು ನೋಡಬಹುದಾಗಿದೆ. ಸಮುದಾಯದಲ್ಲಿ ಮದುರ್‌ಕೋರ್ ಉಪ ಪಂಗಡಕ್ಕೆ ಸೇರಿದವರಲ್ಲಿ ಹೆಚ್ಚಿನವರು ಕಬ್ಬಿಣದ ಕೆಲಸದಲ್ಲಿ ನಿರತರಾಗಿರುವುದು ಕಂಡುಬರುತ್ತದೆ. ಉಳಿದಂತೆ ಕೋಥವಾಲ್ ಪಂಗಡದವರು ಕೆಲವು ನೆಲೆಗಳಲ್ಲಿ ಕಬ್ಬಿಣದ ಕೆಲಸ ಮಾಡುವುದು ಕಂಡುಬರುತ್ತದೆ. ಕಬ್ಬಿಣದ ಕೆಲಸ ಅಂದರೆ ಉದ್ದಿಮೆಯೇನಲ್ಲ, ಕೆಲವು ಗೃಹೋಪಯೋಗಿ ವಸ್ತುಗಳನ್ನು ನಿರ್ಮಿಸಿಕೊಡುವುದು ಮತ್ತು ಗೃಹೋಪಯೋಗಿ ವಸ್ತುಗಳ ರಿಪೇರಿ ಮಾಡುವುದು ಎಂದರ್ಥ. ಕೂಡ್ಲಿಗಿ ಪರಿಸರದಲ್ಲಿನ ಕಬ್ಬಿಣದ ಕೆಲಸ ಮಾಡುವ ವೃತ್ತಿಯಲ್ಲಿ ನಿರತನಾಗಿರುವ ಹಂಡಿಜೋಗಿ ನಾಗೇಶ್‌ರವರು ನೀಡಿದ ಮಾಹಿತಿಯನ್ನು ಇಲ್ಲಿ ವಿವರಿಸಲಾಗಿದೆ. ಕಬ್ಬಿಣದ ಕೆಲಸ ಮಾಡುವವರು ಕೆಲವು ಗೃಹೋಪಯೋಗಿ ವಸ್ತುಗಳನ್ನು ಕಬ್ಬಿಣದ ಜಂಕ್‌ಶೀಟ್ ತಗಡಿನಿಂದ ಸಿದ್ದಪಡಿಸಿ ಅವುಗಳ ಮಾರಾಟ ಮಾಡುವುದು ಕಂಡುಬರುತ್ತದೆ. ತಮ್ಮ ವೃತ್ತಿಪರಿಕರಗಳ ಸಹಾಯದಿಂದ ಆ ವಸ್ತುಗಳನ್ನು ಸಿದ್ದಪಡಿಸುವುದನ್ನು ನೋಡಬಹುದಾಗಿದೆ. ಅಂತಹ ಆಧುನಿಕ ವೃತ್ತಿ ಉಪಕರಣಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

ಅಡಿಗಲ್ಲು, ಕಬ್ಬಿಣದ ಕತ್ತರಿ, ಚಾಪಟ್ಟಿ, ಅಕ್ಸಲ್‌ಬ್ಲೇಡ್, ಕಟಿಂಗ್ ಪ್ಲೇಯರ್, ಕಟ್ಟರ್, ಕಬ್ಬಿಣದ ಸುತ್ತಿಗೆ, ಸ್ಕ್ರೂಡ್ರೈವ್, ಸ್ಪಾನರ್, ಅರ, ಇಕ್ಕಳ ಮುಂತಾದ ಕಬ್ಬಿಣದ ಉಪಕರಣಗಳನ್ನು ಬಳಸಿಕೊಂಡು ದಿನ ಬಳಕೆಯ ವಸ್ತುಗಳ ರಿಪೇರಿ ಮತ್ತು ತಯಾರಿಸುವುದನ್ನು ಗುರುತಿಸಬಹುದಾಗಿದೆ. ಕಬ್ಬಿಣದ

ಕೆಲಸದಲ್ಲಿ ಈ ಕೆಳಗಿನ ಗೃಹೋಪಯೋಗಿ ವಸ್ತುಗಳನ್ನು ಸಿದ್ದಪಡಿಸಿ ಅವುಗಳ ಮಾರಾಟ ಮಾಡುವುದನ್ನು ಗುರುತಿಸಬಹುದಾಗಿದೆ. ಪ್ರಮುಖವಾಗಿ ಆಹಾರ ಧಾನ್ಯಗಳನ್ನು ಅಳತೆ ಮಾಡಲು ಕಬ್ಬಿಣದ ಜಂಕ್‌ಶೀಟ್ ತಗಡಿನಿಂದ ಅಳತೆ ಮಾಪನಗಳನ್ನು ತಯಾರಿಸುತ್ತಾರೆ. ಅವುಗಳೆಂದರೆ ಸೇರು, ಪಾವು, ಅಚ್ಚೇರು, ಮೂರು ಪಾವು ಎಂದು ಅಳತೆಗೆ ತಕ್ಕಂತೆ ನಾಲ್ಕು ಮಾದರಿಯ ಸೇರುಗಳನ್ನು ನಿರ್ಮಿಸಿಕೊಡುವುದು ಕಂಡುಬರುತ್ತದೆ. ಇವುಗಳ ಜೊತೆಗೆ ಶೇಂಗಾ ಅಳತೆ ಮಾಡಲು ಶೇಂಗಾ ಡಬ್ಬಗಳನ್ನು ನಿರ್ಮಿಸಿಕೊಡುತ್ತಾರೆ. ಜೊತೆಗೆ ಇವರು ಆಹಾರ ಧಾನ್ಯಗಳನ್ನು ಕಲ್ಲು ಮತ್ತು ಮಣ್ಣಿನಿಂದ ಸ್ವಚ್ಛಗೊಳಿಸಲು ವಿವಿಧ ಮಾದರಿಯ ಜರಡಿಗಳನ್ನು ತಯಾರಿಸಿ ಮಾರಾಟ ಮಾಡುವುದು ಕಂಡುಬರುತ್ತದೆ. ಆಹಾರ ಧಾನ್ಯಗಳ ಆಕರ (ಗಾತ್ರ)ಕ್ಕನುಗುಣವಾಗಿ ವಿವಿಧ ಮಾದರಿಯಲ್ಲಿ ಜರಡಿಗಳನ್ನು ತಯಾರಿಸುತ್ತಾರೆ. ಅವುಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

ಜರಡಿಗಳು (ದವಸ ಧಾನ್ಯಗಳನ್ನು ಸ್ವಚ್ಛಗೊಳಿಸಲು ಬಳಸುವ ಪರಿಕರಗಳು)

ಅಕ್ಕಿ ಜರಡಿ

ರಾಗಿ ಜರಡಿ

ನವಣೆ ಜರಡಿ

ತೊಗರಿ ಜರಡಿ

ಶೇಂಗಾ ಜರಡಿ

ಜೋಳದ ಜರಡಿ

ಎಂದು ಮುಂತಾದ ವಸ್ತುಗಳನ್ನು ತಯಾರಿಸಿ ಮಾರಾಟ ಮಾಡುವುದನ್ನು ಸ್ಥಳೀಯ ಪರಿಸರದಲ್ಲಿ ನೋಡಬಹುದಾಗಿದೆ. ಜೊತೆಗೆ ಆಹಾರ ಪದಾರ್ಥಗಳನ್ನು ತಯಾರಿಸಲು ಕೆಲವು ಪರಿಕರಗಳನ್ನು ತಯಾರಿಸಿ ಕೊಡುವುದು ಕಂಡುಬರುತ್ತದೆ. ಅಂತಹ ಪರಿಕರಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ. ವಿವಿಧ ಸಿಹಿ ಮತ್ತು ಖಾರದ ತಿನಿಸುಗಳನ್ನು ತಯಾರಿಸಲು ಕಾರದ ಸೆಟ್ಟ (ಕಾರದ ಮಣಿ), ಬೂಂದಿ ಸೆಟ್ಟ (ಬೂಂದಿ ಮಣಿ), ಧಾಣಿ ಸೆಟ್ಟ (ಧಾಣಿ ಮಣಿ), ಜಾಲ್ರಾ (ಜರಡಿ) ಮುಂತಾದ ಪರಿಕರಗಳನ್ನು ಇವರು ತಯಾರಿಸಿಕೊಡುವುದು ಕಂಡುಬರುತ್ತದೆ. ಇವುಗಳ ಜೊತೆಗೆ ಇನ್ನೂ ಕೆಲವು ಗೃಹೋಪಯೋಗಿ ವಸ್ತುಗಳನ್ನು ತಯಾರಿಸುವುದನ್ನು ಗುರುತಿಸಬಹುದಾಗಿದೆ. ಗೃಹಬಳಕೆಯ ವಸ್ತುಗಳಾದ (ಅಡಿಗೆ ಪರಿಕರ) ಏಳಿಗೆ ಮಣೆ, ಕೆರೆಬಿಲ್ಲೆ, ಊದುಕೊಳವೆ ಮತ್ತು ಆಹಾರ ಧಾನ್ಯಗಳನ್ನು ಸಂಗ್ರಹಿಸಿಟ್ಟುಕೊಳ್ಳಲು ಡಬ್ಬಗಳನ್ನು ತಯಾರಿಸಿಕೊಡುತ್ತಾರೆ. ನಂತರ ನರ್ಸರಿಗಳಲ್ಲಿನ ಚಿಕ್ಕ ಸಸ್ಯಗಳಿಗೆ ನೀರು ಸಿಂಪಡಿಸಲು ಸಣ್ಣ ಗಾತ್ರದ ಕ್ಯಾನ್ ಮಾದರಿಯ ನೀರಿನ ಬಕೆಟ್‌ಗಳನ್ನು ನಿರ್ಮಿಸಿಕೊಡುತ್ತಾರೆ. ಮನೆಯಲ್ಲಿ ಬಟ್ಟೆ ಮುಂತಾದ ವಸ್ತುಗಳನ್ನು ಸಂಗ್ರಹಿಸಿಟ್ಟುಕೊಳ್ಳಲು ಟ್ರಂಕ್ (ಪೆಟಾರ)ಗಳನ್ನು ನಿರ್ಮಿಸಿಕೊಂಡುತ್ತಾರೆ. ಮೇಲೆ ಹೆಸರಿಸಿದ ಇಷ್ಟು ವಸ್ತುಗಳನ್ನು ತಮ್ಮ ಕುಶಲ ಕಲೆಯಾದ ಕಬ್ಬಿಣದ ಕೆಲಸದ ಮುಖಾಂತರ ತಯಾರಿಸಿಕೊಡುವುದರೊಂದಿಗೆ ಕೆಲವು ಸಿದ್ಧ ವಸ್ತುಗಳ ರಿಪೇರಿ ಕೆಲಸಗಳನ್ನು ಸಹ ಮಾಡುವುದನ್ನು ಗುರುತಿಸಬಹುದಾಗಿದೆ. ಇವರು ಗೃಹೋಪಯೋಗಿ

(ಗೃಹಬಳಕೆ) ವಸ್ತುಗಳಾದ ಬೀಗ, ಕೊಡೆ, ಮಿಕ್ಸಿ, ಗ್ಯಾಸ್‌ಲೈಟ್, ಸೀಮೆ ಎಣ್ಣೆ ಸ್ಟೌವ್, ಸೂಟ್‌ಕೇಸ್, ಔಷಧಿ ಕ್ಯಾನ್ ಮುಂತಾದ ವಸ್ತುಗಳ ರಿಪೇರಿ ಕೆಲಸಗಳನ್ನು ಮಾಡುತ್ತಾರೆ. ಇವರು ಬೀಗ ರಿಪೇರಿ ಮಾಡುವುದಕ್ಕಾಗಿ ಹೆಚ್ಚು ಪ್ರಸಿದ್ಧರಾಗಿರುವುದು ಕಂಡುಬರುತ್ತದೆ. ಸ್ಥಳೀಯ ಪರಿಸರದಲ್ಲಿ ಮೇಲೆ ಹೆಸರಿಸಿದ ವಸ್ತುಗಳ ರಿಪೇರಿಗಾಗಿ ತುಂಬಾ ಹೆಸರಾಗಿರುವುದನ್ನು ಗುರುತಿಸಬಹುದಾಗಿದೆ. ಗೃಹಬಳಕೆಯ ವಸ್ತುವಾದ ಗಾಡ್ರೇಜ್ ಹಾಗೂ ಮನೆಯ ಲಾಕರ್ (ಬೀಗ)ಗಳನ್ನು ರಿಪೇರಿ ಮಾಡುವುದರ ಜೊತೆಗೆ ಹೊಸ ಕೀಲಿಗಳನ್ನು ನಿರ್ಮಿಸಿಕೊಡುವುದು ಕಂಡುಬರುತ್ತದೆ. ಮನೆಯ ಲಾಕರ್ ಅಥವಾ ಬೀಗಗಳು ಜೊತೆಗೆ ಕೆಲವು ವಾಹನಗಳ ಬೀಗ ರಿಪೇರಿಯನ್ನು ಸಹ ಮಾಡುವುದು ಕಂಡುಬರುತ್ತದೆ. ಅವುಗಳಲ್ಲಿ ಬೈಕ್, ಟ್ರಾಕ್ಟರ್, ಸೈಕಲ್, ಆಟೋಗಳ ಬೀಗಗಳ ರಿಪೇರಿ ಮಾಡುವುದರೊಂದಿಗೆ ಅವುಗಳಿಗೆ ಹೊಸ ಕೀಲಿಗಳನ್ನು ತಯಾರಿಸಿಕೊಡುತ್ತಾರೆ. ಮತ್ತೊಂದು ಗೃಹ ಬಳಕೆಯ ವಸ್ತುವಾದ ಕೊಡೆಯನ್ನು ರಿಪೇರಿ ಮಾಡಿಕೊಡುವುದು ಕಂಡುಬರುತ್ತದೆ. ಕೊಡೆಯ ಕಡ್ಡಿಗಳನ್ನು ಸರಿಪಡಿಸಿ ಸೂಜಿಯಿಂದ ಅದರ ಬಟ್ಟೆಯನ್ನು ಹೊಲೆದುಕೊಡುತ್ತಾರೆ. ನಂತರ ಗೃಹಬಳಕೆಯ ಮತ್ತೊಂದು ಮುಖ್ಯ ಪರಿಕರವಾದ ಸ್ಟೌವ್ ಮತ್ತು ಮಿಕ್ಸಿ ಇವುಗಳನ್ನು ರಿಪೇರಿ ಮಾಡಿಕೊಡುವುದು ಕಂಡುಬರುತ್ತದೆ. ಕೃಷಿ ಬೆಳೆಗಳಿಗೆ ಔಷಧಿ ಸಿಂಪಡಿಸಲು ಬಳಸುವ ಔಷಧಿ ಕ್ಯಾನ್‌ಗಳ ರಿಪೇರಿಯನ್ನು ಮಾಡುವುದು ಕಂಡುಬರುತ್ತದೆ.

ಹೀಗೆ ಸಮುದಾಯದಲ್ಲಿ ಕಬ್ಬಿಣದ ಕೆಲಸ ಮಾಡುವವರು ಸ್ಥಳೀಯ ಪ್ರದೇಶದಲ್ಲಿನ ಜನತೆಗೆ ವಿವಿಧ ಉಪಕರಣಗಳನ್ನು ತಯಾರಿಸಿಕೊಡುವುದರೊಂದಿಗೆ ಊರಿನಿಂದ ಊರಿಗೆ ಸಂಚರಿಸುತ್ತ ಅಲೆಮಾರಿ ಜೀವನ ಸಾಗಿಸುತ್ತಿರುವುದನ್ನು ಗುರುತಿಸಬಹುದಾಗಿದೆ.

ಹಂಡಿಜೋಗಿಗಳ ಕೆಲವು ನೆಲೆಗಳಲ್ಲಿ ಸಮುದಾಯದ ಹಿರಿಯ ಪುರುಷ ಮತ್ತು ಮಹಿಳೆಯರು ಹಳೆಯ ಬಟ್ಟೆಗಳಿಂದ (ಸೀರೆ-ಪಂಚೆ), ಕೌದಿಗಳು, ಜೋಳಿಗೆಗಳು ಮತ್ತು ಹಗ್ಗಗಳನ್ನು ತಯಾರಿಸುವುದು ಕಂಡುಬರುತ್ತದೆ. ಸಮುದಾಯದ ಕೆಲವು ಕುಟುಂಬಗಳಲ್ಲಿ ಮೊದಲನೇ ತಲೆಮಾರಿನ ಮಹಿಳೆಯರು ಬಟ್ಟೆಗಳಿಂದ ಕೌದಿಗಳನ್ನು ಹೊಲೆಯುವುದು ಕಂಡುಬರುತ್ತದೆ. ಸಮುದಾಯದಲ್ಲಿ ಕೌದಿಯನ್ನು ಹಾಸಲು ಮತ್ತು ಹೊದಿಯಲು, ಜೊತೆಗೆ ಡೇರೆಗಳನ್ನು ನಿರ್ಮಿಸಿಕೊಳ್ಳಲು ಬಳಸುತ್ತಿರುವುದು ಕಂಡುಬರುತ್ತದೆ.

ನಂತರ ಸಮುದಾಯದ ಪುರುಷರು ಕಲಾಪ್ರದರ್ಶನದ ಸಂದರ್ಭದಲ್ಲಿ ಪಡೆಯುವ ದವಸ-ಧಾನ್ಯಗಳನ್ನು ಸಂಗ್ರಹಿಸಿಟ್ಟುಕೊಳ್ಳಲು ವಿವಿಧ ಪದರುಗಳುಳ್ಳ ಜೋಳಿಗೆಗಳನ್ನು ಸಮುದಾಯದ ಮಹಿಳೆಯರೇ ಸಿದ್ಧಪಡಿಸಿಕೊಡುವುದು ಕಂಡುಬರುತ್ತದೆ. ಇದರ ಜೊತೆಗೆ ಸಮುದಾಯದ ಚಿಕ್ಕಮಕ್ಕಳನ್ನು ಮಲಗಿಸಲು ಕೌದಿಗಳಿಂದ ತೊಟ್ಟಿಲು ನಿರ್ಮಿಸಿಕೊಡುವುದು ಕಂಡುಬರುತ್ತದೆ. ಇದರ ಜೊತೆಗೆ ತಮ್ಮ ನೆಲೆಗಳಲ್ಲಿ ಸಾಕಿರುವ ಕುರಿ ಮೇಕೆ, ದನಕರುಗಳನ್ನು ಒಂದೆಡೆ ತಡೆದು ನಿಲ್ಲಿಸಲು ಹಗ್ಗದಿಂದ ಬಲೆಗಳನ್ನು ನಿರ್ಮಿಸುವುದು ಕಂಡುಬರುತ್ತದೆ. ಕುರಿ-ಮೇಕೆಗಳಿಗಾಗಿ ಕುರಿ ಬಲೆಯನ್ನು ನಿರ್ಮಿಸುತ್ತಾರೆ.

ಇದರ ಜೊತೆಗೆ ಸಮುದಾಯದಲ್ಲಿ ಅನೇಕ ಮೀನುಗಾರರಿರುವುದು ಕಂಡುಬರುತ್ತದೆ. ಇವರು ಕೆರೆ ಮತ್ತು ಹಳ್ಳಗಳಿಗೆ ತೆರಳಿ ಮೀನುಗಳನ್ನು ಹಿಡಿದುಕೊಡುವ ವೃತ್ತಿಯಲ್ಲಿ ನಿರತರಾಗಿರುವುದನ್ನು ಗುರುತಿಸಬಹುದಾಗಿದೆ. ನಾಯಕನಹಟ್ಟಿ ಪರಿಸರದಲ್ಲಿನ ಗೌರೀಪುರ ಎಂಬ ಹಂಡಿಜೋಗಿ ನೆಲೆಯಲ್ಲಿನ ೩೦ಕ್ಕೂ ಹೆಚ್ಚು ಕುಟುಂಬಗಳು ಮೀನುಗಾರರಾಗಿದ್ದು, ಪ್ರತಿನಿತ್ಯ ಮೀನು ಹಿಡಿಯುವ ವೃತ್ತಿಯ ಮೇಲೆ ವಿವಿಧ ಊರುಗಳಿಗೆ ಹೋಗುವುದನ್ನು ಗುರುತಿಸಬಹುದಾಗಿದೆ.

ಸಮುದಾಯದಲ್ಲಿ ಸ್ತ್ರೀಯರೂ ಸಹ ಮೀನುಗಾರಿಕೆಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಕೆರೆಗಳಲ್ಲಿ ಬಲೆಯನ್ನು ಬಿಡುವ ಕೆಲಸವನ್ನು ಮಹಿಳೆಯರು ಮಾಡುತ್ತಾರೆ. ಪುರುಷರು ಕೆರೆಯಲ್ಲಿ ಈಜುತ್ತ ಬಲೆಯನ್ನು ಮಡಚುತ್ತಾ ಅದರಲ್ಲಿನ ಮೀನುಗಳನ್ನು ಹಿಡಿದು ತರುವ ಕೆಲಸವನ್ನು ಮಾಡುತ್ತಾರೆ. ಜೊತೆಗೆ ಮೀನಿನ ಬಲೆಗಳನ್ನು ಇವರೇ ನಿರ್ಮಿಸುತ್ತಾರೆ. ಹಂಡಿಜೋಗಿಗಳ ಕೆಲವು ನೆಲೆಗಳಲ್ಲಿನ ಮಹಿಳೆಯರು ಈಚಲು ಮರದಿಂದ ಅನೇಕ ಗೃಹೋಪಯೋಗಿ ವಸ್ತುಗಳನ್ನು ನಿರ್ಮಿಸಿ ಮಾರಾಟ ಮಾಡುವುದು ಕಂಡುಬರುತ್ತದೆ. ಈಚಲು ಗರಿಗಳಿಂದ ಈಚಲು ಚಾಪೆಗಳನ್ನು ಹೆಣೆಯುತ್ತಾರೆ. ಜೊತೆಗೆ ಗರಿಗಳಿಂದ ಪೊರಕೆಗಳನ್ನು ನಿರ್ಮಿಸುತ್ತಾರೆ. ನಂತರ ಈ ಕಡ್ಡಿಗಳಿಂದ ವಿವಿಧ ಗಾತ್ರದಲ್ಲಿ ಬುಟ್ಟಿಗಳನ್ನು ಹೆಣೆದು ಮಾರಾಟ ಮಾಡುವುದನ್ನು ಗುರುತಿಸಬಹುದಾಗಿದೆ.

ಇಂದು ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ನೆಲೆಸಿರುವ ಅನೇಕ ಹಂಡಿಜೋಗಿ ಕುಟುಂಬಗಳು ಸ್ಟೇಷನರಿ ವ್ಯಾಪಾರದಲ್ಲಿ ನಿರತರಾಗಿರುವುದು ಕಂಡುಬರುತ್ತದೆ. ಸಮುದಾಯದ ಮಹಿಳೆಯರು ಪಟ್ಟಣದ ಮುಖ್ಯ ಬೀದಿಯ ಪಕ್ಕದಲ್ಲಿ ಗೃಹೋಪಯೋಗಿ ಸಿದ್ದವಸ್ತುಗಳ ವ್ಯಾಪಾರದಲ್ಲಿ ನಿರತರಾಗಿರುವುದನ್ನು ಗುರುತಿಸಬಹುದಾಗಿದೆ. ನಗರ ಮತ್ತು ಪಟ್ಟಣಗಳಲ್ಲಿ ನಡೆಯುವ ಸಂತೆ ಮಾರುಕಟ್ಟೆಗಳಿಗೆ ತೆರಳಿ ಗೃಹೋಪಯೋಗಿ ಸಿದ್ಧವಸ್ತುಗಳ ಮಾರಾಟ ಮಾಡುವುದನ್ನು ಗುರುತಿಸಬಹುದಾಗಿದೆ. ಗೃಹೋಪಯೋಗಿ ವಸ್ತುಗಳ ವ್ಯಾಪಾರದ ಜೊತೆಗೆ ಸಿದ್ದ ಉಡುಪುಗಳ ಮಾರಾಟ, ಮಕ್ಕಳ ಆಟಿಕೆ ಸಾಮಾಗ್ರಿಗಳ ಮಾರಾಟ, ಮಹಿಳೆ ಮತ್ತು ಮಕ್ಕಳು ಹಾಗೂ ಪುರುಷರ ಅಲಂಕಾರ (ಸೌಂದರ್ಯವರ್ಧಕ) ಸಾಮಗ್ರಿಗಳ ಮಾರಾಟ ಹೀಗೆ ವಿವಿಧ ಬಗೆಯ ವಸ್ತುಗಳ ಮಾರಾಟ ಮಾಡುವುದನ್ನು ಗುರುತಿಸಬಹುದಾಗಿದೆ. ಮುಖ್ಯವಾಗಿ ಇವರಲ್ಲಿ ಕೆಲವರು ನಗರ ಮತ್ತು ಪಟ್ಟಣಗಳಲ್ಲಿ ದೊಡ್ಡ ಸ್ಟೇಷನರಿ ಅಂಗಡಿಗಳನ್ನು ನಡೆಸುತ್ತಿರುವುದನ್ನು ನೋಡಬಹುದಾಗಿದೆ.

**ಬಡಗಿತನ**

ಹಂಡಿಜೋಗಿಗಳ ಕೆಲವು ನೆಲೆಗಳಲ್ಲಿನ ವ್ಯಕ್ತಿಗಳು ಬಡಗಿ ವೃತ್ತಿ ಮಾಡುವುದು ಕಂಡುಬರುತ್ತದೆ. ಸಮುದಾಯದಲ್ಲಿ ಈ ವೃತ್ತಿಯನ್ನು ಮಾಡುವವರು ತುಂಬಾ ವಿರಳವಾಗಿರುವುದನ್ನು ಗುರುತಿಸಬಹುದಾಗಿದೆ. ಸಮುದಾಯದಲ್ಲಿನ ಕೆಲವು ಪುರುಷರು ಕೃಷಿ ಚಟುವಟಿಕೆಗೆ ಅಗತ್ಯವಾದ ಉಪಕರಣಗಳನ್ನು ನಿರ್ಮಿಸಿಕೊಳ್ಳುವುದನ್ನು ಕಾಣಬಹುದಾಗಿದೆ.

ಕೆಲವು ಭಾಗಗಳಲ್ಲಿ ಕೇವಲ ಹಂಡಿಜೋಗಿಗಳೇ ನೆಲೆಸಿರುವ ಗ್ರಾಮಗಳಿದ್ದು, ಆ ಗ್ರಾಮದಲ್ಲಿನ

ಹಂಡಿಜೋಗಿ ಕುಟುಂಬಗಳಲ್ಲಿನ ಕೆಲವರು ಈ ವೃತ್ತಿ ಮಾಡುತ್ತಿರುವುದನ್ನು ಗುರುತಿಸಬಹುದಾಗಿದೆ. ಇವರು ಕೃಷಿ ಚಟುವಟಿಕೆಗೆ ಅಗತ್ಯವಾದ ಕೆಲವು ಉಪಕರಣಗಳನ್ನು ತಯಾರಿಸಿಕೊಡುವುದು ಕಂಡುಬರುತ್ತದೆ. ಸ್ಥಳೀಯವಾಗಿ ದೊರೆಯುವ ಕೆಲವು ಮರಗಳಿಂದ ಈ ಕೃಷಿ ಉಪಕರಣಗಳನ್ನು ತಯಾರಿಸುವುದನ್ನು ನೋಡಬಹುದಾಗಿದೆ. ಇವರು ಕೃಷಿ ಭೂಮಿಯನ್ನು ಉಳುಮೆ ಮಾಡಲು ಮಡಕೆ (ನೇಗಿಲು), ಕುಂಟೆ, ಕೂರಿಗೆ, ನೊಗ, ಎಡೆಕುಂಟೆ, ಹತ್ತಿಕುಂಟೆ, ಮೆಕ್ಕೆಜೋಳದ ಕುಂಟೆ, ಸೂರ್ಯಕಾಂತಿ ಕುಂಟೆ ಮುಂತಾದ ಪ್ರಮುಖ ಉಪಕರಣಗಳನ್ನು ಮಾತ್ರ ತಯಾರಿಸಿ ಕೊಡುವುದನ್ನು ಗುರುತಿಸಬಹುದಾಗಿದೆ. ಇವುಗಳ ಜೊತೆಗೆ ಗೃಹಬಳಕೆಗೆ ಅಗತ್ಯವಾದ ಕೆಲವು ಸಣ್ಣ ಉಪಕರಣಗಳನ್ನು ಸಿದ್ದಪಡಿಸಿ ಅವುಗಳ ಮಾರಾಟ ಮಾಡುವುದನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ ಮರಗಳಿಂದ ಸಲಿಕೆ, ಗುದ್ದಲಿ (ಪಿಕಾಸಿ) ಬಾಚಿ, ದೊಡ್ಡಬಾಚಿ, ಕೊಡಲಿ, ಗಂಡುಕೊಡಲಿ ಮುಂತಾದ ಕಬ್ಬಿಣದ ಉಪಕರಣಗಳಿಗೆ ಮರದ 'ಕಾವು'ಗಳನ್ನು ತಯಾರಿಸಿ ಮಾರಾಟ ಮಾಡುವುದು ಕಂಡುಬರುತ್ತದೆ. ಇವುಗಳ ಜೊತೆಗೆ ಗೃಹಬಳಕೆಯ ವಸ್ತುಗಳಾದ ಒನಕೆ, ಕಡಗೋಲು, ಚಿಕ್ಕ ಕಡಗೋಲು, ಮುದ್ದೆಕೋಲು, ಮರದ ಕೈಬಟ್ಟಲು, ಸೀರಿಣಿಕೆ ಮುಂತಾದ ವಸ್ತುಗಳನ್ನು ನಿರ್ಮಿಸಿಕೊಂಡು ಮಾರಾಟ ಮಾಡುವುದನ್ನು ನೋಡಬಹುದಾಗಿದೆ. ಹೀಗೆ ಸಮುದಾಯದಲ್ಲಿ ಕೃಷಿ ಮತ್ತು ಗೃಹಬಳಕೆಯ ವಸ್ತುಗಳನ್ನು ಸಿದ್ದಪಡಿಸಿ ಮಾರಾಟ ಮಾಡುವುದನ್ನು ಗುರುತಿಸಬಹುದಾಗಿದೆ.

**ಗಾರೆ ಕೆಲಸ**

ಹಂಡಿಜೋಗಿಗಳು ಕಟ್ಟಡ ಕಾರ್ಮಿಕರ ಕೆಲಸವನ್ನು ತಮ್ಮ ಸಮುದಾಯದ ಪ್ರಧಾನ ವೃತ್ತಿ ಎಂಬಂತೆ ಅನೇಕರು ಈ ವೃತ್ತಿಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಸಮುದಾಯದ ಪ್ರತಿಯೊಂದು ನೆಲೆಗಳಲ್ಲಿಯೂ ಸಹ ಕಟ್ಟಡ ಕಾರ್ಮಿಕರ ಕೆಲಸ ಮಾಡುವವರು ಹೆಚ್ಚಿನ ಸಂಖ್ಯೆಯಲ್ಲಿ ಕಾಣಸಿಗುತ್ತಾರೆ. ಇವರು ಗಾರೆ ಕೆಲಸವನ್ನು ಅದರ ಪ್ರಧಾನ ವೃತ್ತಿಗಾರರಿಗಿಂತ ಉತ್ತಮವಾಗಿ ಈ ಕೆಲಸ ಮಾಡುವುದರಲ್ಲಿ ಪರಿಣಿತಿಯನ್ನು ಪಡೆದವರಾಗಿರುವುದು ಕಂಡುಬರುತ್ತದೆ. ಸಮುದಾಯದಲ್ಲಿನ ಎರಡನೇ ತಲೆಮಾರಿನ ಪುರುಷರಲ್ಲಿ ಬಹುತೇಕರು (ಯುವಕರು) ಈ ವೃತ್ತಿಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ ಯುವಕರು, ಗೃಹಸ್ಥರು, ಕಟ್ಟಡ ಕಾರ್ಮಿಕರ ಕೆಲಸ ಮಾಡಲು ಅನೇಕ ನಗರಗಳಿಗೆ ವಲಸೆ ಹೋಗಿರುವುದನ್ನು ಗುರುತಿಸಬಹುದಾಗಿದೆ. ಕೂಡ್ಲಿಗಿ ಪರಿಸರದಲ್ಲಿನ ಬಿಷ್ಣಹಳ್ಳಿ ಹಂಡಿಜೋಗಿ ನೆಲೆಯ ಬಹುತೇಕರು ಹಾಗೂ ಕೊಟ್ಟೂರು ಪರಿಸರದಲ್ಲಿನ (ಹರಾಳು, ರಾಮಕನಹಳ್ಳಿ) ಕೆಲವರು ಕಟ್ಟಡ ಕಾರ್ಮಿಕ ಕೆಲಸ ಮಾಡಲು ಬೆಂಗಳೂರು, ದಾವಣಗೆರೆ, ತುಮಕೂರು, ಶಿವಮೊಗ್ಗ ಮುಂತಾದ ಬೃಹತ್ ನಗರಗಳಿಗೆ ವಲಸೆ ಹೋಗಿರುವುದನ್ನು ಗುರುತಿಸಬಹುದಾಗಿದೆ. ಕಟ್ಟಡ ಕಾರ್ಮಿಕ ಕೆಲಸದಲ್ಲಿ ಬಳಸುವ ಉಪಕರಣಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

ಮೂಲೆಮಟ್ಟ (ಮಟ್ಲಿಗೆ), ತೂಕದ ಗುಂಡು, ದಾರದುಂಡೆ, ಸೀಲಿಂಗ್‌ರಾಡ್, ಕಬ್ಬಿಣದ ಸುತ್ತಿಗೆ, ಚಿಕ್ಕ ಸುತ್ತಿಗೆ, ದೊಡ್ಡ ಸುತ್ತಿಗೆ, ಕರ್ನೆ, ನೈಸ್ ಕರ್ನೆ, ರಫ್ ಕರ್ನೆ, ಸಣ್ಣ ಕರ್ನೆ, ದೊಡ್ಡ ಕರ್ನೆ, ಚಿಕ್ಕೆ – ಚಚ್ಚೌಕಾರದ ಚಿಕ್ಕ ಮರದ ತುಂಡು, ಮಟ್ಟಗೋಲು – ೨ ಅಡಿಯಿಂದ ಗರಿಷ್ಟ

೭ ಅಡಿಯವರೆಗಿನ ಮಟ್ಟಗೋಲುಗಳನ್ನು ಬಳಸುತ್ತಾರೆ. ಅತಿಹೆಚ್ಚು ೪ ಅಡಿಯಿಂದ ೬ ಅಡಿಯ ಮಟ್ಟಗೋಲುಗಳನ್ನು ಬಳಸುವುದಾಗಿ ವಿವರಿಸಿದರು. ಟೇಪ್, ಲಿವರ್– (ಕಬ್ಬಿಣ ಬಗ್ಗಿಸಲು ಬಳಸುವ ಉಪಕರಣ), ಕಬ್ಬಿಣದ ಕಡಾಯ (ಪುಟ್ಟಿ), ಚಾನ (ಶಾನ್) – (ಕಬ್ಬಿಣ ಕತ್ತರಿಸಲು ಬಳಸುವ ಉಪಕರಣ), ಟ್ಯೂಬ್‌ಲೆವೆಲ್, ಗರಗಸ, ಕಬ್ಬಿಣದ ಹಾರೆ, ಚಲಿಕೆ, ಗುದ್ದಲಿ (ಪಿಕಾಸಿ) ಮೇಲೆ ಹೆಸರಿಸಿದ ಉಪಕರಣಗಳ ಹೆಸರುಗಳೆಲ್ಲವೂ ಆಧುನಿಕ ಉಪಕರಣಗಳಾಗಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ ಕಟ್ಟಡ ಕಾರ್ಮಿಕರ ಕೆಲಸವನ್ನು ಸಿಮೆಂಟ್ ಕೆಲಸ, ಗಾರೆ ಕೆಲಸ ಎಂದು ಕರೆಯುತ್ತಾರೆ. ದಸರಾ ಸಂದರ್ಭದಲ್ಲಿ ಸಮುದಾಯದಲ್ಲಿ ಈ ವೃತ್ತಿಯನ್ನು ಮಾಡುವವರೆಲ್ಲರೂ ಮೇಲಿನ ಉಪಕರಣಗಳನ್ನೆಲ್ಲಾ ಸ್ವಚ್ಛಗೊಳಿಸಿ ಅವುಗಳಿಗೆ ಹೂ, ಹಣ್ಣು, ಕಾಯಿ, ನಿಂಬೆಗಳನ್ನಿರಿಸಿ ಪೂಜೆ ಸಲ್ಲಿಸುವುದು ಕಂಡುಬರುತ್ತದೆ.

### ೩.೬. ಹಂಡಿಜೋಗಿಗಳ ಶಿಕಾರಿ ಪರಂಪರೆ

ಹಂಡಿಜೋಗಿಗಳಲ್ಲಿ ಶಿಕಾರಿ ಮಾಡುವುದು ಸಮುದಾಯದ ಸಾಂಪ್ರದಾಯಿಕ ಆಚರಣೆಗಳಲ್ಲೊಂದಾಗಿದೆ. ಸಮುದಾಯದ ವ್ಯಕ್ತಿಗಳು ಶಿಕಾರಿ ಮಾಡುವುದು ತಮ್ಮ ಸಮುದಾಯದ ಒಂದು ಪ್ರವೃತ್ತಿ (ಉಪವೃತ್ತಿ) ಎಂದು ನಂಬಿದ್ದಾರೆ. ಸಮುದಾಯದ ಕುಟುಂಬಗಳಲ್ಲಿನ ಕೆಲವು ವ್ಯಕ್ತಿಗಳು ಕೂಡಿಕೊಂಡು ತಮ್ಮ ಬಿಡುವಿನ ವೇಳೆಯಲ್ಲಿ ಶಿಕಾರಿ ಮಾಡುವುದು ಕಂಡುಬರುತ್ತದೆ. ಮಾಂಸ ಆಹಾರಪ್ರಿಯರಾದ ಇವರು ಸಮುದಾಯದಲ್ಲಿ ಕೇವಲ ಆಹಾರಕ್ಕಾಗಿ ಮಾತ್ರ ಶಿಕಾರಿ ಮಾಡುವುದು ಕಂಡುಬರುತ್ತದೆ. ಕೆಲವು ವೇಳೆ ತಾವು ಬೆಳೆದಿರುವ ಬೆಳೆಗಳನ್ನು ಕಾಡುಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ಕೆಲವು ಕಾಡುಪ್ರಾಣಿಗಳ ಶಿಕಾರಿ ಮಾಡುವುದು ಸಹ ಕಂಡುಬರುತ್ತದೆ. ಸ್ಥಳೀಯ ಪರಿಸರದಲ್ಲಿ ಶಿಕಾರಿ ಮಾಡುವುದರಲ್ಲಿ ಹಂಡಿಜೋಗಿಗಳು ತುಂಬಾ ಪ್ರಸಿದ್ಧರಾಗಿರುವುದು ಕಂಡುಬರುತ್ತದೆ. ಅಲೆಮಾರಿಗಳಾದ ಇವರು ಕಾಡಿನ ಅಂಚಿನಲ್ಲೇ ವಾಸಿಸುವರಾದ್ದರಿಂದ ಕಾಡಿನಲ್ಲಿರುವ ಅನೇಕ ಪ್ರಾಣಿ ಮತ್ತು ಪಕ್ಷಿಗಳ ಚಲನವಲನಗಳು, ಅವುಗಳ ಧ್ವನಿಗಳನ್ನು (ಕೂಗುವುದು) ಮತ್ತು ಅವುಗಳ ಹೆಜ್ಜೆಗಳನ್ನು ಬಲ್ಲವರಾಗಿದ್ದಾರೆ. ಯಾವ ಪ್ರಾಣಿ ಮತ್ತು ಪಕ್ಷಿಗಳು ಯಾವ ಸಮಯದಲ್ಲಿ (ಹೊತ್ತು-ಕಾಲ) ಆಹಾರ ಹರಸಿ ಕಾಡಿನಲ್ಲಿ ಸಂಚರಿಸುತ್ತವೆ ಎಂಬ ಸುಳಿವುಗಳೆಲ್ಲವನ್ನು ಬಲ್ಲವರಾಗಿದ್ದಾರೆ. ಸಮುದಾಯದಲ್ಲಿ ಇವರು ಶಿಕಾರಿ ಹೊರಟರೆ ಎಂದೂ ಬರಿಗೈಯಲ್ಲಿ ಮನೆಗೆ ವಾಪಾಸ್ಸಾದದ್ದಿಲ್ಲ. ಯಾವುದಾದರೊಂದು ಪ್ರಾಣಿಯನ್ನು ಶಿಕಾರಿ ಮಾಡಿಕೊಂಡು ಬರುತ್ತಾರೆ. ಇವರ ಗುರಿ ಎಂದೂ ತಪ್ಪುದಿಲ್ಲ. ಶಿಕಾರಿಗೆ ಹೊರಡುವ ಮುನ್ನ ಸಮುದಾಯದ ಕುಲದೈವನಾದ ಕಾಲಭೈರವನಿಗೆ ಪೂಜೆ ಸಲ್ಲಿಸಿ, (ಪ್ರಾರ್ಥನೆ ಮಾಡಿ) ಶಿಕಾರಿಯ ಆಯುಧಗಳಿಗೆ ನಮಸ್ಕರಿಸಿ ಅವುಗಳನ್ನು (ಈಟಿ, ಭರ್ಚಿ) ತೆಗೆದುಕೊಂಡು ಹೊರಡುವ ಪದ್ಧತಿ ರೂಢಿಯಲ್ಲಿದೆ. ಸಮುದಾಯದಲ್ಲಿ ಎಲ್ಲಾ ದಿನಗಳಲ್ಲೂ ಶಿಕಾರಿ ಮಾಡುವುದು ಕಂಡುಬಂದರೂ ಸಹ ಕೆಲವು ವಿಶಿಷ್ಟ ದಿನದಂದು ಕಡ್ಡಾಯವಾಗಿ ಶಿಕಾರಿ ಮಾಡುವುದು ಕಂಡುಬರುತ್ತದೆ. ಅದರಲ್ಲೂ ಮುಖ್ಯವಾಗಿ ಅಮವಾಸ್ಯೆ ಮತ್ತು ಹುಣ್ಣಿಮೆ ದಿನದಂದು ಸಮುದಾಯದಲ್ಲಿ ಕಡ್ಡಾಯವಾಗಿ ಶಿಕಾರಿ ಮಾಡುವುದು ಕಂಡುಬರುತ್ತದೆ. ಸಮುದಾಯದಲ್ಲಿ ಒಬ್ಬ

ವ್ಯಕ್ತಿಯಿಂದ ಹಿಡಿದು ಮೂರು ನಾಲ್ಕು ಜನರೊಂದಿಗೆ ಸೇರಿಕೊಂಡು ಶಿಕಾರಿ ಮಾಡುವುದು ಕಂಡುಬರುತ್ತದೆ. ಪ್ರಮುಖವಾಗಿ ಯುಗಾದಿ ಹಬ್ಬದ ಸಂದರ್ಭಗಳಲ್ಲಿ ಇಡೀ ಸಮುದಾಯದವರೆಲ್ಲಾ ಸೇರಿ ಶಿಕಾರಿ ಮಾಡುವುದು ಕಂಡುಬರುತ್ತದೆ. ಯುಗಾದಿ ಸಂದರ್ಭದಲ್ಲಿ ಹಬ್ಬದ ಕರಿಬೇಟೆಗೆಂದು ಸಮುದಾಯದಲ್ಲಿ ಶಿಕಾರಿ ಮಾಡುವುದು ರೂಢಿಯಲ್ಲಿರುವುದನ್ನು ಗುರುತಿಸಲಬಹುದಾಗಿದೆ.

**ಬೇಟೆ ವಿಧಾನ (ಶಿಕಾರಿ ಕ್ರಮ)**

ಸಮುದಾಯದಲ್ಲಿ ಶಿಕಾರಿ ಮಾಡಲು ತಮ್ಮೊಟ್ಟಿಗೆ ಕೆಲವು ಆಯುಧಗಳು ಮತ್ತು ಕೆಲವು ಪ್ರಾಣಿಗಳನ್ನು ಬಳಸಿಕೊಳ್ಳುವುದು ಕಂಡುಬರುತ್ತದೆ. ಸಮುದಾಯದಲ್ಲಿ ಕೆಲವು ಕಾಡು ಪ್ರಾಣಿಗಳು (ಕಾಡು ಹಂದಿ, ಉಡ, ಮೊಲ) ಮತ್ತು ಜಲಚರ ಪ್ರಾಣಿಗಳನ್ನು (ಮೀನು, ಏಡಿ, ತ್ಯಾಬ್ಲಿ) ಬೇಟೆಯಾಡಲು ಕೆಲವು ಬಲೆಗಳನ್ನು ಸಿದ್ದಪಡಿಸಿ (ತಯಾರಿಸಿ)ಕೊಂಡಿರುತ್ತಾರೆ. ಅವುಗಳೆಂದರೆ, ಹಂದಿಬಲೆ, ಮೀನಿನ ಬಲೆ, ಮೊಲದ ಬಲೆ ಎಂದು ಆಯಾ ಪ್ರಾಣಿಗಳ ಆಕಾರವನ್ನು ಕೇಂದ್ರವಾಗಿಟ್ಟುಕೊಂಡು ಅವುಗಳು ಬಲೆಯಿಂದ ತಪ್ಪಿಸಿಕೊಂಡು ಹೋಗದಂತೆ ಮೇಲಿನ ಬಲೆಗಳನ್ನು ತಯಾರಿಸಿಟ್ಟು (ಹೆಣೆದಿಟ್ಟು)ಕೊಂಡಿರುವುದನ್ನು ಗುರುತಿಸಬಹುದಾಗಿದೆ. ಕೆಲವು ಪ್ರಾಣಿಗಳ ಶಿಕಾರಿಗೆ ತಮಗೆ ನೆರವಾಗಲು ಕೆಲವು ಪ್ರಾಣಿಗಳನ್ನು ಸಾಕಿಕೊಂಡಿರುತ್ತಾರೆ. ಅಂತಹ ಪ್ರಾಣಿಗಳಲ್ಲಿ ನಾಯಿ ತುಂಬಾ ಪ್ರಮುಖವಾದುದು. ಸಮುದಾಯದಲ್ಲಿ ಬೇಟೆಗಾರ ಬೇಟೆಗೆ ಸಿದ್ದನಾದರೆ, ಅವನ ಅನುಚರನೆಂಬಂತೆ ಬೇಟೆನಾಯಿ ಶಿಕಾರಿಗೆ ಸಿದ್ದವಾಗುತ್ತದೆ. ನಾಯಿಯು ಕಾಡುಪ್ರಾಣಿಗಳ ಸುಳಿವನ್ನು ಮತ್ತು ಅವುಗಳ ವಾಸನೆ ಹಾಗೂ ಹೆಜ್ಜೆ ಗುರುತನ್ನು ಕ್ಷಣಾರ್ಧದಲ್ಲೇ ಪತ್ತೆ ಹಚ್ಚುತ್ತದೆ. ಇವೆಲ್ಲವುಗಳ ಜೊತೆಗೆ ಕೆಲವು ಪ್ರಮುಖ ಆಯುಧ ಪರಿಕರಗಳನ್ನು ಶಿಕಾರಿಯಲ್ಲಿ ಬಳಸುತ್ತಿರುವುದು ಕಂಡುಬರುತ್ತದೆ. ಅಂತಹ ಆಯುಧಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

**ಕಬ್ಬಿಣದ ಆಯುಧಗಳು**

ಹಂದಿಜೋಗಿಗಳು ಶಿಕಾರಿ ಮಾಡಲು ಬಳಸುವ ಪ್ರಮುಖ ಕಬ್ಬಿಣದ ಆಯುಧಗಳನ್ನು ಕೆಳಗಿನಂತೆ ಹೆಸರಿಸಬಹುದಾಗಿದೆ. ಅವುಗಳೆಂದರೆ ೧. ಈಟಿ, ೨. ಭರ್ಚಿ, ೩. ಕತ್ತಿ, ೪. ಕೊಡಲಿ, ೫. ಗಂಡುಕೊಡಲಿ ಮುಂತಾದ ಆಯುಧಗಳ ಜೊತೆಗೆ ಬಿದಿರನ ಕೋಲು ಮತ್ತು ಬ್ಯಾಟರಿ ಮುಂತಾದ ಪರಿಕರಗಳನ್ನು ಶಿಕಾರಿಯಲ್ಲಿ ಬಳಸುತ್ತಿರುವುದು ಕಂಡುಬರುತ್ತದೆ. ಮೇಲಿನ ಆಯುಧಗಳಲ್ಲದೆ ಸಮುದಾಯದಲ್ಲಿ ಕೆಲವು ಬಿಲ್ಲುಗಳನ್ನು ತಯಾರಿಸುವುದು ಕಂಡುಬರುತ್ತದೆ. ಅವುಗಳೆಂದರೆ ೧. ಕವಣೆ, ೨. ಕ್ಯಾಟ್ರಬಿಲ್ಲೆ ೩. ಉರುಳುಕೋಲು(ಉರುಳು ಕಟ್ಟಿಗೆ) ಮುಂತಾದವು.

**ಕೌಜುಗಗಳ ಶಿಕಾರಿ ವಿಧಾನ**

ಹಂಡಿಜೋಗಿಗಳು ಕೌಜುಗಗಳ ಶಿಕಾರಿಯನ್ನು ತುಂಬಾ ಜಾಣ್ಮೆಯಿಂದ ಮಾಡುವುದು ಕಂಡುಬರುತ್ತದೆ. ಕೌಜುಗಗಳ ಶಿಕಾರಿಗಾಗಿಯೇ ಚಿಕ್ಕ ಬಿದಿರಿನ ಕಡ್ಡಿಗಳಿಂದ ಪೆಟ್ಟಿಗೆಯಾಕಾರದ ಬಲೆಯನ್ನು ನಿರ್ಮಿಸಿಕೊಂಡಿರುತ್ತಾರೆ. ಬಿದಿರಿನ ಕಡ್ಡಿಗಳನ್ನು ತಂತಿ ಮತ್ತು ದಾರದಿಂದ

ಜೋಡಿಸಿಕಟ್ಟಲಾಗಿರುತ್ತದೆ. ಸಮುದಾಯದಲ್ಲಿ ಇದನ್ನು ಪಾಜೀ ಎನ್ನುತ್ತಾರೆ. ಇವರು ಮನೆಯಲ್ಲಿ ಬೇಟೆಗಾಗಿಯೇ ಕೆಲವು ಕೌಜುಗಳನ್ನು ಪಳಗಿಸಿರುತ್ತಾರೆ. ಇವು ಕೌಜುಗಳ ಶಿಕಾರಿಯಲ್ಲಿ ನೆರವಾಗುತ್ತವೆ. ನಾಯಕನಹಟ್ಟಿ ಪರಿಸರದಲ್ಲಿನ ಗೌರೀಪುರ, ದೇವರಹಳ್ಳಿ ಹಂಡಿಜೋಗಿ ನೆಲೆಗಳ ಪ್ರತಿಯೊಂದು ಡೇರೆಗಳಲ್ಲಿಯೂ ಕೌಜುಗಳು ಕಂಡುಬರುತ್ತವೆ. ತಂತಿಯಲ್ಲಿ ಪುಟ್ಟ ಗೋಲಾಕಾರದ ಗೂಡಿನಲ್ಲಿ ಇವುಗಳನ್ನು ಇರಿಸಲಾಗಿರುತ್ತದೆ. ಕೆಲವು ಕಡೆ ಬಿದಿರಿನ ಪೆಟ್ಟಿಗೆಗಳಲ್ಲಿ ಇರಿಸಿರುವುದು ಕಂಡುಬರುತ್ತದೆ.

ಬಿದಿರಿನ ಅಥವಾ ತಂತಿಯ ಪಂಜರದಲ್ಲಿರುವ ಕೌಜುಗಳ ಪೆಟ್ಟಿಗೆಯನ್ನು ಕಾಡಿನ ಒಂದು ಭಾಗದಲ್ಲಿರಿಸಿ, ಅದನ್ನು ಯಾರಿಗೂ ಕಾಣದಂತೆ ಹೊದಿಕೆಯಿಂದ ಮುಚ್ಚಲಾಗಿರುತ್ತದೆ. ಈ ಪೆಟ್ಟಿಗೆಯ ಸುತ್ತಲೂ ಬಿದಿರಿನ ಕಡ್ಡಿಗಳಿಂದ ತಯಾರಿಸಿದ ಬಲೆಯನ್ನು (ಪಾಜಿ) ಹಾಕಲಾಗುತ್ತದೆ. ಇದಾದ ನಂತರ ಶಿಕಾರಿ ಮಾಡುವ ವ್ಯಕ್ತಿ ಬಲೆಯಿಂದ ಸ್ವಲ್ಪ ದೂರದಲ್ಲಿ ಮರೆಯಾಗಿ ನಿಂತು ಕೌಜುಗದ ಧ್ವನಿಯಂತೆ ಸೀಳು ಧ್ವನಿ ಮಾಡುತ್ತಾನೆ. ಈ ಧ್ವನಿಯನ್ನು ಕೇಳಿದ ಕೂಡಲೇ ಪಂಜರದಲ್ಲಿದ್ದ (ಪೆಟ್ಟಿಗೆ) ಕೌಜುಗ ಅನೇಕ ಭಾರಿ ಕೂಗಲು ಪ್ರಾರಂಭಿಸುತ್ತದೆ. ಈ ಕೌಜುಗದ ಧ್ವನಿಯನ್ನು ಆಲಿಸಿದ ಕಾಡಿನಲ್ಲಿದ್ದ ಹಲವು ಕೌಜುಗಗಳು ಹಿಂಡು-ಹಿಂಡಾಗಿ ಆ ಕೌಜುಗದ ಮೇಲೆ ಆಕ್ರಮಣ ಮಾಡುವಂತೆ ಓಡೋಡಿ ಬಂದು ಬಿದಿರಿನ ಬಲೆಯಲ್ಲಿ ಸಿಕ್ಕಿಹಾಕಿಕೊಳ್ಳುತ್ತವೆ. ತಕ್ಷಣವೇ ಮರೆಯಲ್ಲಿ ನಿಂತಿದ್ದ ವ್ಯಕ್ತಿ ಬಲೆಯನ್ನು ಮಡಚುತ್ತ ಅವುಗಳನ್ನು ಹಿಡಿಯಲು ಮುಂದಾಗುತ್ತಾನೆ. ಹೀಗೆ ಕೌಜುಗದ ಶಿಕಾರಿ ನಡೆಯುತ್ತದೆ.

**ಕವಣೆ ಮತ್ತು ಕ್ಯಾಟ್ರಬಿಲ್ಲೆ**

ರಬ್ಬರ್ ಮತ್ತು ಕಟ್ಟಿಗೆಯಿಂದ ಮೇಲಿನ ಪರಿಕರಗಳನ್ನು ಸಿದ್ದಪಡಿಸಿಕೊಳ್ಳುತ್ತಾರೆ. ಕವಣೆ ಮತ್ತು ಕ್ಯಾಟರಬಿಲ್ಲುಗಳ ಮುಖ್ಯ ಆಯುಧ ಚಿಕ್ಕ ಚಿಕ್ಕ ಕಲ್ಲುಹರಳುಗಳು, ಇವುಗಳನ್ನು ಕವಣೆಯಲ್ಲಿರಿಸಿ ಬೀಸುವುದರೊಂದಿಗೆ ಕೆಲವು ಚಿಕ್ಕ ಪ್ರಾಣಿ ಮತ್ತು ಪಕ್ಷಿಗಳ ಶಿಕಾರಿ ಮಾಡುವುದು ಕಂಡುಬರುತ್ತದೆ. ಕವಣೆ ಮತ್ತು ಕ್ಯಾಟರಬಿಲ್ಲನ್ನು ಬಳಸಿ ಈ ಕೆಳಗಿನ ಪ್ರಾಣಿ ಮತ್ತು ಪಕ್ಷಿಗಳನ್ನು ಶಿಕಾರಿ ಮಾಡುವುದನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ, ಅಳಿಲು (ಕಾರಿ), ಪುರ್ಲೆಹಕ್ಕಿ, ಬೆಳವನಹಕ್ಕಿ, ಅಡಿವೆ ಪಾರಿವಾಳ, ಸಾಂಬಾರ್‌ಕಾಗೆ ಇವುಗಳ ಜೊತೆಗೆ ಕಾಡಿನಲ್ಲಿರುವ ಪ್ರಾಣಿಗಳಾದ ಮೊಲ, ಉಡ, ಕಾಡುಹಂದಿ (ಜಂಗಲ್ ಡುಕೋರ್), ಅಡಿವೆಬೆಕ್ಕು, ತ್ಯಾಬ್ಲೆ, ಕೌಜು-ಮೊದಲಾದ ಪ್ರಾಣಿಗಳನ್ನು ಶಿಕಾರಿ ಮಾಡಲು ಇವರು ಕಬ್ಬಿಣದ ಆಯುಧಗಳು ಹಾಗೂ ಬಲೆಗಳನ್ನು ಬಳಸಿಕೊಂಡು ಶಿಕಾರಿ ಮಾಡುವುದನ್ನು ಗುರುತಿಸಬಹುದಾಗಿದೆ. ಕಾಡುಹಂದಿಯ ಮಾಂಸವನ್ನು ಕೆಲವು ನೆಲೆಗಳಲ್ಲಿ ಆಹಾರವಾಗಿ ಬಳಸುತ್ತಾರೆ. ಕೆಲವು ನೆಲೆಗಳಲ್ಲಿ ಕಾಡುಹಂದಿಯ ಮಾಂಸಹಾರ ಸೇವನೆ ನಿಷಿದ್ಧವಾಗಿರುವುದು ಕಂಡುಬರುತ್ತದೆ. ಜಲಚರಗಳಾದ ಮೀನುಗಳು, ಏಡಿಗಳನ್ನು, ಶಿಕಾರಿ ಮಾಡಿ ಆಹಾರಕ್ಕೆ ಬಳಸುವುದನ್ನು ಎಲ್ಲಾ ನೆಲೆಗಳಲ್ಲೂ ಕಾಣಬಹುದಾಗಿದೆ.

ಕೌಜುಗದ ಮಾಂಸ ತುಂಬಾ ರುಚಿಉಳ್ಳದ್ದಾದ್ದರಿಂದ ಹೆಚ್ಚಾಗಿ ಈ ಮಾಂಸವನ್ನು ಸಮುದಾಯದಲ್ಲಿ

ಇಷ್ಟ ಪಡುವುದು ಕಂಡುಬರುತ್ತದೆ. ಜೊತೆಗೆ ಹಂಡಿಜೋಗಿಗಳು ನವಿಲು ಮತ್ತು ಜಿಂಕೆಯನ್ನು ಎಂದೂ ಶಿಕಾರಿ ಮಾಡುವುದಿಲ್ಲ. ಸಮುದಾಯದಲ್ಲಿ ನವಿಲು ಮತ್ತು ಜಿಂಕೆಯ ಮಾಂಸಸೇವನೆ ನಿಷಿದ್ಧವಾಗಿರುತ್ತದೆ. ಸಮುದಾಯದಲ್ಲಿ ಈ ಎರಡು ಪ್ರಾಣಿಗಳ ಬಗ್ಗೆ ದೈವತ್ವದ ಭಾವನೆಗಳಿರುವುದು ಕಂಡುಬರುತ್ತದೆ. ಸಮುದಾಯದ ಹಿರಿಯ ವಕ್ತೃವೊಬ್ಬರು ವಿವರಿಸುತ್ತ ಹೀಗೆ ಹೇಳುತ್ತಾರೆ. ಜಿಂಕೆಯು ನಾರದನ ಪ್ರತಿರೂಪ ಜೊತೆಗೆ ತಮ್ಮ ಸಮುದಾಯದ ಕುಲಸಂಕೇತಗಳಲ್ಲಿ ಒಂದು (ಶಿಂಗನಾದ) ಜಿಂಕೆಯ ಕೊಂಬಿನಿಂದ ತಯಾರಿಸಿದ ವಾದ್ಯವಾಗಿರುವುದರಿಂದ ಆ ಪ್ರಾಣಿ ನಮಗೆ ದೈವ ಸ್ವರೂಪಿ ಎಂದು ಜಿಂಕೆಯ ಬಗೆಗೆ ವಿವರಿಸುತ್ತಾರೆ. ನಂತರ ನವಿಲನ್ನು ಕುರಿತು ಈ ಪಕ್ಷಿಯ ಗರಿಗಳಿಂದ ತಮ್ಮನ್ನು ಮತ್ತು ಸಮುದಾಯದ ವಾದ್ಯವಾದ ಕಿನ್ನೂರಿಯನ್ನು ಅಲಂಕಾರಗೊಳಿಸಲು ಬಳಸಿಕೊಳ್ಳುವುದರಿಂದ ನವಿಲು ನಮಗೆ ದೈವಸ್ವರೂಪಿ ಎಂದು ವಿವರಿಸಿದರು. ನವಿಲಿನ ರೆಕ್ಕೆ ಪುಕ್ಕಗಳಿಂದಲೇ ಕಿನ್ನರಿ ಮತ್ತು ನಮ್ಮನ್ನು ಸಿಂಗರಿಸಿಕೊಳ್ಳುತ್ತೇವೆ ಎನ್ನುತ್ತಾರೆ. ಹಾಗಾಗಿ ನಾವುಗಳು ಯಾರೂ ಕೂಡ ನವಿಲು ಮತ್ತು ಜಿಂಕೆಯನ್ನು ಶಿಕಾರಿ ಮಾಡುವುದಿಲ್ಲ ಎಂದು ವಿವರಿಸುತ್ತಾರೆ.

ಕೊನೆಯಲ್ಲಿ ಹಂಡಿಜೋಗಿಗಳು ತಾವು ಶಿಕಾರಿಯಲ್ಲಿ ಬಳಸಿಕೊಳ್ಳುವ ಆಯುಧಗಳಿಗೆ ವಿಶೇಷವಾಗಿ ನವರಾತ್ರಿ ಸಂದರ್ಭಗಳಲ್ಲಿ ಕಿನ್ನೂರಿ ವಾದ್ಯದೊಟ್ಟಿಗಿರಿಸಿ, ಅವುಗಳಿಗೆ ಕೋಳಿಯನ್ನು ಬಲಿ ನೀಡಿ ವಿಶಿಷ್ಟವಾಗಿ ಪೂಜೆ ಸಲ್ಲಿಸುವುದನ್ನು ಗುರುತಿಸಬಹುದಾಗಿದೆ. ಇಂದು ಸಮುದಾಯದಲ್ಲಿ ಶಿಕಾರಿ ಪರಂಪರೆ ತುಂಬಾ ವಿರಳವಾಗಿರುವುದನ್ನು ಗುರುತಿಸಬಹುದಾಗಿದೆ. ಸಮುದಾಯದಲ್ಲಿ ಶಿಕಾರಿಯು ಕೇವಲ ಸಂಪ್ರದಾಯದ ಆಚರಣೆಯ ಭಾಗವಾಗಿ ಮಾತ್ರ, ಕೆಲವು ವಿಶಿಷ್ಟ ಸಂದರ್ಭಗಳಲ್ಲಿ (ಅಮವಾಸೆ, ಹಬ್ಬ, ಜಾತ್ರೆ) ರೂಢಿಯಲ್ಲಿರುವುದನ್ನು ಗುರುತಿಸಬಹುದಾಗಿದೆ.

### ೩.೭. ಒಳಾಡಳಿತ ವ್ಯವಸ್ಥೆ (ನ್ಯಾಯಪಂಚಾಯ್ತಿ)

ಅಲೆಮಾರಿ ಬುಡಕಟ್ಟು ಸಮುದಾಯವಾದ ಹಂಡಿಜೋಗಿಗಳು ಸಾಮಾಜಿಕವಾಗಿ ತಮ್ಮದೇ ಆದಂತಹ ಒಳಾಡಳಿತ ಪದ್ಧತಿಯನ್ನು ರೂಢಿಸಿಕೊಂಡಿರುವುದನ್ನು ಗುರುತಿಸಬಹುದಾಗಿದೆ. ಸಮುದಾಯದಲ್ಲಿ ಉತ್ತಮ ಬದುಕಿನ ನಿರ್ವಹಣೆಗೆ ತೊಂದರೆಯಾಗದಂತೆ ಕೆಲವು ಕಟ್ಟುಪಾಡು (ನೀತಿ–ನಿಯಮ)ಗಳನ್ನು ಪಾಲಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ ಯಾವುದೇ ರೀತಿಯ ದುರ್ಘಟನೆಗಳು, ಕಾನೂನು (ನ್ಯಾಯ) ಬಾಹಿರ ಕೃತ್ಯಗಳು ನಡೆಯದಂತೆ ನೋಡಿಕೊಳ್ಳಲಾಗುತ್ತದೆ. ಸಮುದಾಯಕ್ಕೆ ಸೇರಿದ ವ್ಯಕ್ತಿಗಳು ಸಮುದಾಯದ ಒಳಗೆ ಅಥವಾ ಹೊರಗೆ ಅನ್ಯಾಯ, ಅತ್ಯಾಚಾರ, ಅನೈತಿಕತೆ ಇಂತಹ ಹೀನ ಕೃತ್ಯಗಳನ್ನು ಮಾಡಿದವರ ವಿರುದ್ಧ ನಿರ್ದಾಕ್ಷಿಣ್ಯವಾಗಿ ಶಿಕ್ಷಿಸುವ ಮುಖಾಂತರ ಕಠಿಣ ಶಿಕ್ಷೆಗಳನ್ನು ವಿಧಿಸುವ ಕೆಲಸವನ್ನು ನ್ಯಾಯಪಂಚಾಯ್ತಿಗಳು ಮಾಡುತ್ತಿರುವುದು ಕಂಡುಬರುತ್ತದೆ. ಸಾಮಾಜಿಕ ಕಟ್ಟುಪಾಡುಗಳನ್ನು ಮೀರುವವರನ್ನು ತಮ್ಮ ಕುಲದಿಂದಲೇ ಬಹಿಷ್ಕರಿಸುವ ಪದ್ದತಿ ಸಮುದಾಯದಲ್ಲಿ ರೂಢಿಯಲ್ಲಿರುವುದನ್ನು ಗುರುತಿಸಬಹುದಾಗಿದೆ. ಹಂಡಿಜೋಗಿಗಳು ತಮ್ಮದೇ ಒಂದು ಬಗೆಯ ನ್ಯಾಯಪಂಚಾಯ್ತಿ ತೀರ್ಮಾನ ಸಮಿತಿಯೊಂದನ್ನು ರಚಿಸಿಕೊಂಡಿರುತ್ತಾರೆ. ಸಮುದಾಯದ ಯಾವುದೇ ವಿಧದ ಸಾಮಾಜಿಕ,

ಸಾಂಸ್ಕೃತಿಕ, ಧಾರ್ಮಿಕ ಕಾರ್ಯಕ್ರಮಗಳನ್ನು ಈ ನ್ಯಾಯ ಸಮಿತಿಯಿಂದಲೇ ಮಾಡಲಾಗುತ್ತದೆ. ಸಮುದಾಯದಲ್ಲಿ ಈ ಒಳಾಡಳಿತ ವ್ಯವಸ್ಥೆಯು ತಮ್ಮ ಕುಲದ ಹಿರಿಯ ಮನೆತನಕ್ಕೆ ಸೇರಿದ ಕುಲದ ಯಜಮಾನ ಭಂಡಾರಿ ಹಾಗೂ ಕುಲಗೌಡ ಪಾಟೀಲ(ಪುಳಸ್ಕರ್ ಪಾಟೀಲ್), ದಳವಾಯಿ ಇವರುಗಳನ್ನು ಒಳಗೊಂಡು ನ್ಯಾಯಸಮಿತಿ ರಚನೆಗೊಂಡಿರುತ್ತದೆ.

ಸಮುದಾಯದಲ್ಲಿ ನಡೆಯುವ ಗಂಭೀರವಲ್ಲದ ಘಟನೆಗಳಿಗೆ ಸಂಬಂಧಿಸಿದ ನ್ಯಾಯ ಪಂಚಾಯ್ತಿಯನ್ನು ತಾವು ನೆಲೆಸಿರುವ ಜಾತಿಯ (ಸಮುದಾಯದ ಮುಖಂಡರು ಅಥವಾ ಹಿರಿಯರು) ಮುಖಾಂತರವೇ ಬಗೆಹರಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ.

ಸಮುದಾಯದ ಒಳಪಂಗಡಗಳಿಗೆ ಸಂಬಂಧಿಸಿದಂತೆ ಹಾಗೂ ಸಮುದಾಯದ ಕುಲದೈವಗಳ ಜಾತ್ರೆ–ಉತ್ಸವಗಳಿಗೆ ಸಂಬಂಧಿಸಿದ ವಿಷಯಗಳು, ಸಮುದಾಯದ ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದ ಹೆಚ್ಚು ಗಂಭೀರ ಹಾಗೂ ಜಟಿಲತೆಯಿಂದ ಕೂಡಿದ ಸಮಸ್ಯಾತ್ಮಕ ನ್ಯಾಯ (ವ್ಯಾಜ್ಯಗಳು) ತೀರ್ಮಾನ ಮಾಡಲು ಹಂಡಿಜೋಗಗಳು ತಮ್ಮ ಸಮುದಾಯಕ್ಕೆ ಸೇರಿದ ಕಟ್ಟೆಮನೆಗಳನ್ನು ಆಶ್ರಯಿಸುತ್ತಾರೆ. ಕಟ್ಟೆಮನೆಯ ಗೌಡ, ದೈವಸ್ಥರ ಸಮ್ಮುಖದಲ್ಲಿ ನ್ಯಾಯ ತೀರ್ಮಾನ ಮಾಡುವ ಪದ್ಧತಿ ಕಂಡುಬರುತ್ತದೆ. ಸಮುದಾಯಕ್ಕೆ ಸೇರಿದ ದೈವಗಳ ಪ್ರತಿಷ್ಠಾಪನೆ ಹಾಗೂ ಉತ್ಸವ ಜಾತ್ರೆಗಳಿಗೆ ಸಂಬಂಧಿಸಿದ ವಿಷಯಗಳನ್ನು ಮೊದಲು ಕಟ್ಟೆಮನೆಗಳಲ್ಲಿ ಪ್ರಸ್ತಾಪಿಸಿ ಅದರ ಮೂಲಕ ಅನುಮತಿ ಪಡೆದು ಮುಂದಿನ ಕೆಲಸ ಕಾರ್ಯಗಳನ್ನು ಮಾಡುವ ಪದ್ಧತಿ ಇವರಲ್ಲಿ ರೂಢಿಯಲ್ಲಿದೆ.

ನ್ಯಾಯಪಂಚಾಯ್ತಿಯ ಮುಂದೆ ಹಾಜರಾಗುವವರು ಪಂಚಾಯ್ತಿಗೆ ಆದೇಶ್ ಮಾಡುವ (ನಮಸ್ಕರಿಸುವ) ಪದ್ಧತಿ ಇದೆ. ಸಮುದಾಯದಲ್ಲಿ ಕಟ್ಟೆಮನೆಗಳಲ್ಲಿ ನೀಡುವ ನ್ಯಾಯ ತೀರ್ಮಾನವೇ ಅಂತಿಮವಾಗಿರುತ್ತದೆ. ಇಲ್ಲಿನ ನ್ಯಾಯ ತೀರ್ಮಾನವನ್ನು ಧಿಕ್ಕರಿಸುವವರನ್ನು ತಮ್ಮ ಕುಲದಿಂದಲೇ ಬಹಿಷ್ಕರಿಸಲಾಗುತ್ತದೆ. ಜೊತೆಗೆ ಸಮುದಾಯದಲ್ಲಿ ನಡೆಯುವ ಕುಲಸಂಬಂಧಿಯಾದ ಯಾವುದೇ ಆಚರಣೆಗಳಲ್ಲಿ ಅವರ ಪ್ರವೇಶ ನಿಷಿದ್ಧವಾಗಿರುತ್ತದೆ. ಸಮುದಾಯದಲ್ಲಿ ನ್ಯಾಯಪಂಚಾಯ್ತಿಗಳು ಹೆಚ್ಚು ದಸರಾ, ಯುಗಾದಿ ಹಾಗೂ ದೀಪಾವಳಿ ಸಂದರ್ಭಗಳಲ್ಲಿ ನಡೆಯುತ್ತವೆ. ಕಟ್ಟೆಮನೆಗಳಲ್ಲಿ ಪ್ರತಿವರ್ಷ ಯುಗಾದಿ ಹಾಗೂ ದೀಪಾವಳಿ ಸಂದರ್ಭದಲ್ಲಿ ಸಭೆ ಸೇರಿ ಸಮುದಾಯದ ಧಾರ್ಮಿಕ ಆಚರಣೆಗಳ ಕುರಿತು ಚರ್ಚಿಸಲಾಗುತ್ತದೆ. ಜೊತೆಗೆ ಹಂಡಿಜೋಗಿ ಸಮುದಾಯದ ನೆಲೆಯಲ್ಲಿ ಹಬ್ಬಗಳು, ಜಾತ್ರೆ/ಉತ್ಸವ, ಧಾರ್ಮಿಕ ಆಚರಣೆಗಳನ್ನು ನಡೆಸಲು ಕಾಲೋನಿಯ (ನೆಲೆಯ) ಜನರು ಒಂದೆಡೆ ಸೇರಿ ತಮ್ಮ ನೆಲೆಯ ಹಿರಿಯ ಮುಖಂಡರ ಜೊತೆ ಚರ್ಚಿಸಿ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಿರುವ ಪದ್ದತಿಯನ್ನು ಈಗಲೂ ಕೆಲವು ನೆಲೆಗಳಲ್ಲಿ ಕಾಣಬಹುದಾಗಿದೆ. (ಬಿಷ್ಣಹಳ್ಳಿ, ದೇವರಹಳ್ಳಿ).

ಕಟ್ಟೆಮನೆಗಳಲ್ಲಿ ತೀರ್ಮಾನವಾಗುವ ನ್ಯಾಯಪಂಚಾಯ್ತಿಯ ಖರ್ಚುವೆಚ್ಚಗಳನ್ನು ಘಟನೆಗೆ ಸಂಬಂಧಿಸಿದವರು ನೀಡಬೇಕಾಗುತ್ತದೆ. ಸಮುದಾಯ ಸಂಬಂಧಿ ವಿಷಯ ಕುರಿತ ಚರ್ಚೆಗೆ

ಖರ್ಚುವೆಚ್ಚವನ್ನು ಸಂಗ್ರಹಿಸುವ ಪದ್ಧತಿ ಕಂಡುಬರುವುದಿಲ್ಲ. ಬಳ್ಳಾರಿ ಪ್ರದೇಶದಲ್ಲಿ ನೆಲೆಸಿರುವ ಹಂಡಿಜೋಗಿಗಳು ಈ ಕೆಳಗಿನ ತಮ್ಮ ಸಮುದಾಯದ ಕಟ್ಟೆಮನೆಗಳಲ್ಲಿ ನ್ಯಾಯ ತೀರ್ಮಾನಗಳನ್ನು ಮಾಡಿಕೊಳ್ಳುತ್ತಿರುವುದು ಕಂಡುಬರುತ್ತದೆ.

ಅವುಗಳೆಂದರೆ (ಬಳ್ಳಾರಿ ಪ್ರದೇಶಗಳಲ್ಲಿ)

ಹೊಸೂರು ಕಟ್ಟೆಮನೆ

ಹೊನ್ನಟ್ಟಿ ಕಟ್ಟೆಮನೆ

ಹರಾಳು ಕಟ್ಟೆಮನೆ

ಮತ್ತೀಹಳ್ಳಿ ಕಟ್ಟೆಮನೆ

ದೇವಗೊಂಡನಹಳ್ಳಿ ಕಟ್ಟೆಮನೆ

ನೀರ್ಲಿಗಿ ಕಟ್ಟೆಮನೆ,

ಚಿಕ್ಕಜೋಗಿಹಳ್ಳಿ ಕಟ್ಟೆಮನೆ

ಹೀಗೆ ಮೇಲಿನ ಕಟ್ಟೆಮನೆಗಳಲ್ಲಿ ಬಳ್ಳಾರಿ ಪ್ರದೇಶದಲ್ಲಿ ನೆಲೆಸಿರುವ ಹಂಡಿಜೋಗಿಗಳಲ್ಲದೆ ದಾವಣಗೆರೆ ಹಾಗೂ ಚಿತ್ರದುರ್ಗ ಪ್ರದೇಶಗಳಲ್ಲಿ ನೆಲೆಸಿರುವ ಹಂಡಿಜೋಗಿಗಳೂ ಸಹ ನ್ಯಾಯ ತೀರ್ಮಾನಗಳನ್ನು ಮಾಡಿಕೊಳ್ಳುತ್ತಿರುವುದು ಕಂಡುಬರುತ್ತದೆ.

ಹಂಡಿಜೋಗಿಗಳಲ್ಲಿ ನ್ಯಾಯ ತೀರ್ಮಾನದ ಸಂದರ್ಭಗಳಲ್ಲಿ ತಪ್ಪು ಮಾಡಿದವರಿಗೆ, ತಪ್ಪಿನ ಪ್ರಮಾಣಕ್ಕನುಗುಣವಾಗಿ ಶಿಕ್ಷೆ ಮತ್ತು ದಂಡವನ್ನು ವಿಧಿಸುವ ಪದ್ಧತಿ ಕಂಡುಬರುತ್ತದೆ. ಶಿಕ್ಷೆ ಮತ್ತು ದಂಡ ವಿಧಿಸಲು ಪ್ರಮುಖ ಕಾರಣವೇನೆಂದರೆ ಮುಂದೆ ಅಂತಹ ತಪ್ಪುಗಳನ್ನು ಸಮುದಾಯದ ಯಾರೊಬ್ಬರೂ ಮಾಡದಿರಲಿ ಎಂಬ ಎಚ್ಚರಿಕೆಯ ಉದ್ದೇಶದಿಂದ ದಂಡ ವಿಧಿಸಲಾಗುತ್ತದೆ. ಸಮುದಾಯದಲ್ಲಿ ವಿಧಿಸುವ ಅಂತಹ ಕೆಲವು ಶಿಕ್ಷೆ ಮತ್ತು ದಂಡದ ಪ್ರಮಾಣವನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

ಸಮುದಾಯದ ನ್ಯಾಯಪಂಚಾಯ್ತಿಯಲ್ಲಿ ವಿಧಿಸುವ ಶಿಕ್ಷೆ ತುಂಬಾ ಸರಳತೆಯಿಂದ ಕೂಡಿರುವುದು ಕಂಡುಬರುತ್ತದೆ. ದಂಡದ ಮೊತ್ತವೂ ಸಹ ತುಂಬಾ ಕಡಿಮೆ ಪ್ರಮಾಣದಲ್ಲಿರುವುದನ್ನು ಗುರುತಿಸಬಹುದಾಗಿದೆ.

* ನ್ಯಾಯಪಂಚಾಯ್ತಿಯ ಸಮ್ಮುಖದಲ್ಲಿ ಸುಳ್ಳು ಹೇಳಿದರೆ ಅಂತಹವರಿಗೆ ಆರು ರೂಪಾಯಿ ದಂಡವನ್ನು ವಿಧಿಸುತ್ತಾರೆ.
* ಸಮುದಾಯದಲ್ಲಿ ಯಾರಾದರೂ ಕಳ್ಳತನ ಮಾಡಿದರೆ, ಕಳ್ಳತನ ಮಾಡಿದವನಿಗೆ ೨೫ ರೂ ದಂಡದ ಜೊತೆಗೆ ಕಳ್ಳತನ ಮಾಡಿದ ವಸ್ತುವನ್ನು ಹಿಂತಿರುಗಿ ಪಡೆಯಲಾಗುತ್ತದೆ. ವಸ್ತು ಇಲ್ಲದಿದ್ದಾಗ ಕಳುವಾದ ವಸ್ತುವಿನ ಬೆಲೆಯನ್ನು ನಿಗದಿಪಡಿಸಿ ವಸೂಲಿ ಮಾಡಲಾಗುತ್ತದೆ.

ಒಮ್ಮೆ ಕಳ್ಳತನ ಮಾಡಿ ದಂಡವನ್ನು ಕಟ್ಟಿ ಪುನಃ ಕಳ್ಳತನಕ್ಕಿಳಿದರೆ ದಂಡದ ಪ್ರಮಾಣ ಅಧಿಕವಾಗುತ್ತದೆ. ಅಂತಹವನಿಂದ ೧೦೧ ರೂ. ದಂಡ ವಸೂಲಿ ಮಾಡುತ್ತಾರೆ.

* ಸಮುದಾಯದಲ್ಲಿ ಯಾರಾದರೂ ಅತ್ಯಾಚಾರ ಇಲ್ಲವೆ ವ್ಯಭಿಚಾರ ಮಾಡಿದರೆ ಅಂತಹವರಿಗೆ ೨೫೦ ರೂ. ದಂಡವನ್ನು ವಿಧಿಸಲಾಗುವುದು.

* ಸಮುದಾಯದಲ್ಲಿ ಯುವಕನು ಯವತಿಯ ತಂದೆಯ ಹಾಗೂ ಕುಟುಂಬದವರ ಅಪ್ಪಣೆಯಿಲ್ಲದೆ ಯುವತಿಯ ಜೊತೆಗೆ ಮದುವೆಯಾದರೆ ಅಂತಹವರಿಗೆ ೨೫೦ ರೂ. ದಂಡವಿದಿಸಿ, ಯುವಕನ ಕುಟುಂಬದವರ ಕಡೆಯಿಂದ ನ್ಯಾಯಪಂಚಾಯ್ತಿಯ ಖರ್ಚುವೆಚ್ಚವನ್ನು ಪಡೆಯಲಾಗುತ್ತದೆ.

* ಸಮುದಾಯದಲ್ಲಿ ವಿವಾಹಿತ ಪುರುಷನೊಬ್ಬನು ಮತ್ತೊಬ್ಬ ವಿವಾಹಿತ ಪುರುಷನ ಹೆಂಡತಿಯೊಡನೆ ಅನೈತಿಕ ಸಂಬಂಧವನ್ನು ಹೊಂದಿದ್ದರೆ, ಅಂತಹವರಿಂದ ೫೦೦ ರೂ. ದಂಡವನ್ನು ತೆಗೆದುಕೊಳ್ಳಲಾಗುವುದು.

* ಸಮುದಾಯದಲ್ಲಿ ನಡೆಯುವ ಆಂತರಿಕ ಜಗಳಗಳಲ್ಲಿ ಪರಸ್ಪರರು ಯಾವುದೇ ರೀತಿಯ ಉಪಕರಣಗಳನ್ನು ಹಿಡಿದು ಹೊಡೆದಾಡುವಂತಿಲ್ಲ. ಒಂದು ವೇಳೆ ಅಂತಹ ಉಪಕರಣಗಳನ್ನು ಬಳಸಿದರೆ ದಂಡ ವಿಧಿಸಲಾಗುತ್ತಿತ್ತು. ಪರಸ್ಪರ ಜಗಳದಲ್ಲಿ ಕೈಯಲ್ಲಿ ಕಟ್ಟಿಗೆ (ಕೋಲು) ಹಿಡಿದರೆ ಅವನಿಗೆ ೨೫ ರೂ. ದಂಡ, ಕಟ್ಟಿಗೆಯಿಂದ ಹೊಡೆದರೆ ೧೨ ರೂ. ದಂಡ 'ಚಪ್ಪಲಿ ತೆಗೆದುಕೊಂಡು ಹೊಡೆಯುತ್ತೇನೆ' ಎಂದು ಹೇಳಿದವನಿಗೆ ೦೫ರೂ ದಂಡ, ಚಪ್ಪಲಿಯಿಂದ ಹೊಡೆದರೆ ೨೮ ರೂ. ದಂಡ. ಹಾಗೆಯೇ ಸಮುದಾಯದಲ್ಲಿ ಚಪ್ಪಲಿಯಿಂದ ಹೊಡೆಸಿ ಕೊಂಡವನಿಂದಲೂ ಸಹ ೦೫ ರೂ ದಂಡವನ್ನು ವಸೂಲಿ ಮಾಡಲಾಗುತ್ತದೆ. ಇತ್ತೀಚಿಗೆ ಈ ಮಾದರಿಯ ದಂಡದ ಪ್ರಮಾಣ ಕಂಡುಬರುವುದಿಲ್ಲ.

* ನ್ಯಾಯಪಂಚಾಯ್ತಿಯ ದೈವಸ್ಥರ ಎದುರಿನಲ್ಲಿ ಅವಶ್ಯಕತೆಗಿಂತ ಹೆಚ್ಚು ಮಾತನಾಡಿದಲ್ಲಿ ಅಂತಹವರಿಗೆ ೧೨ ರೂ. ದಂಡ ವಿಧಿಸಲಾಗುತ್ತದೆ.

* ಹಂಡಿಜೋಗಿಗಳಲ್ಲಿ ಸಮುದಾಯದ ಯಾರಾದರೂ ಒಮ್ಮೆ ಜೈಲಿಗೆ ಹೋಗಿಬಂದರೆ, ಹಾಗೂ ಸಮುದಾಯದ ಕಟ್ಟೆಮನೆಗಳಲ್ಲಿ ದಂಡಕ್ಕೊಳಗಾಗಿ ಬಂದರೆ ಅಂತಹವರನ್ನು ಪುನಃ ಕುಲಕ್ಕೆ ಸೇರಿಸಿಕೊಳ್ಳಲು ಅವರಿಂದ ೧೦೧ ರೂ. ತಪ್ಪು ಕಾಣಿಕೆಯನ್ನು ಪಡೆದು ಅವರನ್ನು ಶುದ್ಧಗೊಳಿಸಿ ಕುಲಕ್ಕೆ ಸೇರಿಸಿಕೊಳ್ಳಲಾಗುವುದು. ಅಂದರೆ ಅಂತಹ ವ್ಯಕ್ತಿಗಳ ನಾಲಿಗೆಯನ್ನು ಬೇವಿನಕಡ್ಡಿ ಇಲ್ಲವೆ ಬಂಗಾರದ ತುಂಡಿನಿಂದ ನಾಲಿಗೆಗೆ ಸುಟ್ಟು ಅವರನ್ನು ಶುಧ್ಧಿಗೊಳಿಸಿ ಕುಲಕ್ಕೆ ಸೇರಿಸಿಕೊಳ್ಳುವುದಾಗಿ ಸಮುದಾಯದ ವಕ್ತೃಗಳು ವಿವರಿಸುತ್ತಾರೆ.

* ಸಮುದಾಯದಲ್ಲಿ ನ್ಯಾಯಪಂಚಾಯ್ತಿ ನಡೆಯುವ ಸಂದರ್ಭದಲ್ಲಿ ನ್ಯಾಯಪಂಚಾಯ್ತಿಯಲ್ಲಿ ಬರೀ ತಲೆಯಲ್ಲಿ ಕುಳಿತುಕೊಳ್ಳುವಂತಿಲ್ಲ. ನಂತರ ನ್ಯಾಯಪಂಚಾಯ್ತಿಯಿಂದ ಮಧ್ಯದಲ್ಲಿ

ಎದ್ದುಹೋಗುವಂತಿಲ್ಲ. ಒಂದು ವೇಳೆ ಹೋಗಲೇಬೇಕಾದ ಅನಿವಾರ್ಯತೆ ಇದ್ದರೆ ನ್ಯಾಯ ಪಂಚಾಯ್ತಿಯಲ್ಲಿ ನೆರೆದಿದ್ದ ಸಮುದಾಯದ ಕುಲದೈವಸ್ಥರಿಗೆ ಹಾಗೂ ನ್ಯಾಯಪಂಚಾಯ್ತಿ ಮಂಡಲಕ್ಕೆ ಆದೇಶ್, ಆದೇಶ್, ಆದೇಶ್ ಎಂದು ನಮಸ್ಕರಿಸಿ ಹೋಗತಕ್ಕದ್ದು. ಇಲ್ಲವಾದರೆ ೦೫ ರೂ. ದಂಡ ವಿಧಿಸಲಾಗುವುದು.

* ಸಮುದಾಯದಲ್ಲಿ ಕುಲಸ್ಥರು, ಬಂಧುಗಳೆಲ್ಲರೂ ನಿಶ್ಚಯಿಸಿ ಎಲ್ಲರೂ ಸೇರಿ ಮದುವೆ ಕಾರ್ಯವನ್ನು ಮಾಡುವ ಸಂದರ್ಭದಲ್ಲಿ ಗಂಡು ಹೆಣ್ಣು ಇವರಿಗೆ ಎದುರಾಗಿ ಗುರು ಸಿಂಹಾಸನಕ್ಕೆ ಹೋಗಿ ತಾಳಿಕಟ್ಟಿಕೊಂಡು ಬಂದರೆ, ಅಂತಹವರನ್ನು ಮುಂದೆ ತಮ್ಮ ಕುಲಕ್ಕೆ ಸೇರಿಸಿಕೊಳ್ಳುವುದಿಲ್ಲ. ಕುಲದ ದೈವಸ್ಥರು ಅವರನ್ನು ಕುಲದಿಂದ ಬಹಿಷ್ಕಾರ ಹಾಕುತ್ತಾರೆ.

ಇವರಿಬ್ಬರೂ ಮುಂದೆ ಕುಲಕ್ಕೆ ಸೇರುವ ಇಚ್ಛೆಯನ್ನು ವ್ಯಕ್ತಪಡಿಸಿದರೆ ಅವರನ್ನು ಸಮುದಾಯದ ಐದು ಕಟ್ಟೆಮನೆ ಕುಲದೈವಸ್ಥರ ಸಮ್ಮುಖದಲ್ಲಿ ನ್ಯಾಯಪಂಚಾಯ್ತಿಗೆ ಆಹ್ವಾನಿಸುತ್ತಾರೆ. ಅವರಿಂದ ನಿಗಧಿತ ರೂಪದಲ್ಲಿ ದಂಡವನ್ನು ಪಡೆಯುವುದರ ಜೊತೆಗೆ ಸಮುದಾಯದ ಐದು ಕಟ್ಟೆಮನೆಗಳ ಕುಲ ಮಂಡಳಿಯವರಿಗೆಲ್ಲಾ ನ್ಯಾಯಪಂಚಾಯ್ತಿಗೆ ಬಂದು ಹೋಗುವ ಎಲ್ಲಾ ಖರ್ಚು ವೆಚ್ಚಗಳನ್ನು ಭರಿಸಬೇಕಾಗುತ್ತದೆ. ಇವರು ಕುಲದೈವಸ್ಥರ ತೀರ್ಮಾನಕ್ಕೆ ಬದ್ಧವಾಗಿದ್ದೇವೆ ಎಂದು ಹೇಳಿದಾಗ ಮಾತ್ರ ನ್ಯಾಯ ತೀರ್ಮಾನ ಮಾಡಲಾಗುತ್ತದೆ. ಹೀಗೆ ಅವರಿಗೆ ಕುಲಕ್ಕೆ ಪ್ರವೇಶ ನೀಡಿದರೂ ಸಹ ಸಮುದಾಯದ ಧಾರ್ಮಿಕ, ಸಾಂಸ್ಕೃತಿಕ ಆಚರಣೆಗಳಲ್ಲಿ ಇವರಿಗೆ ನಿಷೇಧವಿರುತ್ತದೆ. ಇವರಿಬ್ಬರೂ ಯಾವುದೇ ಗದ್ದುಗೆಯ ಮೇಲೆ ಕೂಡುವಂತಿಲ್ಲ. ನಂತರ ಕಳಸ ಹಿಡಿಯುವುದೂ ಸಹ ಇವರಿಗೆ ನಿಷೇಧವಾಗಿರುತ್ತದೆ.

* ಹೆಣ್ಣಿನ ಮನೆಯ ಹುಡುಗಿ ಮದುವೆಯಾಗುವುದಾಗಿ ಮಾತು ಕೊಟ್ಟ ನಂತರ ಮದುವೆಗೆ ತಿರಸ್ಕರಿಸಿದರೆ ಆ ಹೆಣ್ಣಿನ ಮನೆಯವರಿಂದ ೩೧ ರೂ. ದಂಡ ಪಡೆಯುವುದೊಂದಿಗೆ, ಅವರಿಂದ (ಉಂಬರ್‌ಬಾಟ್) ಹೊಸಲಿ ಬಾಪ್ತು ಕೊಡಬೇಕಾಗುತ್ತದೆ.

* ಹಂಡಿಜೋಗಿಗಳಲ್ಲಿ ಬೇರೆ ಜಾತಿಯ ಹೆಣ್ಣನ್ನು ಮದುವೆಯಾಗಿ ಬಂದರೆ ಅಂತಹ ಹುಡುಗರಿಗೆ ೧೦೦೧ ರೂ. ದಂಡ ವಿಧಿಸಿ ಸಮುದಾಯದ ದೈವಸ್ಥರು 'ಕುಲದೀಕ್ಷೆ' ಮಾಡುವ ಮುಖಾಂತರ ಕುಲಕ್ಕೆ ಸೇರಿಸಿಕೊಳ್ಳುತ್ತಾರೆ.

* ಅನ್ಯ ಜಾತಿಯ ಹೆಣ್ಣನ್ನು ಮದುವೆಯಾದ ಸಮುದಾಯದ ಹುಡುಗನಿಗೆ ೧೦೦೧ ರೂ. ದಂಡವಿಧಿಸಿ ಅವರಿಂದ ಒಂದು ಕುರಿ (ಬ್ಯಾಟೆ) ತಂದು ದೈವಸ್ಥರೆಲ್ಲರಿಗೂ ಆಗುವಷ್ಟು ಆಹಾರದ ವ್ಯವಸ್ಥೆ ಮಾಡಬೇಕು. ಊಟವಾದ ಬಳಿಕ ಕುಲದ ದೈವಸ್ಥರೆಲ್ಲರು ಸೇರಿ ಆ ಹುಡುಗ ಮತ್ತು ಹುಡುಗಿಯನ್ನು ಕಕ್ಕೆ ಗಿಡಕ್ಕೆ ಕರೆದುಕೊಂಡು ಹೋಗಿ ದಳವಾಯಿಯು ಐದು ಚೆಂಬು ನೀರನ್ನು ಹಾಕುತ್ತಾನೆ.

* ನಂತರ ಆ ಹುಡುಗ ಹುಡುಗಿಯ ಕೈಯಿಂದ ಕಕ್ಕೆ ಗಿಡಕ್ಕೆ ದಾರವನ್ನು ಕಟ್ಟಿಸಿ ಐದು ಎಲೆ,

ಐದು ಅಡಿಕೆ, ಜೊತೆಗೆ ಊದುಕಡ್ಡಿ ಬೆಳಗಿ ಪೂಜೆ ಸಲ್ಲಿಸಿ ತೆಂಗಿನ ಕಾಯಿಯನ್ನು ಹೊಡೆದು ಹುಡುಗ ಮತ್ತು ಹುಡುಗಿ ಇಬ್ಬರೂ ಐದು ಸುತ್ತು ಸುತ್ತಬೇಕು.

ಇದಾದನಂತರ ಹುಡುಗಿಯನ್ನು ಮನೆಗೆ ಕರೆದುಕೊಂಡು ಹೋಗಿ ಕೈಕಾಲುಗಳನ್ನು ತೊಳೆಸಿ ಗಂಡನನ್ನು ಮನೆಯೊಳಗೆ ಕರೆದುಕೊಂಡು ಹೋಗಲು ದಳವಾಯಿ ಹೇಳುತ್ತಾನೆ. ಹೀಗೆ ಹೆಣ್ಣನ್ನು ಮನೆತುಂಬಿಸಿಕೊಳ್ಳಲಾಗುತ್ತದೆ.

ಸಮುದಾಯದ ಹೆಣ್ಣು ಅನ್ಯಜಾತಿಯ ಹುಡುಗನನ್ನು ವಿವಾಹವಾದರೆ ಮೇಲಿನ ಕ್ರಮದಲ್ಲಿಯೇ ಕುಲದೀಕ್ಷೆ ಮಾಡಿ ಜೋಗಿ ಮಂಡಲಕ್ಕೆ ಸೇರಿಸಿಕೊಳ್ಳಲಾಗುತ್ತದೆ.

ಹಂಡಿಜೋಗಿ ಸಮುದಾಯದಲ್ಲಿ ಸಹೋದರತ್ವ ಮತ್ತು ಬ್ರಾತೃತ್ವದಲ್ಲಿ ವಿವಾಹ ಸಂಬಂಧ ನಿಷಿದ್ಧವಾಗಿರುತ್ತದೆ. ಸಮುದಾಯದಲ್ಲಿ ಹಾಗೊಂದು ವೇಳೆ ಅಣ್ಣ-ತಂಗಿ, ಅಪ್ಪ-ಮಗಳು, ತಾಯಿ-ಮಗ ಸಂಬಂಧಗಳು (ನಡೆದರೆ) ಕಂಡು ಬಂದರೆ ಅಂತಹವರಿಗೆ ಇಡೀ ಜೀವಮಾನದಲ್ಲಿ ಅವರಿಗೆ ಕುಲದಲ್ಲಿ ಜಾಗವಿರುವುದಿಲ್ಲ (ಪ್ರವೇಶವಿರುವುದಿಲ್ಲ) ಜೊತೆಗೆ ಇದಕ್ಕೆ ಯಾವುದೇ ದಂಡವಿಲ್ಲ, ದೋಷವಿಲ್ಲ ಕುಲಮಂಡಳಿಯವರು ಅಜೀವನಪರ್ಯಂತನ ಬಹಿಷ್ಕಾರ ಹಾಕುತ್ತಾರೆ. ಅಲ್ಲದೆ ತಮ್ಮ ಕುಲದವರಾರೂ ಇವರನ್ನು ಊರಲ್ಲಿ ಸೇರಿಸಿಕೊಳ್ಳುವುದಿಲ್ಲ. (ಬಿಟ್ಟುಕೊಳ್ಳುವುದಿಲ್ಲ) ಸಮುದಾಯದಲ್ಲಿ (ಊರಲ್ಲಿ) ಇವರ ಮನೆಯೇನಾದರೂ ಇದ್ದರೆ ಆ ಮನೆಯ ಸುತ್ತ ಕಳ್ಳೆ ಬೇಲಿಯನ್ನು ಸುತ್ತುತ್ತಾರೆ. ಸಮುದಾಯದ ಸಾಂಪ್ರದಾಯಿಕ ಆಚರಣೆಗಳಲ್ಲಿ ಇವರ ಪ್ರವೇಶ ನಿಷಿದ್ಧವಾಗಿರುತ್ತದೆ. ಇದು ಜೋಗಿಮಂಡಳದ ಕಟ್ಟಾಜ್ಞೆಯಾಗಿರುತ್ತದೆ.

ಈ ಮಾದರಿಯ ಸಂಬಂಧಗಳು ಸಮುದಾಯದಲ್ಲಿ ಕಂಡುಬರುವುದಿಲ್ಲ. ಇಂತಹ ಸಂಬಂಧಗಳ ಕುರಿತ ಸಮುದಾಯದಲ್ಲಿರುವ ಒಂದು ಆಚರಣೆಯನ್ನು ಉದಾಹರಣೆಯ ಮುಖಾಂತರ ಸಮುದಾಯದ ವಕ್ತೃಗಳು ಈ ಕೆಳಗಿನಂತೆ ವಿವರಿಸುತ್ತಾರೆ.

ಉದಾ. ಚಿಕ್ಕಪ್ಪ ಮತ್ತು ಮಗಳು ವಿವಾಹವಾದಂತಹ ಸಂದರ್ಭದಲ್ಲಿ ಗಂಡು ಹೆಣ್ಣನ್ನು ಬಿಟ್ಟು ಕುಲ ಸೇರುತ್ತೇನೆ ಎಂದು ಬಂದಾಗ ಐದು ಕಟ್ಟೆಮನೆಯವರೆಲ್ಲರೂ ಸೇರಿ ನ್ಯಾಯಪಂಚಾಯ್ತಿ ಮಾಡಿ ಒಂದು ತೀರ್ಮಾನಕ್ಕೆ ಬರುತ್ತಾರೆ. ಕುಲದೈವಸ್ಥರು ಪಂಚಾಯ್ತಿಗೆ ಅವನನ್ನು ಕರೆಸಿ ಅವನಿಗೆ ತಲೆಬೋಳಿಸಲು ಸಮುದಾಯದವರಿಗೆ ಸೂಚಿಸುತ್ತಾರೆ. ಹೀಗೆ ಅವನಿಗೆ ತಲೆಬೋಳಿಸಿಕೊಂಡು ಅಡವಿಗೆ ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಮೂರು ಕಾಲಿನ ಜೋಪಡಿ (ಗುಡಿಸಲು) ಕಟ್ಟಿಸಿ ಅದರಲ್ಲಿ ಅವನನ್ನು ಕೂಡಿಸಿ ಅಲ್ಲಿಂದ ಹೊರ ಹೋಗುವಂತೆ ಹೇಳಿ, ಹೀಗೆಯೇ ಏಳು ಗುಡಿಸಲು ತಡಾಯಿಸುತ್ತ, ಅವುಗಳಿಗೆ ಒಂದೊಂದಾಗಿ ಬೆಂಕಿ ಇಡುತ್ತ ಬರುತ್ತಾರೆ. ಇದಾದ ನಂತರ ಬೇವಿನಕಡ್ಡಿ ಮತ್ತು ಬಂಗಾರದ ತಂತಿಯಿಂದ (ಶುಂಡಿನಿಂದ) ಅವನ ನಾಲಿಗೆಯನ್ನು ಸುಟ್ಟು ಶುದ್ಧೀಕರಿಸುತ್ತಾರೆ. ನಂತರ ಊರಿಗೆ ಬಂದಾಗ ತೀರ್ಥ ಹಾಕುತ್ತಾರೆ. ಕುಲದ ದೈವಸ್ಥರು ಕೇಳಿದ ದಂಡ ೨೫ ರೂ. ನೀಡಬೇಕಾಗುತ್ತದೆ. ಇಂದು ಈ ದಂಡದ ಮೊತ್ತ ೩೦೦೧ ರೂ. ಆಗಿರುತ್ತದೆ.

ಇದರ ಜೊತೆಗೆ ಒಂದು ಕುರಿ ಮತ್ತು ಅದರ ಭತ್ಯೆಯನ್ನು ನೀಡಿ ಅವರಿಂದ ಕುಲದ ದೈವಸ್ಥರಿಗೆ ಮಾಂಸಹಾರದ ಊಟವನ್ನು ಮಾಡಿಸಬೇಕಾಗುತ್ತದೆ.

* ಸಮುದಾಯದ ಒಂದು ಕುಲದಲ್ಲಿ ಹೆಣ್ಣು ಗೊತ್ತು ಮಾಡಿ ಮುಂದೆ ಗೊತ್ತು ಮಾಡಿದವರನ್ನು ಬಿಟ್ಟು ಬೇರೆಯವರ ಜೊತೆ ಲಗ್ನ ಮಾಡಿದರೆ ಕುಲದ ದೈವಸ್ಥರೆಲ್ಲರೂ ಸೇರಿ ಅವರಿಗೆ (ಕುಟುಂಬದವರಿಗೆ) ೪೮ ರೂ. ದಂಡ ವಿಧಿಸಲಾಗುತ್ತಿತ್ತು.

* ಸಮುದಾಯದಲ್ಲಿ ಜೋಗಿಯೊಬ್ಬ ಮತ್ತೊಬ್ಬ ಜೋಗಿಯನ್ನು ಬಯ್ಯುವುದು ಮತ್ತು ಹೊಡೆಯುವುದು ಮಾಡಿದರೆ ಅಂತಹ ವ್ಯಕ್ತಿಗಳು ೧೫ ರಿಂದ ೨೫ ರೂ. ದಂಡವನ್ನು ಗುರುಮಠಕ್ಕೆ ನೀಡಬೇಕು.
* ಸಮುದಾಯದಲ್ಲಿ ಕುಲದೈವಸ್ಥರು ಹಿರಿಯರು ನಿಶ್ಚಯಿಸಿದ ಮದುವೆಗಳಲ್ಲಿ ಹೆಣ್ಣಾಗಲಿ– ಗಂಡಾಗಲಿ ಹೆಣ್ಣಿನ ಮನೆಯವರಾಗಲಿ, ಗಂಡಿನ ಮನೆಯವರಾಗಲಿ ತಿರುಗಿ ಬಿದ್ದರೆ ದೈವಸ್ಥರು ದಂಡ ವಿಧಿಸುವ ಪದ್ಧತಿ ರೂಢಿಯಲ್ಲಿತ್ತು.
* ಹೆಣ್ಣಿನ ಮನೆಯವರು ಹೆಣ್ಣನ್ನು ಕೊಡುತ್ತೇವೆ ಎಂದು ಮಾತುಕೊಟ್ಟು ಕೊಡದೇ ಇದ್ದ ಸಂದರ್ಭದಲ್ಲಿ ಅವರಿಗೆ ಕುಲದ ದೈವಸ್ಥರು ೨೫ ರೂ. ದಂಡ ವಿಧಿಸುತ್ತಿದ್ದರು. ಈಗಿನ ಮೊತ್ತ ೧೦೧ ರೂ. ಆಗಿದೆ.
* ಗಂಡು ಮದುವೆಯಾಗುತ್ತೇನೆ ಎಂದು ಹೇಳಿ ನಂತರ ಮದುವೆಯಾಗದಿದ್ದರೆ ಅವರಿಗೆ ಕುಲಸ್ಥರು ೫೦ ರೂ. ಹಿಂದೆ ದಂಡ ವಿಧಿಸುತ್ತಿದ್ದರು. ಈಗ ಸಮುದಾಯದಲ್ಲಿ ಈ ದಂಡವನ್ನು ೫೦೧ ರೂ.ಗೆ ಹೆಚ್ಚಿಸಲಾಗಿದೆ.

ಹೀಗೆ ಬುಡಕಟ್ಟು ಸಮುದಾಯವೊಂದು ನಮ್ಮ ಲೋಕದೃಷ್ಟಿಗೆ ಸಂಬಂಧಿಸಿದಂತೆ ತಮ್ಮದೇ ಆದಂತಹ ಕಟ್ಟುಪಾಡುಗಳನ್ನು ನಿರ್ಮಿಸಿಕೊಂಡಿರುವುದು ಕಂಡುಬರುತ್ತದೆ. ಸಮುದಾಯದ ಕಟ್ಟುಪಾಡುಗಳೊಂದಿಗೆ ಪರಸ್ಪರರಲ್ಲಿ ಉತ್ತಮ ಬಾಂಧವ್ಯವನ್ನು ಮೂಡಿಸುವಂತಹ ಕೆಲಸಗಳನ್ನು ಸಮುದಾಯದ ಒಳಾಡಳಿತ ವ್ಯವಸ್ಥೆಯ ಮುಖಾಂತರ ಮಾಡುತ್ತಿರುವುದನ್ನು ಗುರುತಿಸಬಹುದಾಗಿದೆ.



ಅಧ್ಯಾಯ ನಾಲ್ಕು

# ಹಂಡಿಜೋಗಿಗಳ ಸಾಂಸ್ಕೃತಿಕ ಆಚರಣೆಗಳು ಮತ್ತು ಭಾಷೆ

# ಅಧ್ಯಾಯ: ನಾಲ್ಕು

# ಹಂಡಿಜೋಗಿ ಸಮುದಾಯದ ಸಾಂಸ್ಕೃತಿಕ ಆಚರಣೆಗಳು ಮತ್ತು ಭಾಷೆ

ಅಲೆಮಾರಿ ಬುಡಕಟ್ಟು ಸಮುದಾಯಕ್ಕೆ ಸೇರಿದ ಹಂಡಿಜೋಗಿಗಳು ತಮ್ಮದೇ ಆದಂತಹ ಸಾಂಸ್ಕೃತಿಕ ಅನನ್ಯತೆಯನ್ನು ಹೊಂದಿದ್ದಾರೆ. ಸಮುದಾಯದಲ್ಲಿನ ಅನೇಕ ನಂಬಿಕೆ, ಆಚರಣೆ ಸಂಪ್ರದಾಯಗಳನ್ನು ಇಂದಿಗೂ ಆಚರಿಸಲಾಗುತ್ತದೆ. ತಮ್ಮ ವೃತ್ತಿ ಕುಲದೈವಗಳ ಆರಾಧನೆಗೆ ಸಂಬಂಧಿಸಿದಂತೆ ಅನೇಕ ಆಚರಣೆಗಳನ್ನು ಇಂದಿಗೂ ರೂಢಿಸಿಕೊಂಡು ಬಂದಿದ್ದಾರೆ. ಅಂತಹ ಸಮುದಾಯದಲ್ಲಿನ ಸಾಂಸ್ಕೃತಿಕ ಆಚರಣೆಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

## ೪.೧. ವ್ಯಕ್ತಿ ಸಂಬಂಧಿ ಆಚರಣೆಗಳು

**ಜನನ:** ಗರ್ಭಿಣಿ ಸ್ತ್ರೀಯರಿಗೆ ಹೆರಿಗೆಗೆ ಹಿಂದೆ ತಮ್ಮ ನೆಲೆಯ ಸಮೀಪದಲ್ಲಿ ಯಾವುದೇ ಆಸ್ಪತ್ರೆಗಳು ಇರಲಿಲ್ಲ. ಹಾಗಾಗಿ ಸಮುದಾಯದೊಳಗಿನ ದಾಯಿಗಳು ಅಂದರೆ ವಯಸ್ಸಾದ ಹೆಂಗಸರು ಹೆರಿಗೆ ಮಾಡಿಸುತ್ತಿದ್ದರು. ಗರ್ಭಿಣಿಯ ನಾಡಿ ನೋಡಿ ಇಷ್ಟು ಗಂಟೆಯ ಒಳಗೆ ಹೆರಿಗೆಯಾಗುತ್ತದೆ ಎಂದು ಸ್ಪಷ್ಟವಾಗಿ ಹೇಳುತ್ತಿದ್ದರು. ಹೆರಿಗೆ ಚೆನ್ನಾಗಿ ಆಗಲು ಅಳ್ಳಿ ಗಿಡದ ರಸವನ್ನು ತೆಗೆದು ಕುಡಿಸುತ್ತಿದ್ದರು. ಜೊತೆಗೆ ಒಂದು ಚಮಚ ಕಹಿ ಬೇವಿನ ಎಣ್ಣೆಯನ್ನು ಕುಡಿಸುತ್ತಿದ್ದರು. ಹೆರಿಗೆಯಾದ ನಂತರ ತಾಯಿ ಮಗುವಿಗೆ ಮೈತೊಳೆಯುವರು. ಬಾಣಂತಿಗೆ ಉಷ್ಣ ಪದಾರ್ಥಗಳನ್ನೇ ಹೆಚ್ಚಾಗಿ ಊಟಕ್ಕೆ ಕೊಡುವರು. ಹಂಡಿಜೋಗಿಗಳಲ್ಲಿ ಮಗು ಹುಟ್ಟಿದಾಗ ಐದು ದಿನದ ಸೂತಕ (ಒಲೆಮನೆ) ಮಗುವನ್ನು ಹನ್ನೊಂದು ದಿನ ಮೊರದಲ್ಲಿ ಇಡುತ್ತಾರೆ. ಹೆರಿಗೆಯಾದ ಐದು ದಿನಕ್ಕೆ ಮನೆಗೆ ಸುಣ್ಣ ಬಳಿಯುವರು ಮನೆಯನ್ನು ಗೋಮೂತ್ರದಿಂದ ಶುದ್ಧಿಗೊಳಿಸುತ್ತಿದ್ದರು. ಜೊತೆಗೆ ತಾಯಿ ಮಗುವಿಗೆ ಸ್ನಾನ ಮಾಡಿ ಗುಡಿಗೆ ಹೋಗಿ ಪೂಜೆ ಸಲ್ಲಿಸುವರು. ಸೂತಕ ದಾಟುವವರೆಗೇ ಬಾಣಂತಿಯ ಮನೆಗೆ ಯಾರೂ ಬರಬಾರದು. ಆ ಮನೆಯವರು ಬೇರೆಯವರ ಮನೆಗೆ ಹೋಗುವುದಿಲ್ಲ. ಬೇರೆಯವರು ಮಗುವನ್ನು ನೋಡಬೇಕೆಂದರೆ ಹೊರಗೆ ತಂದು ತೋರಿಸುವರು. ಅವರನ್ನು ಒಳಗೆ ಬಿಡುವುದಿಲ್ಲ.

**ಬಾಣಂತನ**

ಹಂಡಿಜೋಗಿಗಳಲ್ಲಿ ಹೆರಿಗೆಯಾದ ಬಾಣಂತಿಯ ಶಾರೀರಿಕತೆ (ದೈಹಿಕ ಸದೃಢತೆ)ಗೆ ಸಂಬಂಧಿಸಿದಂತೆ ಅವರ ದೈನಂದಿನ ಆಹಾರ ವಿಧಾನವನ್ನು ಕುರಿತು ವಿಶೇಷ ಕಾಳಜಿಯನ್ನು ವಹಿಸಲಾಗುತ್ತದೆ. ಬಾಣಂತಿಗೆ ಮೂರು ತಿಂಗಳು ಅಥವಾ ಆರು ತಿಂಗಳು ಆಹಾರ ಸೇವನೆಯಲ್ಲಿ ಕೆಲವು ನಿಯಮವಿರುತ್ತದೆ. ಹೆರಿಗೆಯಾದ ಬಾಣಂತಿಗೆ ಹೆಚ್ಚು ರಕ್ತಸ್ರಾವವಾದ್ದರಿಂದ ದೈಹಿಕವಾಗಿ ಹೆಚ್ಚು ನಿಶ್ಯಕ್ತಳಾಗಿರುತ್ತಾಳೆ. ಹಾಗಾಗಿ ಈ ಸಂದರ್ಭದಲ್ಲಿ ಕೊಬ್ಬರಿ, ಉತ್ತುತ್ತಿ, ಯಾಲಕ್ಕಿ ಜಾಯ್‌ಕಾಯಿ ಇತ್ಯಾದಿಗಳಿಂದ ಕೂಡಿದ ಆಹಾರವನ್ನು ಸಿದ್ಧಪಡಿಸಿ ಅವನ್ನು ತುಪ್ಪದಲ್ಲಿ ಬೆರೆಸಿ ಬಾಣಂತಿಗೆ ತಿನ್ನಲು ಕೊಡುತ್ತಾರೆ.

**ಆಹಾರ ಕ್ರಮ**

ಬಾಣಂತಿಯ ಆಹಾರ ಕ್ರಮದಲ್ಲಿ ಕೆಲವು ಆಹಾರದ ಸೇವನೆಯು ನಿಷಿದ್ಧವಾಗಿರುತ್ತದೆ. ಹೆಚ್ಚು ಉಪ್ಪು, ಕಾರ (ಖಾರ)ದಿಂದ ಕೂಡಿದ ಆಹಾರವನ್ನು ಸೇವಿಸುವಂತಿಲ್ಲ. ಬಿಸಿ ಮುದ್ದೆ ಸಪ್ಪೆ ಸಾಂಬಾರು ಊಟ ಮಾಡಬೇಕು. ಬಾಣಂತಿಯು ಹಣ್ಣು, ತರಕಾರಿ, ಸೊಪ್ಪು ಇತ್ಯಾದಿ ಪದಾರ್ಥಗಳನ್ನು ಸೇವಿಸಿದರೆ ಮೊಲೆಹಾಲು ಕುಡಿಯುವ ಮಗುವಿಗೆ ಅಜೀರ್ಣವಾಗುತ್ತದೆಂದು ಇವುಗಳನ್ನು ನೀಡುವುದಿಲ್ಲ. ಬದಲಾಗಿ ಬೇಳೆಯನ್ನು ನೀರಿನಲ್ಲಿ ಬೇಯಿಸಿ, ಆ ನೀರಿಗೆ ಒಣ ಮೆಣಸಿನಕಾಯಿ, ಹುಣಸೆಹಣ್ಣು, ಬೆಳ್ಳುಳ್ಳಿ, ಕರಿಮೆಣಸು ಕಾಳು, ಒಂದಿಷ್ಟು ಬೇಯಿಸಿದ ಬೇಳೆ, ಸ್ವಲ್ಪ ಸೊಪ್ಪನ್ನು ಹಾಕಿ ಚೆನ್ನಾಗಿ ಅರೆದು ಖಾರವನ್ನು ಬೆರೆಸಿ, ಅದರ ಜೊತೆಗೆ ಮುದ್ದೆಯನ್ನು ಊಟ ಮಾಡಲು ನೀಡುತ್ತಾರೆ. ವಾರಕ್ಕೊಮ್ಮೆ ಜೀರಿಗೆ, ಮೆಣಸು, ಕೊತ್ತಂಬರಿ ಬೀಜ (ದನಿಯಾ) ಮೆಣಸಿನಕಾಯಿ ಚೂರು, ತೆಂಗಿನಕಾಯಿ (ನಾರೋಳ್) ಇತ್ಯಾದಿಗಳನ್ನು ಸೇರಿಸಿ ಚೆನ್ನಾಗಿ ಒಗ್ಗರಣೆ ಹಾಕಿ ಸಾಂಬಾರು ತಯಾರಿಸಿ ಕೊಡುತ್ತಾರೆ. ರುಚಿ ರುಚಿಯಾದ ಆಹಾರದ ಸೇವನೆ ಇರುವುದಿಲ್ಲ. ಪ್ರತೀ ಸಲ ಕುಡಿಯಲು ಬೆಚ್ಚಗಿನ ನೀರನ್ನು ಬಳಸಬೇಕು. ಸಪ್ಪೆ ಆಹಾರ ಸೇವನೆ ಇದು ಮಗುವಿನ ಆರೋಗ್ಯ ದೃಷ್ಟಿಯಿಂದ ಬಾಣಂತಿಯು ಆಹಾರ ಸೇವನೆಯಲ್ಲಿ ವಹಿಸಬೇಕಾದ ಎಚ್ಚರಿಕೆಯಾಗಿರುತ್ತದೆ ಎಂದು ಸಮುದಾಯದ ಹಿರಿಯ ಮಹಿಳೆಯರು ವಿವರಿಸುತ್ತಾರೆ.

**ನಾಮಕರಣ**

ಹಂಡಿಜೋಗಿಗಳಲ್ಲಿ ನಾಮಕರಣಶಾಸ್ತ್ರವನ್ನು ಮಗು ಹುಟ್ಟಿದ ಮೂರು, ಐದು, ಅಥವಾ ಒಂಭತ್ತನೇ ದಿನದಲ್ಲಿ ಮಾಡುತ್ತಾರೆ. ಅಂದೇ ಮಗುವಿನ ತೊಟ್ಟಿಲು ಶಾಸ್ತ್ರವನ್ನು ಸಹ ಮಾಡಲಾಗುತ್ತದೆ. ಇತ್ತೀಚೆಗೆ ಸಮುದಾಯದಲ್ಲಿ ಒಂದು ವರ್ಷ ತುಂಬುವುದರೊಳಗಾಗಿ ನಾಮಕರಣ ಶಾಸ್ತ್ರ ಮಾಡುವ ಪದ್ಧತಿ ರೂಢಿಯಲ್ಲಿರುವುದನ್ನು ಕಾಣಬಹುದಾಗಿದೆ. ಮಗು ಹುಟ್ಟಿದ ಮೂರನೇ ದಿನದಂದು ತಾಯಿಯನ್ನು ನೀರಿರುವ ಜಾಗಕ್ಕೆ ಅಂದರೆ ಊರಿನಲ್ಲಿರುವ ನಳ (ನಲ್ಲಿ) ಬಾವಿ ಅಥವಾ ಬೋರ್‌ವೆಲ್ ಹತ್ತಿರ ಕರೆದುಕೊಂಡು ಹೋಗಿ ಗಂಗೆ ಪೂಜೆಯನ್ನು ಮಾಡಲಾಗುತ್ತದೆ. ಈ ಸಂದರ್ಭದಲ್ಲಿ ಬಾಣಂತಿಗೆ (ಮಗುವಿನ ತಾಯಿ) ಎಲೆ, ಅಡಿಕೆ, ಅನ್ನ ಬೇಯಿಸಿದ ಕಾಳು

(ಗುಗ್ಗರಿ)ಗಳನ್ನು ಉಡಿ ತುಂಬಿ ಒಂದು ಕುಂಭದ ಜೊತೆಗೆ (ಕೊಡ) ಪೂಜೆಯನ್ನು ಮಾಡಿ ಮನೆಗೆ ಕರೆದುಕೊಂಡು ಬರಲಾಗುತ್ತದೆ. ಗಂಗೆ ಪೂಜೆ ಮಾಡಿಕೊಂಡು ಬಂದ ತಾಯಿಯ ತೊಡೆಯ ಮೇಲೆ ಮಗುವನ್ನು ಕೂಡಿಸಿ ಪೂಜೆ ಮಾಡಿ ಮಗುವಿಗೆ ತಮ್ಮ ಮನೆ ದೈವಗಳ ಹೆಸರನ್ನು ಇಡುವ ಪದ್ಧತಿ ಸಮುದಾಯದಲ್ಲಿ ರೂಢಿಯಲ್ಲಿರುವುದನ್ನು ಕಾಣಬಹುದಾಗಿದೆ. ಸಮುದಾಯದಲ್ಲಿ ಮಂಗಳವಾರ ಹಾಗೂ ಶುಕ್ರವಾರ ಹೆಣ್ಣುಮಗು ಜನಿಸಿ ಅವಳಿಗೆ ಯಲ್ಲಮ್ಮ, ಹುಲಿಗೆಮ್ಮ, ಲಕ್ಷ್ಮಿ, ರೇಣುಕಮ್ಮ ಎಂದು ಹೆಸರಿಡುವ ಪದ್ದತಿ ಸಮುದಾಯದಲ್ಲಿ ರೂಢಿಯಲ್ಲಿದೆ ಎಂದು ಹಂಡಿಜೋಗಿ ಸಮುದಾಯದ ಹಿರಿಯ ತಲೆಮಾರಿನ ಮಹಿಳೆಯರು ವಿವರಿಸುತ್ತಾರೆ.

ಇನ್ನು ಸಮುದಾಯದಲ್ಲಿ ಜನಿಸಿದ ಗಂಡುಮಕ್ಕಳಿಗೆ ತಮ್ಮ ಸಮುದಾಯದ ಕುಲದೈವವಾದ ನುಂಕೆಮಲೆ ಸಿದ್ದೇಶ್ವರ ದೈವದ ಹೆಸರನ್ನು ನಾಮಕರಣ ಮಾಡುತ್ತಾರೆ. ಸಿದ್ದಪ್ಪ, ಮಲೆಸಿದ್ದಪ್ಪ, ಭೈರವ ಇದರ ಜೊತೆಗೆ ತಮ್ಮ ಮನೆತನದ ಹಿರಿಯರ ಪೂರ್ವಜರ ಹೆಸರುಗಳನ್ನು ತಪ್ಪದೇ ಮಕ್ಕಳಿಗೆ ನಾಮಕರಣ ಮಾಡಿರುವ ಪದ್ದತಿಯನ್ನು ಸಮುದಾಯದ ಮೊದಲನೇ ಹಾಗೂ ಎರಡನೇ ತಲೆಮಾರಿನಲ್ಲಿ ಬಳಕೆಯಲ್ಲಿರುವುದನ್ನು ಕಾಣಬಹುದಾಗಿದೆ. ಸಮುದಾಯದ ಪ್ರತಿಯೊಂದು ಕುಟುಂಬದಲ್ಲಿಯೂ ಸಿದ್ದಪ್ಪ, ಮಲೆಸಿದ್ದ, ಹುಲಿಗೆಪ್ಪ, ರಾಮಸಿದ್ದಪ್ಪ, ಭೈರಪ್ಪ, ಭರಮಪ್ಪ, ಕೊಳ್ಳಪ್ಪ, ಯಲ್ಲಪ್ಪ, ಅರ್ಜುನಪ್ಪ ಎಂಬ ಹೆಸರುಗಳನ್ನು ಪುರುಷರಲ್ಲಿ, ಯಲ್ಲಮ್ಮ, ಗಂಗಮ್ಮ, ಗೌರಮ್ಮ, ಭೀಮಕ್ಕ, ಸಿದ್ದಮ್ಮ, ಹುಲಿಗೆಮ್ಮ, ಮೇಸಮ್ಮ, ತುಕ್ಕಮ್ಮ ಎಂಬ ಹೆಸರುಗಳು ಮಹಿಳೆಯರಲ್ಲಿ ಸಾಮಾನ್ಯವಾಗಿರುವುದನ್ನು ಕಾಣಬಹುದಾಗಿದೆ. ಹಂಡಿಜೋಗಿ ಸಮುದಾಯದ ಮೊದಲನೇ ಮತ್ತು ಎರಡನೇ ತಲೆಮಾರಿನ ಪುರುಷ ಹಾಗೂ ಮಹಿಳೆಯರ ಹೆಸರುಗಳು ಹೆಚ್ಚು ದೈವ ಕೇಂದ್ರಿತವಾಗಿರುವುದನ್ನು ಕಾಣಬಹುದಾಗಿದೆ. ಸಮುದಾಯದಲ್ಲಿ ಜನಿಸಿದ ಪ್ರತಿಯೊಂದು ಮಗುವಿಗೂ ಸಹ ಮೊದಲು ತಮ್ಮ ಮನೆದೈವದ ಹೆಸರನ್ನು ಕರೆಯುತ್ತಾರೆ. ಸಮುದಾಯದ ಉಪಕುಲಗಳಿಗೆ ಸಂಬಂಧಿಸಿದಂತೆ ಮನೆದೈವಗಳ ಹೆಸರುಗಳನ್ನು ನಾಮಕರಣ ಮಾಡುವ ಪದ್ಧತಿಯನ್ನು ಇವರಲ್ಲಿ ಕಾಣಬಹುದಾಗಿದೆ. ಅಂತಹ ಕುಲದೈವಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

ನುಂಕೆಮಲೆ ಸಿದ್ದೇಶ್ವರ

ಗೋರಖನಾಥ

ಮಚ್ಚೇಂದ್ರನಾಥ

ಅಂಗಳಭರಮಪ್ಪ

ಗುಂಡುಭರಮಪ್ಪ

ಮೂಸಂಡಿಸಿದ್ಧ

ಹುಲಿಮಾನಪ್ಪ

ಸವದತ್ತಿ ಯಲ್ಲಮ್ಮ

ಉಚ್ಚಂಗಿ ಯಲ್ಲಮ್ಮ

ಆಂಜಿನೇಯ

ವಧ್ದೀಕೆರೆ ಸಿದ್ದಪ್ಪ

ಮೇಸಾಯಿ

ತುಕ್ಕಾಯಿ ಮೊದಲಾದವು ಇವರ ಪ್ರಧಾನ ದೈವಗಳಾಗಿರುವುದನ್ನು ಗುರುತಿಸಬಹುದಾಗಿದೆ. ಸಮುದಾಯದಲ್ಲಿ ಶನಿವಾರ ಜನಿಸಿದ ಗಂಡುಮಗುವಿಗೆ ಅಂಜಿನಪ್ಪ, ಹನುಮಂತಪ್ಪ ಎಂದು ನಾಮಕರಣ ಮಾಡಲಾಗುತ್ತದೆ. ಒಟ್ಟಾರೆ ಹಂಡಿಜೋಗಿ ಸಮುದಾಯದಲ್ಲಿ ದೈವ ಕೇಂದ್ರಿತವಾದ ಹೆಸರುಗಳನ್ನು ತಮ್ಮ ಮಕ್ಕಳಿಗೆ ನಾಮಕರಣ ಮಾಡುತ್ತಿದ್ದರು. ಆದರೆ ಇತ್ತೀಚೆಗೆ ಆಧುನೀಕರಣದಿಂದಾಗಿ ಸಮುದಾಯದಲ್ಲಿ ದೈವ ಹೆಸರುಗಳ ಪ್ರಸಾರ ಹಿಂದೆ ಸರಿಯುತ್ತಿರುವುದನ್ನು ಕಾಣಬಹುದಾಗಿದೆ. ಇಂದು ಸಮುದಾಯದಲ್ಲಿ ಜನಿಸಿದ ಗಂಡು, ಹೆಣ್ಣು ಮಕ್ಕಳಿಗೆ ಆಧುನಿಕತೆಗೆ ಸಂಬಂಧಿಸಿದ ಹೆಸರುಗಳನ್ನು ನಾಮಕರಣ ಮಾಡುತ್ತಿರುವುದನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ ಚೈತ್ರ, ನೇತ್ರ, ಸೃಷ್ಟಿ, ವಿನುತ, ಸೌಮ್ಯ, ಅಖಿಲ, ಪ್ರದೀಪ, ಪ್ರಮೋದ್, ರಾಖೇಶ, ಶಶಿ ಮುಂತಾದವುಗಳನ್ನು ಗುರುತಿಸಬಹುದಾಗಿದೆ.

**ತೊಟ್ಟಿಲು ಶಾಸ್ತ್ರ:** ಮಗುವಿನ ಸೋದರಮಾವನು ತೊಟ್ಟಿಲು ಪೂಜೆ ಮಾಡುತ್ತಾನೆ. ಸೋದರ ಅತ್ತೆ ಮಗುವನ್ನು ತೊಟ್ಟಿಲಿಗೆ ಹಾಕುತ್ತಾಳೆ. ಮಗುವಿನ ತಾಯಿಗೆ ಉಡಿತುಂಬಿಸಿ ಮುತ್ತೈದೆಯರು ಸೋಬಾನೆ ಪದಗಳನ್ನು ಹಾಡುತ್ತಾರೆ. ತೊಟ್ಟಿಲು ಪೂಜೆ ಮಾಡಿದ ಮಗುವಿನ ಸೋದರ ಮಾವನಿಗೆ ಮಗುವಿನ ತಂದೆಯ ಬಂಧುಗಳು ಹೊಸ ವಸ್ತ್ರಗಳನ್ನು ಉಡುಗೊರೆಯಾಗಿ ನೀಡುವ ಪದ್ದತಿ ಇದೆ. ಈ ಸಂದರ್ಭದಲ್ಲಿ ಸಮುದಾಯದ ಬಂಧು-ಬಾಂಧವರೆಲ್ಲರಿಗೂ ಸಿಹಿ ಊಟದ ವ್ಯವಸ್ಥೆಯನ್ನು ಮಾಡಲಾಗುತ್ತದೆ. ಬಂಧುಗಳು ಮಗುವಿಗೆ ಉಡುಗೊರೆಗಳನ್ನು ನೀಡುವ ಪದ್ಧತಿ ರೂಢಿಯಲ್ಲಿದೆ.

**ಜವುಳ:** ಹಂಡಿಜೋಗಿಗಳು ಸಮುದಾಯದಲ್ಲಿ ಜನಿಸಿದ ಪ್ರತಿಯೊಂದು ಗಂಡು ಮತ್ತು ಹೆಣ್ಣು ಮಕ್ಕಳಿಗೆ ಮಾಡುವ ಸಂಪ್ರದಾಯ ಇದಾಗಿರುತ್ತದೆ. ಸಮುದಾಯದಲ್ಲಿ ಜನಿಸಿದ ಮಕ್ಕಳಿಗೆ ಏಳು ಅಥವಾ ೯ನೇ ತಿಂಗಳಲ್ಲಿ ಈ ಆಚರಣೆಯನ್ನು ಮಾಡಲಾಗುತ್ತದೆ. ಗಂಡು ಹೆಣ್ಣು ಮಕ್ಕಳಿಬ್ಬರಿಗೂ ಈ ಆಚರಣೆ ಸಮಾನವಾಗಿರುತ್ತದೆ. ಹುಟ್ಟು ಕೂದಲನ್ನು ತೆಗೆಯುವ ಈ ಸಂಪ್ರದಾಯವನ್ನು ಹಂಡಿಜೋಗಿಗಳು (ಕೇಸ್ ಕಡ್ತಲ್, ಕೇಸ್ ಕಟ್‌ಕರ್ತಲ್) ಜವುಳ ತೆಗೆಸುವುದು, ಕೂದಲು ತೆಗೆಸುವುದು ಎಂದು ಕರೆಯುತ್ತಾರೆ.

**ಆಚರಣೆ ವಿಧಾನ:** ಸಮುದಾಯದಲ್ಲಿ ಮಗುವಿನ ಸೋದರಮಾವನಾದವನು ಈ ಕಾರ್ಯವನ್ನು ಮಾಡಬೇಕು. ಸಾಮಾನ್ಯವಾಗಿ ಈ ಕಾರ್ಯಕ್ರಮ ಸಮುದಾಯದ ಕುಲ ದೈವಗಳ ಸನ್ನಿಧಿಯಲ್ಲಿ (ದೇವಸ್ಥಾನದಲ್ಲಿ) ನಡೆಯುತ್ತದೆ. ಸೋದರಮಾವನು ಮಗುವಿನ ಕೂದಲುಗಳನ್ನು ವೀಳ್ಯದೆಲೆಯ ಕತ್ತರಿಯಿಂದ ಮುಟ್ಟಿಸಲಾಗುತ್ತದೆ. ನಂತರ ಮಗುವಿನ ತಲೆಗೆ ವೀಳ್ಯದೆಲೆಯಿಂದ ೫ ಬಾರಿ ಮುಟ್ಟಿಸಿ

ಐದು ಕೂದಲುಗಳನ್ನು ತೆಗೆದು ವೀಳ್ಯದ ಎಲೆಯ ಮೇಲೆ ಇರಿಸಲಾಗುತ್ತದೆ. ಆ ನಂತರ ವೀಳ್ಯದೆಲೆ ಸಮೇತವಾಗಿ ಕೂದಲನ್ನು ನೀರಿಗೆ ಬಿಡಲಾಗುತ್ತದೆ. ಇದಾದ ಬಳಿಕ ಹುಡುಗನಿಗೆ ಸ್ನಾನ ಮಾಡಿಸಿ ಹೊಸ ಬಟ್ಟೆಗಳನ್ನು ತೊಡಿಸಲಾಗುತ್ತದೆ. ಜವುಳ ತೆಗೆದ ಸೋದರಮಾವನಿಗೆ ಹುಡುಗನ ತಂದೆ-ತಾಯಿ ಹೊಸಬಟ್ಟೆ ಮತ್ತು ಯಾವುದಾದರೂ ವಸ್ತುಗಳನ್ನು ಕಾಣಿಕೆಯ ರೂಪದಲ್ಲಿ ಉಡುಗೊರೆಯಾಗಿ ನೀಡುತ್ತಾರೆ. ಈ ಸಂದರ್ಭದಲ್ಲಿ ಸಮುದಾಯದ ಬಂಧು-ಬಾಂಧವರು ಹುಡುಗನಿಗೆ ಉಡುಗೊರೆಗಳನ್ನು ನೀಡುತ್ತಾರೆ. ಇದಾದ ಬಳಿಕ ಎಲ್ಲರಿಗೂ ಸಿಹಿ ಊಟದ ವ್ಯವಸ್ಥೆ ಮಾಡಲಾಗುತ್ತದೆ.

**ಋತುಮತಿ:** ಇತರೆ ಅಲೆಮಾರಿ ಬುಡಕಟ್ಟು ಸಮುದಾಯಗಳಲ್ಲಿರುವಂತೆ ಹಂಡಿಜೋಗಿಗಳಲ್ಲಿಯೂ ಋತುಮತಿಯಾದ ಹೆಣ್ಣುಮಗಳಿಗೆ ಕೆಲವು ಆಚರಣೆಗಳನ್ನು ಮಾಡುವ ಪದ್ಧತಿ ರೂಢಿಯಲ್ಲಿದೆ. ಇವರು ಹೆಣ್ಣುಮಗಳು ಋತುಮತಿಯಾಗುವುದನ್ನು ಅನೇಕ ಹೆಸರುಗಳಿಂದ ಕರೆಯುತ್ತಾರೆ. ಅವುಗಳೆಂದರೆ ಹುಡುಗಿ ಮೈನೆರೆತಳು, ಹುಡುಗಿ ಪ್ರಾಯಕ್ಕೆ ಬಂದಳು, ಹುಡುಗಿ ಹೆಣ್ಣಾದಳು ಎಂದು ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ.

**ನೀರು ಹಾಕುವ ಶಾಸ್ತ್ರ:** ಹುಡುಗಿಗೆ ಮೈನೆರೆದ ದಿನದಂದು ಸಮುದಾಯದ ಮುತ್ತೈದೆಯರು ಸೇರಿ ಸ್ನಾನ ಮಾಡಿಸುತ್ತಾರೆ. ಇದನ್ನು ನೀರು ಹಾಕುವ ಶಾಸ್ತ್ರ ಎನ್ನುತ್ತಾರೆ. ನಂತರ ಹುಡುಗಿಗೆ ಪ್ರತ್ಯೇಕವಾಗಿ ಗುಡಿಸಲು ನಿರ್ಮಿಸುತ್ತಾರೆ. ಹುಡುಗಿಯ ಸೋದರಮಾವ ಆ ಗುಡಿಸಲನ್ನು ನಿರ್ಮಿಸಿಕೊಡುತ್ತಾನೆ. ಮೈನೆರೆದ ದಿನದಂದು ಸಂಜೆ ಆ ಗುಡಿಸಲಿನಲ್ಲಿ ಅಕ್ಕಿ ಮತ್ತು ತೆಂಗಿನ ಕಾಯಿಯನ್ನು ಇರಿಸಿ ಪೂಜೆ ಸಲ್ಲಿಸಿ ಹುಡುಗಿಯನ್ನು ಒಂಭತ್ತು ಇಲ್ಲವೆ ಹನ್ನೊಂದು ದಿನಗಳವರೆಗೆ ಆ ಗುಡಿಸಲಿನಲ್ಲಿ ಇರಿಸಲಾಗುತ್ತದೆ. ಸಮುದಾಯದ ಮುತ್ತೈದೆಯರು ಸೇರಿ ಹುಡುಗಿಗೆ ಐದು ದಿನಗಳ ಕಾಲ ಐದು ನೀರನ್ನು ಹಾಕುತ್ತಾರೆ. ಈ ಸಂದರ್ಭದಲ್ಲಿ ಸಮುದಾಯದ ಹಿರಿಯ ಮಹಿಳೆಯರು ಹುಡುಗಿಯ ಮನೆತನ ಹಾಗೂ ಸೋದರ ಮಾವನ ಕುರಿತಾಗಿ ಮರಾಠಿಯ ಹಾಡುಗಳನ್ನು ಹಾಡುತ್ತಾರೆ.

**ಗಂಗೆಪೂಜೆ:** ಹಂಡಿಜೋಗಿಗಳಲ್ಲಿ ಹೆಣ್ಣು ಮೈನೆರೆಯುವುದನ್ನು ಮೈಲಿಗೆ ಎಂದು ಭಾವಿಸುತ್ತಾರೆ. ೯ನೇ ದಿನದಂದು ಮಾಡುವ ಗಂಗೆ ಪೂಜೆಯ ಸಮಯಕ್ಕೆ ಮೈನೆರೆದ ಹುಡುಗಿಯ ಬಂಧುಗಳೆಲ್ಲರೂ ಸಹ ತಮ್ಮ ಮನೆಗಳನ್ನು ಸ್ವಚ್ಛಗೊಳಿಸುತ್ತಾರೆ. ಹುಡುಗಿಯ ಕುಟುಂಬದವರು ಮನೆಯನ್ನು ಸ್ವಚ್ಛಗೊಳಿಸಿ ಮನೆಯ ಅಂಗಳವನ್ನೆಲ್ಲಾ ಸಗಣಿಯಿಂದ ಸಾರಿಸಿ ಅದರ ಮೇಲೆ ಚಿತ್ತಾರದ ರಂಗೋಲಿಗಳನ್ನು ಹಾಕಲಾಗುತ್ತದೆ. ಮನೆಯಲ್ಲಿನ ಎಲ್ಲಾ ಪರಿಕರಗಳನ್ನು (ಗೃಹ ಬಳಕೆಯ ವಸ್ತುಗಳು) ಸ್ವಚ್ಛಗೊಳಿಸಲಾಗುತ್ತದೆ. ಇಡೀ ಮನೆಯನ್ನು ಶುದ್ಧಗೊಳಿಸಿದ ನಂತರ ಹುಡುಗಿಯನ್ನು ಗಂಗೆಪೂಜೆಗೆ ಕರೆದುಕೊಂಡು ಹೋಗಲಾಗುತ್ತದೆ. ಮುತ್ತೈದೆಯರು ಮೈನೆರದ ಹುಡುಗಿಗೆ ಅಕ್ಕಿ, ಬೆಲ್ಲ, ಬಾಳೆಹಣ್ಣು, ತೆಂಗಿನಕಾಯಿಗಳನ್ನು ಮಡಿಲು ತುಂಬಿಸಿ ಸೊಂಟಕ್ಕೆ ಕಟ್ಟುತ್ತಾರೆ. ನೀರು ಬರುವ ಸ್ಥಳಕ್ಕೆ (ನಳ, ಬೋರ್‌ವೆಲ್, ಬಾವಿ) ತೆರಳಿ ಗಂಗಮ್ಮ (ಗಂಗೆ)ನಿಗೆ ಪೂಜೆ ಸಲ್ಲಿಸಿ, ನೀರು ತುಂಬಿದ ಮಡಕೆಯನ್ನು ತಲೆಯ ಮೇಲಿರಿಸಿಕೊಂಡು ಮನೆಗೆ ಕರೆದುಕೊಂಡು ಬರಲಾಗುತ್ತದೆ.

ಆ ದಿನ ಸಂಜೆ ಮೈನೆರೆದ ಹುಡುಗಿಯ ಮನೆಯ ಮುಂಭಾಗದಲ್ಲಿ ಒಂದು ಸಣ್ಣ ಮಂಟಪವನ್ನು ನಿರ್ಮಿಸಲಾಗುತ್ತದೆ. ಈ ಮಂಟಪವನ್ನು ಬಣ್ಣ-ಬಣ್ಣದ ವಿದ್ಯುತ್ ದೀಪಗಳಿಂದ ಅಲಂಕೃತಗೊಳಿಸಲಾಗಿರುತ್ತದೆ. ಗಂಗೆ ಪೂಜೆಯ ನಂತರ ಮೈನೆರೆದ ಹುಡುಗಿಯನ್ನು ಈ ಮಂಟಪದಲ್ಲಿ ಕೂಡಿಸಲಾಗುತ್ತದೆ. ಈ ಸಂದರ್ಭದಲ್ಲಿ ಹುಡುಗಿಗೆ ಸೋದರಮಾವ ಜೊತೆಗೆ ಸಮುದಾಯದ ಬಂಧು-ಬಾಂಧವರೆಲ್ಲರೂ ಸೇರಿ ಉಡುಗೊರೆಗಳನ್ನು ನೀಡುತ್ತಾರೆ. ಈ ಸಂದರ್ಭದಲ್ಲಿ ಸಮುದಾಯದ ಹಿರಿಯ ತಲೆಮಾರಿನ ಮಹಿಳೆಯರು ಸೋದರಮಾವನ ಕುರಿತಾಗಿ ಸಮುದಾಯದ ಮೂಲಭಾಷೆಯಲ್ಲಿ ಹಾಡುಗಳನ್ನು ಹಾಡುವುದು ಕಂಡುಬರುತ್ತದೆ.

**ಜೋಗಿದೀಕ್ಷೆ :** ದೀಕ್ಷೆ ಹಂಡಿಜೋಗಿಗಳ ಸಾಂಸ್ಕೃತಿಕ ಆಚರಣೆಗಳಲ್ಲೊಂದಾಗಿದೆ. ಸಮುದಾಯದಲ್ಲಿ ಜನಿಸಿದ ಪ್ರತಿಯೊಬ್ಬ ಗಂಡುಮಕ್ಕಳಿಗೂ ಭೈರವನ ಹೆಸರಿನಲ್ಲಿ ದೀಕ್ಷೆ ನೀಡಿ ಜೋಗಿಯನ್ನಾಗಿಸುವುದು ಅವರು ರೂಢಿಸಿಕೊಂಡುಬಂದಿರುವ ಕಡ್ಡಾಯ ಸಂಪ್ರದಾಯವಾಗಿದೆ. ದೀಕ್ಷೆ ಸ್ವೀಕರಿಸಿದಂದಿನಿಂದ ಅವನು ಭೈರವನ ಆರಾಧಕನಾಗುತ್ತಾನೆ. ನಂತರ ತಮ್ಮ ಸಮುದಾಯದ ಸಾಂಸ್ಕೃತಿಕ ವೃತ್ತಿಯಾದ ಹಾಡುಗಾರಿಕೆ ಕಲೆಯ ಪ್ರದರ್ಶನದೊಂದಿಗೆ ಬದುಕು ಸಾಗಿಸುತ್ತಾನೆ. ಹಂಡಿಜೋಗಿಗಳಲ್ಲಿ ವಿವಾಹ ಪೂರ್ವದಲ್ಲಿ ಎಲ್ಲಾ ಗಂಡುಮಕ್ಕಳಿಗೆ ಜೋಗಿದೀಕ್ಷೆಯನ್ನು ನೀಡಲಾಗುತ್ತದೆ. ಸಮುದಾಯದಲ್ಲಿ ದೀಕ್ಷೆ ಪಡೆಯದಿದ್ದರೆ ಅಪೂರ್ಣ ಎಂಬ ಕಲ್ಪನೆ ರೂಢಿಯಲ್ಲಿರುವುದನ್ನು ಗುರುತಿಸಬಹುದಾಗಿದೆ.

**ದೀಕ್ಷಾ ವಿಧಾನ:** ಸಾಮಾನ್ಯವಾಗಿ ದೀಕ್ಷೆಯನ್ನು ತಮ್ಮ ಸಮುದಾಯಕ್ಕೆ ಸೇರಿದ ಪ್ರಧಾನ ಅಥವಾ ಉಪಮಠಗಳಿಂದ ಗುರುಗಳನ್ನು ಕರೆಸಿ ಮಾಡಲಾಗುತ್ತದೆ. (ಮೊಳಕಾಲ್ಮೂರಿನ ನುಂಕಮಲೆಬೆಟ್ಟ, ಧಾರವಾಡದ ತುರಬೆಗುಡ್ಡ) ಸಮುದಾಯದ ಮುಖ್ಯ ಮಠಗಳಾದ ಮಂಗಳೂರಿನ ಕದ್ರಿ, ಮಂಡ್ಯದ ಆದಿಚುಂಚನಗಿರಿ ಮಠದ ಗುರುಗಳ ಸಮ್ಮುಖದಲ್ಲಿಯೂ ಸಹ ದೀಕ್ಷಾ ವಿಧಿಯನ್ನು ಬೋಧಿಸಲಾಗುತ್ತಿತ್ತು. ಆದರೆ ಇಂದು ಮಠದ ಗುರುಗಳು ಮನೆಗೆ ಬರುವುದಿಲ್ಲ. ಆರಂಭದಲ್ಲಿ ಹುಡುಗರನ್ನು ಮಠಗಳಿಗೆ ಕರೆದೊಯ್ದು ದೀಕ್ಷೆಯನ್ನು ನೆರವೇರಿಸಲಾಗುತ್ತಿತ್ತು. ಆದರೆ ಈಗ ಮಠಗಳಿಗೆ ಮಕ್ಕಳನ್ನು ಕರೆದೊಯ್ಯುವುದು ಸಹ ಕಡಿಮೆಯಾಗಿದೆ. ಹಾಗಾಗಿ ಹಂಡಿಜೋಗಿಗಳು ತಮ್ಮ ತಮ್ಮ ಆರ್ಥಿಕ ಶಕ್ತ್ಯಾನುಸಾರ ಸಮುದಾಯದ ಹಿರಿಯರ ಸಮ್ಮುಖದಲ್ಲೇ ದೀಕ್ಷಾ ವಿಧಿಯನ್ನು ನೆರವೇರಿಸುತ್ತಿರುವುದು ಕಂಡುಬರುತ್ತದೆ.

ದೀಕ್ಷಾ ವಿಧಿಯ ಬೋಧನೆಯಲ್ಲಿ ಗುರುವಿನ ಸ್ಥಾನ ತುಂಬಾ ಮಹತ್ವವಾದುದು. ಮಠದ ಗುರುಗಳ ಅನುಪಸ್ಥಿತಿಯಲ್ಲಿ ದೀಕ್ಷೆಗೆ ಒಳಗಾಗುವ ಹುಡುಗನ ಚಿಕ್ಕಪ್ಪ, ಅಣ್ಣ, ಅಥವಾ ಅಜ್ಜ ಗುರುವಾಗುತ್ತಾನೆ. ಸಮುದಾಯದಲ್ಲಿ ಅವರನ್ನು ಆಪಾ ಗುರು (ಚಿಕ್ಕಪ್ಪ), ದಾದಾಗುರು (ಅಣ್ಣಗುರು), ತಾಲ್ದ ಗುರು (ಅಜ್ಜ, ತಾತಗುರು) ಎಂದು ಕರೆಯುವುದು ಕಂಡುಬರುತ್ತದೆ.

ಮೇಲಿನ ಮೂರು ವ್ಯಕ್ತಿಗಳಲ್ಲಿ ಯಾರಾದರೂ ಒಬ್ಬರು ಗುರುವಿನ ಸ್ಥಾನವನ್ನು ಅಲಂಕರಿಸಿ ಹುಡುಗನಿಗೆ ದೀಕ್ಷಾ ಕಲ್ಮನ್ನು ಬೋಧಿಸಲಾಗುತ್ತದೆ. ಸಾಮಾನ್ಯವಾಗಿ ದೀಕ್ಷೆಯನ್ನು ಭೈರವನ ವಾರವಾದ ಭಾನುವಾರ ಇಲ್ಲವೇ ಗುರುವಾರ ನೀಡಲಾಗುವುದು. ದೀಕ್ಷೆಯ ದಿನದಂದು ಗುರುವಾದವರು

ತನ್ನ ಹೆಂಡತಿಯೊಂದಿಗೆ ಹೊಸಬಟ್ಟೆಯನ್ನು ಧರಿಸಿ ಆಗಮಿಸುತ್ತಾರೆ. ಜೊತೆಗೆ ಗುರುವಾದವರು ಕೆಂಪು ಅಂಗಿ, ಪಂಚೆ, ಶಾಲನ್ನು ಧರಿಸುತ್ತಾರೆ. ದೀಕ್ಷೆಯನ್ನು ಪಡೆಯುವ ಹುಡುಗನು ಸಹ ಹೊಸ ಬಟ್ಟೆಯನ್ನು ಧರಿಸಿರುತ್ತಾನೆ.

**ಪೂಜಾ ವಿಧಾನ:** ಪೂಜೆಗೆ ಬಿದಿರಿನ ಬೆತ್ತ ಹಾಗೂ ಎರಡು ಸೋರೆ ಪಾತ್ರೆಗಳನ್ನು ತರಿಸಿ ಅವುಗಳಿಗೆ ವಿಭೂತಿ, ಕುಂಕುಮವನ್ನಿಟ್ಟು ಪೂಜಿಸಲಾಗುತ್ತದೆ. ನಂತರ ೨ ನಿಧಿ ಜೋಳವನ್ನು ಸೋರೆ ಪಾತ್ರೆಗಳ ಕೆಳಗೆ ಹಾಕಲಾಗಿರುತ್ತದೆ. ಇವುಗಳ ಮಧ್ಯದಲ್ಲಿ ಭೈರವನ ಸಂಕೇತವಾದ ತ್ರಿಶೂಲವನ್ನಿಟ್ಟು ಪೂಜಿಸಲಾಗುತ್ತದೆ. ನಂತರ ಪೂಜೆಗೆ ಇರಿಸಿದ ೨ ಸೋರೆ ಪಾತ್ರೆಗಳಿಗೆ ಅನ್ನ ಹಾಗೂ ಮಾಂಸದ ಆಹಾರವನ್ನು ತುಂಬಲಾಗುತ್ತದೆ. ಪೂಜೆಯ ಸಮಯಯದಲ್ಲಿ ಅವುಗಳಿಂದ ಸ್ವಲ್ಪ ಅನ್ನ ಹಾಗೂ ಮಾಂಸದ ಆಹಾರವನ್ನು ತೆಗೆಯಲಾಗುತ್ತದೆ. ದೀಕ್ಷಾ ಸಮಯದಲ್ಲಿ ಸಮುದಾಯದ ಎಲ್ಲಾ ಸದಸ್ಯರಿಗೆ ಸಿಹಿ ಹಾಗೂ ಮಾಂಸದ ಆಹಾರಗಳೆರಡನ್ನೂ ಸಿದ್ಧಪಡಿಸಲಾಗಿರುತ್ತದೆ. ಗುರುವಾದವರು ಪೂಜಾ ಸಮಯದಲ್ಲಿ ಸಿಂಗನಾದವನ್ನು ಊದುತ್ತಾರೆ. ಹೀಗೆ ಪೂಜಿಸಿದ ನಂತರ ಹುಡುಗನಿಗೆ ಕೂರಲು, ಕರಿ ಕಂಬಳಿಯ ಗದ್ದುಗೆಯನ್ನು ಹಾಸಲಾಗುತ್ತದೆ. ಅದರ ಮೇಲೆ ಅಕ್ಕಿಯನ್ನು ಚೆಲ್ಲುತ್ತಾರೆ. ಆ ಗದ್ದುಗೆಯ ಮೇಲೆ ಪಶ್ಚಿಮಕ್ಕೆ ಮುಖ ಮಾಡಿ ಹುಡುಗನು ಪೂರ್ವಕ್ಕೆ ಮುಖ ಮಾಡಿ ಗುರುವಾದವರು ಗದ್ದುಗೆಯ ಸಮೀಪ ಬಂದು ದೀಕ್ಷೆ ಪಡೆಯುವ ಹುಡುಗನ ಬಲಕಿವಿಯನ್ನು ಹಿಡಿದುಕೊಂಡು ಉಪದೇಶ (ದೀಕ್ಷಾಮಂತ್ರ) ಕಟ್ಟಳೆಯನ್ನು ಬೋಧಿಸುತ್ತಾನೆ. ಆ ದೀಕ್ಷಾಮಂತ್ರವನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

**ದೀಕ್ಷಾಮಂತ್ರ**

ಜಳಮಾಯ್ನಿ ಫಾಯದಾ ಹುಯೋ ಸುರಿ
ಮೇರೆ ಹಾತುಮೆ ಹೈ ಮಿರಿ
ತೇರೆ ಕಾನಕೋ ಲಗಾತೊ ಸುರಿ
ಕರ್‌ನಾಕೋ ಬೇಟಾ ಚೋರಿ
ಹಾತ್‌ಮೆ ದೇಂಗೆ ಕಂಬಲ್ ಕ ಕೋರಿ
ದಿಖಾಯೇಂಗೆ ಜಂಗಲ್‌ಕಾ ದಾರಿ

ಹರ ಗೋರಖ್‌ನಾಥ್ ಬಾರಾ ಕಟ್ಲ ಬಂದೋಬಸ್ತ್ ಎಂದು ದೀಕ್ಷಾ ಕಟ್ಟಳೆಯನ್ನು ಬೋಧಿಸುತ್ತ ತಮ್ಮ ಸಮುದಾಯದ ದೈವಗಳು, ಕುಲಪಂಥಗಳನ್ನು ಸ್ಮರಿಸುತ್ತಾ ಆನ್‌ಮಾನ್ ಗುರುಗ್ಯಾನ್ ಬಾರಾಹ್‌ಪಂಥ ಸಿದ್ದಾಲ್ ಆದೇಶ್ ಆದೇಶ್ ಆದೇಶ್ ಎಂದು ಹೇಳಿ ಹುಡುಗನ ಬಲಕಿವಿಯ ತೊಟ್ಟನ್ನು ಬೆಳ್ಳಿಯ ಸೂರಿಯಿಂದ ಸ್ವಲ್ಪ ಕೊಯ್ದು ನಂತರ ಎಡ ಕಿವಿಯ ತೊಟ್ಟನ್ನು ಸಹ ಕೊಯ್ಯಲಾಗುತ್ತದೆ. ಇದರಿಂದ ಬಂದ ರಕ್ತವನ್ನು ತಡೆಯಲು ಹತ್ತಿ ಬಟ್ಟೆಯನ್ನು ಬಳಸಲಾಗುತ್ತದೆ. ಎರಡು ದಿನಗಳು ಕಳೆದ ನಂತರ ಹುಡುಗನ ಕಿವಿಗೆ ಲೋಹದ ರಿಂಗ್ ರೀತಿಯ ಮುದ್ರೆಗಳನ್ನು ಹಾಕಲಾಗುತ್ತದೆ. ಈ ಮುದ್ರೆಯನ್ನು ಅವನೆಂದೂ ಕಳೆಯುವಂತಿಲ್ಲ. ಪಂಚಲೋಹದಿಂದ ತಯಾರಿಸಿದ

ಈ ಮುದ್ರೆಯನ್ನು ಕಾಮಾಕ್ಷಿ, ಜೋಗಿಮುದ್ರೆ, ಕರ್ಣಕುಂಡಲ ಎಂದು ಕರೆಯುತ್ತಾರೆ. ಇದು ಜೋಗಿಯ ಸಂಕೇತ. ಇಂದು ಬಹುತೇಕ ಯುವಕರು ಒಂದು ಕಿವಿಗೆ ಮಾತ್ರ ಲೋಹದ ರಿಂಗನ್ನು ಧರಿಸುತ್ತಾರೆ. ಕಿವಿಯಲ್ಲಿ ಈ ಮುದ್ರೆ ಕಂಡುಬಂದರೆ ಹುಡುಗನಿಗೆ ದೀಕ್ಷೆಯಾಗಿದೆ ಎಂದರ್ಥ. ಮೇಲಿನ ದೀಕ್ಷಾ ಮಂತ್ರದ ಅರ್ಥವನ್ನು ಕನ್ನಡದಲ್ಲಿ ಈ ಕೆಳಗಿನಂತೆ ವಿವರಿಸಬಹುದಾಗಿದೆ.

ಮಗು ನನ್ನ ಕೈಯಲ್ಲಿ ಶಸ್ತ್ರವಿದೆ
ನಿನ್ನ ಕಿವಿಗೆ ಇದನ್ನು ಹಾಕುತ್ತಿದ್ದೇನೆ
ಮಗು ಕಳ್ಳತನ ಮಾಡಬೇಡ
ನಿನ್ನ ಕೈಗೆ ಕಂಬಳಿ ಕೋರಿ ಕೊಡುತ್ತೇವೆ
ಕಾಡಿನ ಮಧ್ಯೆ ದಾರಿ ತೋರುತ್ತೇವೆ
ಗೋರಖನಾಥನ ಬಾರಾಪಂಥದ ಕಟ್ಟಳೆಯಿದು.

ಆನ್‌ಮಾನ್ ಗುರುಗ್ಯಾನ್ ಬಾರಾಹ್ ಪಂಥ ಸಿದ್ದಾಲ್
ಆದೇಶ್ ಆದೇಶ್ ಆದೇಶ!

ಎಂದು ಮೂರು ಬಾರಿ ಹೇಳುವ ಮುಖಾಂತರ ನಾಥ ಪಂಥದ ಬಾರಾಹ್ ಪಂಥದ ಅನುಮತಿಯನ್ನು ಕೇಳಿ ದೀಕ್ಷಾ ಕಾರ್ಯವನ್ನು ಮಾಡುವುದು ಕಂಡುಬರುತ್ತದೆ. ದೀಕ್ಷಾಮಂತ್ರವು ಸಮುದಾಯದ ಮೂಲ ಭಾಷೆಯಾದ ಮರಾಠಿಯಲ್ಲಿರುವುದನ್ನು ಗುರುತಿಸಬಹುದಾಗಿದೆ. ದೀಕ್ಷಾ ಮಂತ್ರದಲ್ಲಿ ಹೆಸರಿಸಿದ ಬಾರಾಹ್ ಪಂಥಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

ಬಾರಾಹ್‌ಪಂಥ್‌ಗಳು
ಸತ್ಯನಾಥಿ
ರಾಮನಾಥಿ
ಧರ್ಮನಾಥಿ
ಪಾವನಾಥಿ
ಪಾಗಲನಾಥಿ
ರಾವಲನಾಥಿ
ಕಪಲಾನಿ
ಗಂಗಾನಾಥಿ
ನಟೇಶ್ವರಿ
ಆಯಿಪಂಥಿ
ಭೈರಾಗಿ
ಮನ್ನಾಥಿ ಎಂಬುವುಗಳಾಗಿವೆ.

ದೀಕ್ಷೆಯಾದಂದಿನಿಂದ ಅವನು ಸಮುದಾಯದಲ್ಲಿ ಜವಾಬ್ದಾರಿಯುಳ್ಳ ವ್ಯಕ್ತಿಯಾಗಿ ತಮ್ಮ ಸಮುದಾಯದ ಮೂಲ ವೃತ್ತಿಯಲ್ಲಿ (ಹಾಡುಗಾರಿಕೆ) ನಿರತನಾಗುತ್ತಾನೆ. ಪ್ರತಿನಿತ್ಯ ಭೈರವನನ್ನು ಮನದಲ್ಲಿ ನೆನೆದು ಸಿಂಗನಾದ (ಶಂಖ)ವನ್ನು ನುಡಿಸಿ ಭಕ್ತಿಯಿಂದ ತ್ರಿಶೂಲಕ್ಕೆ ನಮಸ್ಕರಿಸಿ ತನ್ನ ಕರ್ತವ್ಯದಲ್ಲಿ ತೊಡಗುತ್ತಾನೆ.

ದೀಕ್ಷಾವಿಧಿಯ ಕಾರ್ಯ ಮುಗಿದ ನಂತರ ಈ ಕಾರ್ಯಕ್ರಮದಲ್ಲಿ ಪಾಲ್ಗೊಂಡವರಿಗೆಲ್ಲಾ ಸಿಹಿ ಮತ್ತು ಮಾಂಸದ ವಿಶೇಷ ಊಟದ ವ್ಯವಸ್ಥೆಯನ್ನು ಮಾಡಲಾಗಿರುತ್ತದೆ. ಬಂದಿದ್ದ ನೆಂಟರು, ಬಂಧುಬಳಗದವರೆಲ್ಲ ಹುಡುಗನಿಗೆ ಕಾಣಿಕೆ, ಉಡುಗೊರೆಗಳನ್ನು ನೀಡುತ್ತಾರೆ. ದೀಕ್ಷಾ ವಿಧಿಯನ್ನು ೧೦ ವರ್ಷ ದಾಟಿದ ನಂತರ ಬೋಧಿಸಲಾಗುತ್ತದೆ. ವಯಸ್ಸಿನ ಕಡ್ಡಾಯ ನಿರ್ಬಂಧ ಇರುವುದಿಲ್ಲ. ವಿವಾಹ ಸಂದರ್ಭದಲ್ಲಿ ವಿವಾಹವಾಗುವ ವ್ಯಕ್ತಿ ಹಾಗೂ ಅವನ ಸಹೋದರ ಇಬ್ಬರಿಗೂ ಒಮ್ಮೆಯೇ ದೀಕ್ಷಾ ವಿಧಿಯನ್ನು ನೆರವೇರಿಸಲಾಗುವುದು. ದೀಕ್ಷಾ ಸಂದರ್ಭದಲ್ಲಿ ಕುಂಡಲದೀಕ್ಷೆ ನೀಡಿದ ನಂತರ ಹುಡುಗನಿಗೆ ಜೋಗಿಯಾದವನ ಕರ್ತವ್ಯಗಳನ್ನು ಈ ಕೆಳಗಿನಂತೆ ಸಮುದಾಯದ ಭಾಷೆಯಲ್ಲಿ ಬೋಧಿಸಲಾಗುತ್ತದೆ.

ಅವಧೂತ್ ಆರಂತ್ ಬೋಲಂತ್ ಕಡ್ತಲ್ ಪಂತ್,
ಜೇಬಾಂದ್ರ ಜೇಪಂತ್,
ಜೋಗಿ ಜುಕ್ತರ್ ಹೈ ಸಮ್ಮಾಯೆ,
ಓ ಜೋಗಿ ಶಿರಭದ್ರ ಕಮಾಯೆ,
ಕಾಂಚ್ ಶಿಲಾಯೆ,
ಬಾರಾಬರಸ್‌ಕೊ ಮೂ ಬಡಾಯೆ,

ಆದ್ ಪತ್ತರ್ ಮೆ ಅನ್ನೇಳ್ ಪಿಲಾಯೆ,
ಕಾಡ್ಯಾ ಚಕ್ಕರ್ ಮಾರ್‍ಯಾಮಿರ್ಗ್,
ನಾದ್ ಕಡಾಸನ್ ಬಕ್ಕೀಮಾಸ್,
ಶಿವಾನಿ ಶಿವಿಲೋಕಿ ಗರ್ಜನ್,
ಶಿದ್ಧುದಿಯಾ ಸಿಕ,
ಈಶ್ವರ್‌ಲಿಯಾ ಸೋನ್ನಾರೂಪ
**ಕಿಂದರಿ** ಕಾಟಿ **ಝೋಳಿ** ಪತ್ತರ್,
ಶೈಲೊ **ಶಿಂಗೀನಾದ್** ಮುದ್ರಾ,
ನಗರಪೇಟ್ ಮೂಗುಭಿಕ್ಷಾ,
ನಾಥಗುರು ಜಾತ್ ಪಾವನ್,

ಬಾರಾಪಂಥ ಸಿದ್ಧಾಲ ಆದೇಶ್ ಆದೇಶ್ ಆದೇಶ್! ಎಂದು ಮರಾಠಿ ಮಿಶ್ರಿತದಿಂದ ಕೂಡಿದ ಹಿಂದಿ ಭಾಷೆಯಲ್ಲಿ ಉಪದೇಶ ಮಾಡಲಾಗುತ್ತದೆ.

ಈ ಮೇಲಿನ ಮಂತ್ರವು ಜೋಗಿಯ ಲಕ್ಷಣಗಳು ಹಾಗೂ ಸಮುದಾಯದ ಕುಲಬಿರುದು ಮತ್ತು ಕುಲಸಂಕೇತಗಳನ್ನು ಕುರಿತು ವಿವರಿಸುತ್ತದೆ. ಈ ಮೇಲಿನ ಮಂತ್ರದಲ್ಲಿ ಮರಾಠಿಯ ಜೊತೆಗೆ ಕನ್ನಡದ ಪದಗಳ ಬಳಕೆ ಇರುವುದನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ, ಕಿಂದರಿ, ಕಟ್ಟಳೆ, ಜೋಗಿ, ಜೋಳಿಗೆ, ಸಿಂಗನಾದ ಮೊದಲಾದವುಗಳಾಗಿವೆ. ಈ ಮಂತ್ರದಲ್ಲಿನ 'ಬಾರಾಬರಸ್‌ಕೋ ಮೂಬಡಾಯೆ' ಎಂದರೆ ತ್ರ್ಯಂಬಕದಿಂದ ಕದ್ರಿಗೆ ೧೨ ವರ್ಷಕ್ಕೊಮ್ಮೆ ಬರುವ ನಾಥರ ಯಾತ್ರೆಯನ್ನು ವಿವರಿಸುತ್ತದೆ.

"ಮಿರ್ಗಮಾರನಾ-ಬಲಿಯನ್ನು, ಶಿದ್ದುದಿಯಾ ಸಿಕ್ಕ" ಎಂದರೆ ಗುರುವು ಭಿಕ್ಷಾಟನೆಯ ಹಕ್ಕು ಕೊಡುವ ಮುದ್ರೆಯುಂಗುರವನ್ನು ಸೂಚಿಸುತ್ತದೆ.

ಹೀಗೆ ಬಾವಾಜಿಯು ಸಮುದಾಯದ ಹುಡುಗನಿಗೆ ಕಾಲಭೈರವನ ಹೆಸರಿನಲ್ಲಿ ದೀಕ್ಷೆ ನೀಡಿ ಅವರಿಂದ ಮಠಕ್ಕೆ ಗುರು ಕಾಣಿಕೆ/ದೀಕ್ಷಾ ಕಾಣಿಕೆಯನ್ನು ಪಡೆಯುತ್ತಾನೆ. ಹೀಗೆ ಹಂಡಿಜೋಗಿಗಳು ಇಂದಿಗೂ ಸಹ ಜೋಗಿ ದೀಕ್ಷೆ ಆಚರಣೆಯನ್ನು ತಮ್ಮ ಸಮುದಾಯದ ಪಾರಂಪರಿಕ ಆಚರಣೆಯಾಗಿ ಆಚರಿಸಿಕೊಂಡು ಬರುತ್ತಿರುವುದನ್ನು ಗುರುತಿಸಬಹುದಾಗಿದೆ. ಜೊತೆಗೆ ಹಂಡಿಜೋಗಿಗಳು ತಾವು ದೀಕ್ಷೆ ಪಡೆದಿರುವ ವಿವರವನ್ನು ತಮ್ಮ ಸಮುದಾಯಕ್ಕೆ ಸೇರಿದ ನಾಥ ಮಠದ ಗುರುವಿನಿಂದ ದೃಢೀಕರಣ ಪತ್ರವನ್ನು ಪಡೆಯುವುದು ಕಂಡುಬರುತ್ತದೆ.

**ವಿವಾಹ ಸಂಬಂಧಿ ಆಚರಣೆಗಳು**

ಹಂಡಿಜೋಗಿಗಳಲ್ಲಿ ಸಮುದಾಯದ ಉಪ-ಕುಲ-ಬಳಿಗಳಿಗೆ ಸಂಬಂಧಿಸಿದಂತೆ ವಿಶಿಷ್ಟ ಆಚರಣೆಗಳೊಂದಿಗೆ ವಿವಾಹ ಸಂಪ್ರದಾಯವು ನಡೆಯುತ್ತದೆ. ಸಮುದಾಯದಲ್ಲಿ ವಿವಾಹವು ಅನೇಕ ಆಚರಣೆಗಳೊಂದಿಗೆ ೨-೩ ದಿನಗಳವರೆಗೆ ನಡೆಯುವುದು ಕಂಡುಬರುತ್ತದೆ. ಹಂಡಿಜೋಗಿಗಳು ಸಮುದಾಯದಲ್ಲಿ ವಿವಾಹ ಸಂದರ್ಭದಲ್ಲಿ ತಮ್ಮ-ತಮ್ಮ ಉಪಕುಲಬಳಿಗಳಿಗೆ ಸೇರಿದ ಮನೆದೈವಗಳಿಗೆ ಸಂಬಂಧಿಸಿದಂತೆ ವಿಶಿಷ್ಟ ಆಚರಣೆಗಳನ್ನು ಮಾಡುತ್ತಿರುವುದು ಕಂಡುಬರುತ್ತದೆ. ಅಂತಹ ಆಚರಣೆಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ಹಂಡಿಜೋಗಿಗಳಲ್ಲಿ ವಿವಾಹದ ಮೊದಲನೇ ದಿನ ತಮ್ಮ ಮನೆದೈವಗಳಿಗೆ ಪೂಜೆಯನ್ನು ಸಲ್ಲಿಸಿ ಮದುಮಗನನ್ನು ಮಾಡುವ ಪದ್ದತಿ ಕಂಡುಬರುತ್ತದೆ. ಸಮುದಾಯದ ಉಪ-ಕುಲ-ಬಳಿಗಳು ಮತ್ತು ಅವರ ಮನೆ ದೈವಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ಪ್ರಭಳಕರ್-ತುಕ್ಕಾಯಿ, ಮೇಸಾಯಿ

ಹರಿಪೀರ್ (ಕುಲಗೌಡ) - ಯಲ್ಲಮ್ಮ, ಹುಲಿಮಾನಪ್ಪ

ದಳವಾಯಿ - ಯಲ್ಲಮ್ಮ, ಮಲೆಸಿದ್ದ, ಗುಂಡುಭರಮಪ್ಪ

ಮದುರ್‌ಕೋರ್ - ಮೂಸಂಡಿಸಿದ್ದ, ಹುಲಿಗೆಮ್ಮ, ಕುಪ್ಪಿನಕೇರಿ ಆಂಜನೇಯ, ಎಣ್ಣೆತಾಯಿ, ಭರಮಪ್ಪ.

ಭಂಡಾರಿ – ಯಲ್ಲಮ್ಮ, ನುಂಕೆಮಲೆಸಿದ್ಧ, ಅಂಗಳಭರಮಪ್ಪ

ಗಣಾಚಾರಿ (ಶೆವಾನ್ ಗೋರ್ಯಾ) – ಗಂಗಮ್ಮ, ಯಲ್ಲಮ್ಮ, ಕಾಲಭೈರವ, ಹುಲಿಮಾನಪ್ಪ

ಹೀಗೆ ಸಮುದಾಯದ ಎಲ್ಲಾ ಪಂಗಡದವರು ತಮ್ಮ ತಮ್ಮ ಮನೆದೈವಗಳನ್ನು ಮದುವೆಯ ಮೂರು ದಿನದ ಆಚರಣೆಯಲ್ಲಿ ಪೂಜಿಸುತ್ತಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ ತಮ್ಮ ತಮ್ಮ ಪಂಗಡಗಳಿಗೆ ಸೇರಿದ ಮನೆ ದೈವಗಳಿಗೆ ಪೂಜೆಸಲ್ಲಿಸುವ ಮುಖಾಂತರ ದೇವರ (ದೈವದ) ಪೂಜಾ ಕಾರ್ಯಗಳನ್ನು ಮಾಡುತ್ತಿರುವುದು ಕಂಡುಬರುತ್ತದೆ.

ಮದುವೆಯಲ್ಲಿ ದಳವಾಯಿ ಮತ್ತು ಭಂಡಾರಿ ಉಪ–ಪಂಗಡಗಳಿಗೆ ಸೇರಿದವರು ತಮ್ಮ ಮನೆತನದ ಕುಲ–ದೈವವಾದ ಮಲೆಸಿದ್ಧನ ದೈವದ ಆಚರಣೆಯನ್ನು ಮಾಡುತ್ತಾರೆ. ಸಮುದಾಯದಲ್ಲಿ ಈ ಆಚರಣೆಯನ್ನು 'ಕೊಮ್ಡುಸಿದ್ಧ' ಎಂದು ಕರೆಯುತ್ತಾರೆ. ಇದೊಂದು ಮಾಂಸಹಾರ ಸಂಬಂಧಿಯಾದ ಆಚರಣೆಯಾಗಿದೆ. ಮದುವೆಯ ಮೊದಲನೇ ದಿನ ಸಂಜೆಗೆ ಈ ಆಚರಣೆಯನ್ನು ಮಾಡಲಾಗುತ್ತದೆ. 'ಕೊಮ್ಡುಸಿದ್ಧ' ಆಚರಣೆಯ ಪೂಜಾ ವಿಧಾನವನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

**ಕೊಮ್ಡುಸಿದ್ಧ ಅಥವಾ ಮಲೆಸಿದ್ಧನ ಆಚರಣೆ**

ಸಮುದಾಯದಲ್ಲಿ ನಡೆಯುವ ಈ ಆಚರಣೆ ಕುಲದೈವವಾದ ಕಾಲಭೈರವನಿಗೆ ಸಂಬಂಧಿಸಿದ್ದುದಾಗಿದೆ. ಮೊದಲು ಕೋಳಿಯನ್ನು ಕೊಯ್ದು ಅದರಿಂದ ಮಾಂಸಹಾರವನ್ನು ಸಿದ್ಧಪಡಿಸಿ ಭೈರವನಿಗೆ ಅದನ್ನು ಸಮರ್ಪಿಸಲಾಗುತ್ತದೆ. ಇದರ ಜೊತೆಗೆ ಅನ್ನ, ರೊಟ್ಟಿ, ಜವಳಿಕಾಯಿ ಪಲ್ಲೆ, ಬದನೆಕಾಯಿ ಪಲ್ಲೆ ಇತ್ಯಾದಿ ಪದಾರ್ಥಗಳನ್ನು ಸಿದ್ಧಪಡಿಸಿ ದೇವರ ಮುಂದೆ (ತ್ರಿಶೂಲ) ನೆಲದ ಮೇಲೆ ಸಿದ್ಧಪಡಿಸಿದ ಆಹಾರವನ್ನು ರಾಶಿ ಹಾಕಿ ಎಡೆಮಾಡಿ ಪೂಜೆಸಲ್ಲಿಸಲಾಗುತ್ತದೆ.

ಹೀಗೆ ಪೂಜೆ ಸಲ್ಲಿಸಿದ ಆಹಾರವನ್ನು (ಪ್ರಸಾದ) ಬೆಳಗಿನ ಜಾವದಲ್ಲಿ ಅದನ್ನು ನೆಂಟರಿಗೆ (ಬೀಗರು) ನೀಡದೆ ಮದುಮಗನ ರಕ್ತಸಂಬಂಧಿಗಳು (ಅಣ್ಣ–ತಮ್ಮಂದಿರಾಗುವವರು) ಮಾತ್ರ ಊಟ ಮಾಡುವ ಪದ್ಧತಿ ಕಂಡುಬರುತ್ತದೆ. ಈ ಆಚರಣೆಯ ಸಂದರ್ಭದಲ್ಲಿ ದೇವರ ಪೂಜಾ ಕಾರ್ಯಕ್ರಮಗಳನ್ನು ನೆರವೇರಿಸಲು ಕುಟುಂಬದಲ್ಲಿ ಇಬ್ಬರು ವ್ಯಕ್ತಿಗಳು ಇಡೀ ದೇವರ ಪೂಜೆ ಮುಗಿಯುವವರೆಗೆ ಉಪವಾಸದಿಂದಿರುತ್ತಾರೆ. ಮದುವೆಯ ಮನೆಯವರು ಇವರಿಗೆ ಹೊಸ ಬಟ್ಟೆಗಳನ್ನು ನೀಡುತ್ತಾರೆ. ಮಲೆಸಿದ್ಧನ ಪೂಜೆಯಾದ ನಂತರ ಮೊದಲು ಉಪವಾಸದಿಂದಿದ್ದ ಇವರಿಬ್ಬರು ಮೊದಲು ಊಟ ಮಾಡುತ್ತಾರೆ. ನಂತರ ಉಳಿದವರ ಊಟವಾಗುತ್ತದೆ.

**ಬಳೆತೊಡಿಸುವ ಶಾಸ್ತ್ರ**

ಸಮುದಾಯದಲ್ಲಿ ಮದುಮಗ (ನೌರಾ) ಮತ್ತು ಮದುಮಗಳಿಗೆ (ನೌರೀ) ಅರಿಶಿಣ ಹಚ್ಚುವ ಶಾಸ್ತ್ರಕ್ಕೂ ಮೊದಲು ಮದುಮಗ ಅಥವಾ ಮದುಮಗಳ ಕಡೆಯವರು ತಮ್ಮ ತಮ್ಮ ಕುಲಸ್ಥರ ಎಲ್ಲಾ ಮುತ್ತೈದೆಯರಿಗೆ ಕುಲಪದ್ಧತಿಯಂತೆ ಎಲ್ಲರಿಗೂ ಕಡ್ಡಾಯವಾಗಿ ಬಳೆಯನ್ನು ತೊಡಿಸಲಾಗುತ್ತದೆ. ಕುಲಪದ್ಧತಿಯ ಆಚರಣೆಯಂತೆ ಗಂಡಿನ ಕಡೆಯವರು ಮಧುಮಗಳು ಮತ್ತು ಅವಳ ತಾಯಿಗೆ

ಬಳೆಯನ್ನು ತೊಡಿಸುತ್ತಾರೆ. ಇದಾದ ನಂತರ ಮದುಮಗ ಮತ್ತು ಮದುಮಗಳಿಗೆ ಅರಿಶಿಣ ಹಚ್ಚುವ ಕಾರ್ಯಕ್ರಮವನ್ನು ಮಾಡಲಾಗುತ್ತದೆ.

**ಅರಿಶಿಣ ಹಚ್ಚುವುದು**

ಸಮುದಾಯದಲ್ಲಿ ಹೆಣ್ಣಿನ ಕಡೆಯವರು ಗಂಡಿನ ಮದುವೆಯ ಮಂಟಪಕ್ಕೆ ಅಥವಾ ದೇವರ ಮನೆಗೆ ಬಂದು ಪೂಜೆ ಸಲ್ಲಿಸಿ ಅರಿಶಿಣವನ್ನು ತಂದು ಗಂಡಿಗೆ ಅದನ್ನು ಹಚ್ಚಲು ನೀಡುತ್ತಾರೆ. ನಂತರ ಗಂಡಿನ ಕಡೆಯವರು ಹೆಣ್ಣಿನ ದೇವರ ಮನೆ ಅಥವಾ ಹೆಣ್ಣಿನ ಮನೆಯಲ್ಲಿ ಅರಿಶಿಣವನ್ನು ಸಿದ್ಧಪಡಿಸಿ ಅದನ್ನು ಕನ್ಯೆಗೆ (ವಧುವಿಗೆ) ಹಚ್ಚಲು ನೀಡುತ್ತಾರೆ. ಹೀಗೆ ಸಮುದಾಯದಲ್ಲಿ ಪರಸ್ಪರ ಅರಿಶಿಣವನ್ನು ವಿನಿಮಯ ಮಾಡಿಕೊಳ್ಳುವುದು ಕಂಡುಬರುತ್ತದೆ. ಹೀಗೆ ಅರಿಶಿಣವನ್ನು ವಿನಿಮಯ ಮಾಡಿಕೊಂಡು ವಧು ಮತ್ತು ವರನ ಕುಟುಂಬಗಳಲ್ಲಿ ವಧುವಿಗೆ ಮಾವಂದಿರಾಗುವರು, ವರನಿಗೆ ಅತ್ತೆಯಂದಿರು ಜೊತೆಗೆ ಇಬ್ಬರು ಕುಟುಂಬಗಳಿಗೆ ಸೇರಿದ ರಕ್ತ ಸಂಬಂಧಿಗಳು ಸೇರಿಕೊಂಡು ಅರಿಶಿಣವನ್ನು ಹಚ್ಚಿ ಹಸೆಮಣೆಗೆ ವಧು-ವರರನ್ನು ಸಿದ್ಧಗೊಳಿಸುವುದನ್ನು ಕಾಣಬಹುದಾಗಿದೆ.

ವಧು-ವರರಿಗೆ ಅರಿಶಿಣವನ್ನು ಹಚ್ಚುವ ಸಂದರ್ಭದಲ್ಲಿ ಮುತ್ತೈದೆಯರು ವಧು-ವರನ ಮನೆದೈವಗಳ ಕುರಿತು ಹಾಡುಗಳನ್ನು ಹಾಡುತ್ತಾರೆ. ಸಮುದಾಯದ ಮಹಿಳೆಯರು ಮರಾಠಿಯಲ್ಲಿ ದೈವಗಳ ಕುರಿತು ಹಾಡು ಹಾಡುತ್ತ ಅರಿಶಿಣ ಎಣ್ಣೆಯನ್ನು ಹಚ್ಚುತ್ತಿರುವುದನ್ನು ಗುರುತಿಸಬಹುದಾಗಿದೆ.

ಹುಲಿಗೆಮ್ಮಸ – ಸುಡಿಯ ಅಯ್ಯುತೇಲ್ ಚಡಿಯು

ಹುಲೆಗೆಮ್ಮಸ – ಸುಡಿಯ ಅಯ್ಯುತೇಲ್ ಚಡಿಯು

ಯಲ್ಲಮ್ಮಸ – ಸುಡಿಯ ಅಯ್ಯುತೇಲ್ ಚಡಿಯು

ಯಲ್ಲಮ್ಮಸ – ಸುಡಿಯ ಅಯ್ಯುತೇಲ್ ಚಡಿಯು

ಭೈರವಸ – ಸುಡಿಯ ಅಯ್ಯುತೇಲ್ ಚಡಿಯು

ಭೈರವಸ – ಸುಡಿಯ ಅಯ್ಯುತೇಲ್ ಚಡಿಯು

ಮಾಯಮ್ಮಸ – ಸುಡಿಯ ಅಯ್ಯುತೇಲ್ ಚಡಿಯು

ಮಾಯಮ್ಮಸ – ಸುಡಿಯ ಅಯ್ಯುತೇಲ್ ಚಡಿಯು

ಎಂದು ದೈವಗಳ ಹೆಸರುಗಳನ್ನು ಎರಡೆರಡು ಭಾರಿ ಹೇಳುತ್ತಾ ಸಮುದಾಯದ ಮಹಿಳೆಯರು ಮುತ್ತೈದೆಯರೆಲ್ಲರೂ ಸೇರಿ ಮಧುಮಗ-ಮಧುಮಗಳಿಗೆ ಅರಿಶಿಣವನ್ನು ಹಚ್ಚುತ್ತಾರೆ. ಇದಾದ ನಂತರ ಇಬ್ಬರಿಗೂ ಸ್ನಾನ ಮಾಡಿಸಲಾಗುತ್ತದೆ. ಸಮುದಾಯದಲ್ಲಿ ವರನ ಮನೆಯವರು ಅರಿಶಿಣ ಹಚ್ಚಿ, ವರನ ಕಿವಿಗೆ ಮುದ್ರೆಗಳನ್ನು (ಕಾಂಚೀರ-ಕರ್ಣಕುಂಡಲ) ಹಾಕುತ್ತಾರೆ. ಇದಾದ ನಂತರ ಸ್ನಾನ ಮಾಡಿಸಿ ಹಸೆಮಣೆಗೆ ಮಧುಮಗನನ್ನು ಸಿದ್ಧಗೊಳಿಸುತ್ತಾರೆ.

ಇದಾದ ನಂತರ ಹೆಣ್ಣು-ಗಂಡು ಇಬ್ಬರೂ ಪರಸ್ಪರ ಎದುರು-ಬದರು ಕುಳಿತು ಇಬ್ಬರೂ ಸೇರಿ ತಾಳಿಯ ಮಣಿಗಳನ್ನು ಎರಡೂ ಕಡೆಯಿಂದ ಪೋಣಿಸಲಾಗುತ್ತದೆ. ತಾಳಿ ಮಣಿಯನ್ನು ಮದುವೆಯ ಚಪ್ಪರ (ಮಂಟಪ)ದ ಕೆಳಗೆ ಕಂಬಳಿಯ ಗದ್ದುಗೆಯ ಮೇಲೆ ಇಬ್ಬರು ಕುಳಿತು ಪೋಣಿಸಲಾಗುತ್ತದೆ. ಹೀಗೆ ಮದುವೆಯ ಮೊದಲನೇ ದಿನದ ಕಾರ್ಯಗಳು ದೇವರ ಕಾರ್ಯಗಳಿಂದ ಹಿಡಿದು ಮದುಮಕ್ಕಳನ್ನು ಮಾಡುವವರೆಗೆ ನಡೆಯುತ್ತದೆ.

ಹಂಡಿಜೋಗಿಗಳಲ್ಲಿ ಯಲ್ಲಮ್ಮನನ್ನು ಕುಲ-ದೈವ (ಮನೆದೈವ) ಮಾಡಿಕೊಂಡಿರುವವರು ತಮ್ಮ ಮದುವೆಗಳಲ್ಲಿ ಯಲ್ಲಮ್ಮನಿಗೆ ಸಿಹಿ ಆಹಾರವನ್ನು ಎಡೆಮಾಡಿ ಪೂಜಿಸುತ್ತಿರುವುದು ಕಂಡುಬರುತ್ತದೆ. ಇವರು ಯಲ್ಲಮ್ಮನಿಗೆ ಹೋಳಿಗೆ, ತುಪ್ಪ, ಅನ್ನ ಇತ್ಯಾದಿಗಳನ್ನು ಎಡೆ ಮಾಡಿ ಪೂಜೆ ಸಲ್ಲಿಸುತ್ತಾರೆ.

ಹಾಗೆಯೇ ಸಮುದಾಯದಲ್ಲಿ ಹುಲಿಗೆಮ್ಮನನ್ನು ಮನೆದೈವ ಮಾಡಿಕೊಂಡಿರುವವರು ಕೇವಲ ಅನ್ನ ಮತ್ತು ಬೆಲ್ಲವನ್ನು ರಾಶಿಹಾಕಿ ದೇವರ ಪೂಜೆಯನ್ನು ಮಾಡುತ್ತಾರೆ.

**ಗುಂಡು ಭರಮಪ್ಪನ ಆಚರಣೆ**

ಸಮುದಾಯದಲ್ಲಿ ವಿವಾಹ ಸಂದರ್ಭದಲ್ಲಿ ಯಲ್ಲಮ್ಮನನ್ನು ಮನೆದೈವ ಮಾಡಿಕೊಂಡಿರುವವರು ಈ ಆಚರಣೆಯನ್ನು ಮಾಡುತ್ತಾರೆ. ಗುಂಡು ಭರಮಪ್ಪನಿಗೆ ಸಿಹಿ ಊಟವನ್ನು ಎಡೆಯಾಗಿ ನೀಡಲಾಗುತ್ತದೆ. ಸಮುದಾಯದಲ್ಲಿ ಮಾಡುವ ಗುಂಡು ಭರಮಪ್ಪನ ಆಚರಣೆಯನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

ಮದುವೆ ಮನೆಯವರು ಇಂತಿಷ್ಟು ಸೇರು ಬೇಳೆ, ಅನ್ನ ಹಾಗೂ ತುಪ್ಪದಿಂದ ಸಿಹಿ ಅಡುಗೆಯನ್ನು ತಯಾರಿಸುತ್ತಾರೆ. ದೇವರ ಮನೆಯಲ್ಲಿ ನೆಲವನ್ನು ಸಾರಿಸಿ ಅದರ ಮೇಲೆ ಬಾಳೆ ಎಲೆಯನ್ನು ಹಾಕಿ ಅದರಲ್ಲಿ ಹೋಳಿಗೆ, ಅನ್ನ, ತುಪ್ಪ ಎಲ್ಲವನ್ನು ರಾಶಿಯಂತೆ ಹಾಕಿ ಪೂಜೆ ಮಾಡಲಾಗುತ್ತದೆ. ಈ ಆಚರಣೆಯನ್ನು ಸಮುದಾಯದಲ್ಲಿ ಮಧ್ಯಾಹ್ನದ ವೇಳೆಗೆ ಮಾಡಲಾಗುತ್ತದೆ. ಗುಂಡು ಭರಮಪ್ಪನನ್ನು ಪೂಜೆ ಮಾಡುವವರು ಉಪವಾಸದಿಂದಿರಬೇಕು. ಸಮುದಾಯದಲ್ಲಿ ಗುಂಡು ಭರಮಪ್ಪನನ್ನು ಮಾಡುವವರು, ಅಥವಾ ಆ ಮದುವೆ ಮನೆಯ ಅಣ್ಣ-ತಮ್ಮಂದಿರು ಅಥವಾ ರಕ್ತಸಂಬಂಧಿಕರನ್ನು ಹೊರತು ಪಡಿಸಿ ನಂಟರು ಅಥವಾ ಬೇರಾರೂ ಕೂಡ ಆ ದೇವರ ಕೋಣೆಗೆ ಹೋಗುವಂತಿಲ್ಲ. ಜೊತೆಗೆ ಆ ದೇವರನ್ನು ನೋಡುವಂತಿಲ್ಲ. ಭರಮಪ್ಪನಿಗೆ ಪೂಜೆ ಮಾಡುವವರು ಬರಿ ಮೈಯಲ್ಲಿದ್ದು, ಜನಿವಾರದ ರೀತಿಯ ಒಂದು ಬಿಳಿದಾರವನ್ನು ಕೊರಳಲ್ಲಿ ಧರಿಸಿರಬೇಕು. ಪೂಜೆಯಾದ ನಂತರ ಈ ಊಟವನ್ನು ಮಾಡುವವರೆಲ್ಲರೂ ಕೊರಳಲ್ಲಿ ಜನಿವಾರ ಧರಿಸಿ ಊಟ ಮಾಡುತ್ತಾರೆ. ಈ ಆಚರಣೆಯಲ್ಲಿ ಊಟ ಮಾಡಿದ ತಟ್ಟೆಯನ್ನಾಗಲಿ ಅಥವಾ ಉಳಿದ ಅನ್ನವನ್ನಾಗಲಿ ಎಲ್ಲೂ ಚೆಲ್ಲುವಂತಿಲ್ಲ. ಇದೆಲ್ಲವನ್ನೂ ಒಂದು ಪಾತ್ರೆಯಲ್ಲಿ ಹಾಕಿಕೊಂಡು (ರಾಶಿಯಲ್ಲಿ ಉಳಿದ ಅನ್ನಸಹಿತ) ಸಂಜೆ ಸೂರ್ಯ ಮುಳುಗುವ ಹೊತ್ತಿಗೂ ಮುಂಚೆ ಮದುವೆ ಮನೆಯ ರಕ್ತಸಂಬಂಧಿಕರೇ ಅದನ್ನು ತೆಗೆದುಕೊಂಡು ಹೋಗಿ ಹರಿಯುವ ಹೊಳೆ ಅಥವಾ ನೀರಿರುವ ಬಾವಿಯಲ್ಲಿ ಹಾಕಿ ಬರುತ್ತಾರೆ.

ಸಮುದಾಯದ ವಕ್ತೃಗಳು ಈ ಆಚರಣೆಯ ಕಟ್ಟುನಿಟ್ಟಿನ ನಿಯಮವನ್ನು ವಿವರಿಸುತ್ತ ಇಂದು ನೆಂಟರು ಹಾಗೂ ಸಮುದಾಯದ ಬಂಧುಗಳು ಸಹ ಈ ಊಟದಲ್ಲಿ ಪಾಲ್ಗೊಳ್ಳುತ್ತಾರೆ. ಅವರಿಗೆ ಪ್ರತ್ಯೇಕ ಕೋಣೆಯಲ್ಲಿ ಈ ಊಟದ ವ್ಯವಸ್ಥೆ ಮಾಡಲಾಗುತ್ತದೆ ಎಂದು ವಿವರಿಸುತ್ತ ಅವರಿಗೆ ದೇವರು ಕಾಣದಂತೆ ಒಂದು ಬಟ್ಟೆಯನ್ನು ಅಡ್ಡಲಾಗಿ ಕಟ್ಟಲಾಗುತ್ತದೆ ಎಂದು ವಿವರಿಸುತ್ತಾರೆ.

ಸಮುದಾಯದಲ್ಲಿ ಇನ್ನೊಂದು ಉಪ-ಪಂಗಡಕ್ಕೆ ಸೇರಿದವರು ಹುಲಿಗೆಮ್ಮನನ್ನು ಮನೆದೈವ ಮಾಡಿಕೊಂಡಿರುವವರು ಇದೇ ರೀತಿಯ ಆಚರಣೆಯನ್ನು ಮಾಡಿದರೂ ಅವರು ಹೋಳಿಗೆಯನ್ನು ಮಾಡುವುದಿಲ್ಲ. ಕೇವಲ ಅನ್ನ ಮತ್ತು ಬೆಲ್ಲವನ್ನು ರಾಶಿ ಮಾಡಿ ಪೂಜಿಸುತ್ತಾರೆ. ಈ ಸಂದರ್ಭದಲ್ಲಿನ ಉಳಿದ ಎಡೆಯನ್ನು ಅವರು ಬಾವಿಗೆ ಹಾಕುವುದಿಲ್ಲ ಬದಲಾಗಿ ಚಪ್ಪರದ ಕೆಳಗೆ ಒಂದು ಗುಂಡಿಯನ್ನು ತೋಡಿ ಅದರಲ್ಲಿ ಆ ಅನ್ನ ನೀರನ್ನು ಹಾಕಿ ಮುಚ್ಚಲಾಗುತ್ತದೆ.

ಹೀಗೆ ಸಮುದಾಯದಲ್ಲಿ ಯಲ್ಲಮ್ಮ ಹಾಗೂ ಹುಲಿಗೆಮ್ಮ ದೈವಗಳಿಗೆ ಸಿಹಿ ಅಡುಗೆಯನ್ನು ಮಾಡಲಾಗುತ್ತದೆ. ಮಲೆಸಿದ್ದನಿಗೆ (ಭೈರವ) ಮಾತ್ರ ಮಾಂಸಹಾರವನ್ನು ಮಾಡುವುದು ಕಂಡುಬರುತ್ತದೆ.

**ವೀಳ್ಯೆ ಒಡೆಯುವ ಶಾಸ್ತ್ರ**

ಹಂಡಿಜೋಗಿಗಳಲ್ಲಿ ವಿವಾಹ ಸಂದರ್ಭದಲ್ಲಿ ನಡೆಯುವ ತುಂಬಾ ಸಂಪ್ರದಾಯಬದ್ಧ ಹಾಗೂ ಕಟ್ಟುನಿಟ್ಟಿನ ಆಚರಣೆ ಎಂದರೆ ವೀಳ್ಯ ಹಂಚುವ ಶಾಸ್ತ್ರ. ಇದು ಸಮುದಾಯದ ಎಲ್ಲಾ ಕುಲಬಾಂಧವರನ್ನು ಒಳಗೊಳ್ಳುವ ಆಚರಣೆಯಾಗಿದೆ. ಸಮುದಾಯದ ಪ್ರತಿಯೊಂದು ಕುಟುಂಬದವರು ಹಾಗೂ ತಮ್ಮ ನೆಲೆಯಲ್ಲಿ ನೆಲೆಸಿರುವ ಪ್ರತಿಯೊಂದು ಕುಟುಂಬ ಜೊತೆಗೆ ಕಟ್ಟೆಮನೆಗಳಿಗೆ ಸೇರಿದ ಸಮುದಾಯದ ಪ್ರತಿಯೊಂದು ಕುಟುಂಬಕ್ಕೂ ವೀಳ್ಯವನ್ನು ಹಂಚಲಾಗುತ್ತದೆ.

ಈ ಆಚರಣೆಯಲ್ಲಿ ಸಮುದಾಯದ ಕುಲಸ್ಥರು, ದೈವಸ್ಥರು ಸಂಬಂಧಿಕರೆಲ್ಲರೂ ಪಾಲ್ಗೊಳ್ಳುತ್ತಾರೆ. ಹೆಣ್ಣಿನ ಮನೆಯ ಮದುವೆಯ ಚಪ್ಪರದ ಕೆಳಗೆ ಈ ಕಾರ್ಯ ನಡೆಯುತ್ತದೆ. ಸಮುದಾಯದ ಎಲ್ಲಾ ಕುಲಸ್ಥರು, ದೈವಸ್ಥರಿಗೆ ಆದೇಶ್‌ಮಾಡಿ ದಳವಾಯಿಯು ಚಪ್ಪರದ ಕೆಳಗೆ ಕರಿಯ ಕಂಬಳಿ ಗದ್ದುಗೆಯನ್ನು ಹಾಸುತ್ತಾನೆ. ನಂತರ ಗದ್ದುಗೆಯ ಮೇಲೆ ಅಕ್ಕಿಯನ್ನು ಎರಚಿ ಗದ್ದುಗೆಗೆ ದಳವಾಯಿ ಮನೆತನಕ್ಕೆ ಸೇರಿದವರು ಪೂಜೆ ಸಲ್ಲಿಸುತ್ತಾರೆ. ಸಮುದಾಯದ ಕುಲ-ಗೌಡರು (ಹರಿಪೀರ್), ಭಂಡಾರಿ ಇತ್ಯಾದಿ ಸಮುದಾಯದ ಗುರು-ಹಿರಿಯರು ಆದೇಶ್‌ಮಾಡಿ ಗದ್ದುಗೆಯ ಮುಂಭಾಗದಲ್ಲಿ ಕೂಡುತ್ತಾರೆ. ನಂತರ ಗದ್ದುಗೆಯ ಮೇಲೆ ಎಲೆ, ಅಡಿಕೆ, ತೆಂಗಿನಕಾಯಿ ಇತ್ಯಾದಿ ವಸ್ತುಗಳನ್ನು ಇಡಲಾಗುತ್ತದೆ.

ಈ ಸಂದರ್ಭದಲ್ಲಿ ಗಂಡಿನ ತಂದೆ ಮತ್ತು ಹೆಣ್ಣಿನ ತಂದೆ ಇಬ್ಬರು ಕುಲಸ್ಥರು, ದೈವಸ್ಥರ ಮುಂದೆ ನಿಂತು ಪರಸ್ಪರ ವೀಳ್ಯವನ್ನು ವಿನಿಮಯಮಾಡಿಕೊಳ್ಳುತ್ತ ದೈವಸ್ಥರ ಮುಂದೆ ಇಬ್ಬರೂ ಮಾತು ಕೊಡುತ್ತಾರೆ. ಅದೇನೆಂದರೆ, ಹೆಣ್ಣಿನ ತಂದೆ ವೀಳ್ಯವನ್ನು ಹಿಡಿದುಕೊಂಡು ಅದನ್ನು ಗಂಡಿನ ತಂದೆಗೆ ಕೊಡುತ್ತ ಈ ಮಾತನ್ನು ಹೇಳುತ್ತಾನೆ.

**ಹೆಣ್ಣಿನ ತಂದೆ:** ನನ್ನ ಮಗಳನ್ನು ನಿಮ್ಮ ಮಗನಿಗೆ ಕೊಡುತ್ತೇನೆ.

**ಗಂಡಿನ ತಂದೆ:** ನಿಮ್ಮ ಮಗಳನ್ನು ನನ್ನ ಮಗನಿಗೆ ತಂದುಕೊಳ್ಳುತ್ತೇನೆ. ಎಂದು ಹೇಳುತ್ತ ಪರಸ್ಪರರು ಎಲ್ಲಾ ದೈವಸ್ಥರ ಎದುರಲ್ಲಿ ಎಲೆ ಅಡಿಕೆ ತಟ್ಟೆಯನ್ನು ಬದಲಾಯಿಸಿಕೊಂಡು, ಇಬ್ಬರು ಪರಸ್ಪರ ಬಾಯಲ್ಲಿ ಸಕ್ಕರೆಯನ್ನು ಹಾಕಿಕೊಳ್ಳುತ್ತಾರೆ. ಇದಾದ ನಂತರ ಅಲ್ಲಿ ನೆರೆದಿರುವ ಎಲ್ಲರಿಗೂ ಸಕ್ಕರೆಯನ್ನು ಹಂಚಲಾಗುತ್ತದೆ.

ಇದಾದ ನಂತರ ಮೊದಲು ಹಿರಿಯರು ತಮ್ಮ ಸಮುದಾಯದ ಕುಲಸ್ಥರು ಕುಲದ ಹಿರಿಯ ಮನೆತನದ ಪಂಗಡಗಳಿಗೆ ಮೊದಲ ವೀಳ್ಯವನ್ನು ಹಂಚಲಾಗುತ್ತದೆ. ಪ್ರಮುಖವಾಗಿ ಸಮುದಾಯದ ಕುಲಗೌಡ (ಪುಳಸ್ಕರ್ ಪಾಟೀಲ್), ದಳವಾಯಿ ಮನೆತನ, ಮದುರ್‌ಕೋರ್ ಪಂಗಡ, ಗಣಾಚಾರಿ, ಡೋಕಾರಿ, ಭಂಡಾರಿ ಇವರುಗಳಿಗೆ ಸಮುದಾಯದಲ್ಲಿ ಮೊಟ್ಟಮೊದಲಿಗೆ ಮದುವೆಯ ಮನೆಯವರು ಐದೈದು ಎಲೆ, ಐದೈದು ಅಡಿಕೆಯೊಂದಿಗೆ ವೀಳ್ಯವನ್ನು ಕೊಡಲಾಗುತ್ತದೆ. ಸಮುದಾಯದಲ್ಲಿ ಇವರೇ ಪ್ರಧಾನ ಮುಖಂಡರಾಗಿರುತ್ತಾರೆ. ನ್ಯಾಯಪಂಚಾಯ್ತಿಗಳು ಇವರ ಸಮ್ಮುಖದಲ್ಲಿಯೇ ನಡೆಯುವುದನ್ನು ಕಾಣಬಹುದಾಗಿದೆ.

ಸಮುದಾಯದ ಕಟ್ಟೆಮನೆಗಳಲ್ಲಿ ಮೇಲಿನ ಪಂಗಡಗಳಿಗೆ ಸೇರಿದವರೇ ಮುಖಂಡರುಗಳಾಗಿರುತ್ತಾರೆ. ಇವರ ನಂತರ ತಮ್ಮ ವ್ಯಾಪ್ತಿಯಲ್ಲಿ ಇರುವ ಕಟ್ಟೆಮನೆ ಬಾಪ್ತುಗಳಿಗೆ ವೀಳ್ಯವನ್ನು ನೀಡಲಾಗುತ್ತದೆ.

ಚಿತ್ರದುರ್ಗ, ಬಳ್ಳಾರಿ, ದಾವಣಗೆರೆ ಪ್ರದೇಶದಲ್ಲಿ ಕಂಡುಬರುವ ಹಂಡಿಜೋಗಿ ಸಮುದಾಯದ ಕಟ್ಟೆಮನೆಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

೧. ಹೊನ್ನಟ್ಟಿ ಕಟ್ಟೆಮನೆ ಬಾಪ್ತು

೨. ಹೊಸೂರು ಕಟ್ಟೆಮನೆ ಬಾಪ್ತು

೩. ಹರಾಳು ಕಟ್ಟೆಮನೆ ಬಾಪ್ತು

೪. ಮತ್ತೀಹಳ್ಳಿ ಕಟ್ಟೆಮನೆ ಬಾಪ್ತು

೫. ಕೂಲಹಳ್ಳಿ ಕಟ್ಟೆಮನೆ ಬಾಪ್ತು

೬. ನೀರ್ಲಿಗಿ ಕಟ್ಟೆಮನೆ ಬಾಪ್ತು

೭. ರಾಮಕನಹಳ್ಳಿ ಕಟ್ಟೆಮನೆ ಬಾಪ್ತು

೮. ದೇವಗೊಂಡನಹಳ್ಳಿ ಕಟ್ಟೆಮನೆ ಬಾಪ್ತು

೯. ದೇವರಹಳ್ಳಿ ಕಟ್ಟೆಮನೆ ಬಾಪ್ತು ಎಂದು ತಮ್ಮ ಸಮುದಾಯದ ಒಂಭತ್ತು ಕಟ್ಟೆಮನೆ ಬಾಪ್ತುಗಳಿಗೆ ಪ್ರತಿಯೊಂದು ಕಟ್ಟೆಮನೆಯ ಬಾಪ್ತಿಗೆ ಐದೈದು ಎಲೆ, ಐದೈದು ಅಡಿಕೆಯನ್ನು ನೀಡಲಾಗುತ್ತದೆ. ಇದನ್ನು ಮೇಲಿನ ಕಟ್ಟೆಮನೆಗಳಿಗೆ ಸೇರಿದ ಯಾರಾದರೂ ಒಬ್ಬರು ಸಂಗ್ರಹಿಸಿಕೊಂಡು ಆಯಾ ಕಟ್ಟೆಮನೆಗೆ ನೀಡುತ್ತಾರೆ.

ಕಟ್ಟೆಮನೆಗಳು ಮತ್ತು ಕುಲಗೌಡರಿಗೆ ವೀಳ್ಯ ಹಂಚಿದ ನಂತರ ಮದುವೆಯ ಗಂಡು-ಹೆಣ್ಣಿನ ಕಡೆಯ ಎಲ್ಲಾ ಬಂಧುಗಳಿಗೆ ಜೊತೆಗೆ ಮದುವೆಗೆ ಆಗಮಿಸಿದ ಎಲ್ಲರಿಗೂ ವೀಳ್ಯವನ್ನು ಹಂಚಲಾಗುತ್ತದೆ. ಈ ಸಂದರ್ಭದಲ್ಲಿ ಕಟ್ಟೆಮನೆಗಳು ಹಾಗೂ ಸಮುದಾಯದ ಕುಲದ ಹಿರಿಯ ಮನೆತನದವರಿಗೆ ವೀಳ್ಯ ನೀಡುವುದನ್ನು ಬಿಟ್ಟಿದ್ದಲ್ಲಿ ಮದುವೆಯ ಬಂಧುಗಳು ಕಟ್ಟೆಮನೆಗಳಿಗೆ ದಂಡವನ್ನು ಕಟ್ಟಬೇಕಾಗುತ್ತದೆ.

**ಗಂಗೆ ಪೂಜೆ**

ಸಮುದಾಯದಲ್ಲಿ ವೀಳ್ಯವನ್ನು ಹಂಚಿದ ನಂತರ ಧಾರೆ ಮುಹೂರ್ತಕ್ಕೂ ಮೊದಲು ಗಂಗೆಪೂಜೆಯ ಶಾಸ್ತ್ರವನ್ನು ಮಾಡಲಾಗುತ್ತದೆ. ಮದುವೆಯ ಮುಖಂಡತ್ವವನ್ನು ವಧು-ವರನ ಬಂಧುಗಳು (ರಕ್ತಸಂಬಂಧಿಗಳು) ವಹಿಸಿಕೊಂಡಿರುತ್ತಾರೆ. ಮಾಂಗಲ್ಯಶಾಸ್ತ್ರ ಕಾರ್ಯಕ್ರಮ ಸಮುದಾಯದಲ್ಲಿ

ತಂದೆ -ತಾಯಿ (ವರನ ಕಡೆಯವರು)

(ಬಾ - (ಆಯೀ) ಇಲ್ಲವೆ ಹುಡುಗನ ಚಿಕ್ಕಪ್ಪ-ಚಿಕ್ಕಮ್ಮ

(ಆಪಾ) (ಮಾವ್‌ಸಿ) ಅಥವಾ ವರನ ಅಣ್ಣ-ಅತ್ತಿಗೆ

(ದಾದಾ)-(ಅತ್ತಿಗೆ) ಇವರುಗಳಲ್ಲಿ ಯಾರಾದರೂ ಒಬ್ಬರು ಇಡೀ ಮದುವೆಯ ನೇತೃತ್ವವನ್ನು ವಹಿಸಿಕೊಂಡಿರುತ್ತಾರೆ.

ವಧು-ವರನ ಬಂಧುಗಳಲ್ಲಿ ಮುಖ್ಯವಾಗಿ ಮುತ್ತೈದೆಯರು ಹಾಗೂ ಸಮುದಾಯದ ಮಹಿಳೆಯರೆಲ್ಲರೂ ವಾದ್ಯಗಳೊಂದಿಗೆ ನೀರಿರುವ ನಲ್ಲಿ (ನಳ) ಬೋರ್‌ವೆಲ್ (ಬಾವಿ)ಗಳಿಗೆ ಕಾಲಿ ಬಿಂದಿಗೆಗಳು ಮತ್ತು ಮಣ್ಣಿನ ಕುಂಭಗಳನ್ನು ತೆಗೆದುಕೊಂಡು ಗಂಗೆಪೂಜೆಗೆ ಹೋಗುತ್ತಾರೆ. ಅಲ್ಲಿ ಕರಿಕಂಬಳಿಯ ಗದ್ದುಗೆಯನ್ನು ಹಾಸಿ ಅದರ ಮೇಲೆ ನೀರು ತುಂಬಿದ ಬಿಂದಿಗೆಗಳು (ಕೊಡಗಳು) ಹಾಗೂ ಮಣ್ಣಿನ ಕುಂಭಗಳನ್ನಿರಿಸಿ ಅವುಗಳಿಗೆ ಕಂಕಣ ಕಟ್ಟಿ ಪೂಜೆ ಸಲ್ಲಿಸಲಾಗುತ್ತದೆ. ನಂತರ ಸಮುದಾಯದ ಐದು ಜನ ಮುತ್ತೈದೆಯರಿಗೆ ಎಲೆ, ಅಡಿಕೆ, ಅಕ್ಕಿಯನ್ನು ಉಡಿ ತುಂಬಿ ಅವರ ಕೊರಳಿಗೆ ಬಿಳಿದಾರವನ್ನು ಹಾಕಲಾಗುತ್ತದೆ. ನಂತರ ಕುಂಭಗಳಲ್ಲಿ ಎಲೆ, ಅಡಿಕೆ, ಅರಿಶಿಣ, ಕೊಂಬು ಹಾಗೂ ಪ್ರತೀ ಕುಂಭಕ್ಕೆ ೨೫ ಪೈಸೆ ನಾಣ್ಯವನ್ನು ಹಾಕಲಾಗುತ್ತದೆ. ಈ ಕುಂಭಗಳಲ್ಲಿನ ಒಂದು ದೊಡ್ಡ ಕುಂಭವನ್ನು ಮದುವೆಯ ಕಾರ್ಯ ಮಾಡುವ ತಾಯಿ ಅಥವಾ ಅತ್ತಿಗೆ ಅಥವಾ ಚಿಕ್ಕಮ್ಮ ಇವರಲ್ಲಿ ಯಾರಾದರೂ ಒಬ್ಬರಿಗೆ ಎಲೆ, ಅಡಿಕೆ, ಅಕ್ಕಿಯನ್ನು ಉಡಿತುಂಬಿ ದೊಡ್ಡ ಕುಂಭವನ್ನು ಅವರಿಗೆ ಹೊರಿಸಲಾಗುತ್ತದೆ. ಹೀಗೆ ಗಂಗೆ ಪೂಜೆಗೆ ಹೋದವರು ಮದುವೆಯ ಚಪ್ಪರದ ಹತ್ತಿರ ಬಂದ ತಕ್ಷಣ ಮದುಮಕ್ಕಳು, ಆ ಕುಂಭಗಳಿಗೆ ಮತ್ತು ತಾಯಿಗೆ ನಮಸ್ಕರಿಸಿ (ಕೈಮುಗಿದು) ಪೂಜೆ ಮಾಡಿ ತೆಂಗಿನಕಾಯಿ ಹೊಡೆದು ಪೂಜೆ ಮಾಡಿ ಅವರಿಗೆ ನಮಸ್ಕರಿಸುತ್ತಾರೆ. ಗಂಗೆಪೂಜೆಗೆ ಸಮುದಾಯದ ಐದು ಜನ ಜೋಗಪ್ಪಗಳು ಸಹಾಯಕರಾಗಿ ಕಂಡುಬರುತ್ತಾರೆ.

**ಸುರಿಗೆ ನೀರು ಹಾಕುವಶಾಸ್ತ್ರ**

ಸುರಿಗೆಯಲ್ಲಿ ಮಧುಮಗ ಮತ್ತು ಮಧುಮಗಳ ತಾಯಿ ಭಾಗವಹಿಸುತ್ತಾರೆ. ಐದು ಮಣ್ಣಿನ ಮಡಿಕೆಗಳಲ್ಲಿ ನೀರನ್ನು ತುಂಬಿಸಿ ಅವುಗಳಲ್ಲಿ ನಾಲ್ಕು ಕುಂಭಗಳನ್ನು ನಾಲ್ಕು ಮೂಲೆಯಲ್ಲಿ ಚಚ್ಚೌಕಾರವಾಗಿ ಇಡಲಾಗುತ್ತದೆ. ನಂತರ ಆ ಕುಂಭಗಳ ತುದಿಗೆ ಐದು ಸುತ್ತು ದಾರವನ್ನು ಸುತ್ತುತ್ತಾರೆ. ಆ ನಾಲ್ಕು ಕುಂಭಗಳ ಮಧ್ಯದಲ್ಲಿ ಕೂರಲು ಒಂದು ಮಣೆಯನ್ನು ಹಾಕುತ್ತಾರೆ. ಕುಂಭಗಳಿಗೆ ದಾರ ಸುತ್ತಿದ ನಂತರ ಅವುಗಳಿಗೆ ಪೂಜೆ ಸಲ್ಲಿಸಲಾಗುತ್ತದೆ. ನಂತರ ಮಧುಮಗ ಆ ಕುಂಭಗಳಿಗೆ ನಮಸ್ಕರಿಸಿ ತನ್ನ ಬಲಗಾಲನ್ನಿಟ್ಟು ಒಳಗಡೆಯ ಮಣೆಯ ಮೇಲೆ ಕೂರುತ್ತಾನೆ. ಮುತ್ತೈದೆ ಮಹಿಳೆಯರು ಸುರಿಗೆಯನ್ನು ಸುತ್ತುತ್ತಾ ಕುಂಭಗಳಲ್ಲಿನ ನೀರನ್ನು ಮದುಮಗ ಮತ್ತು ಅವನ ತಾಯಿಗೆ 'ವಡಾ ವಡಾ' ಎಂದು ನೀರು ಹಾಕುತ್ತಾರೆ. ಮದುಮಗಳಿಗೂ ಇದೇ ವಿಧಾನದಲ್ಲಿ ಸ್ನಾನ ಮಾಡಿಸಲಾಗುತ್ತದೆ. ಹೀಗೆ ಸುರಿಗೆ ನೀರಿನ ಸ್ನಾನ ಮಾಡಿಸಿ ಅವರಿಗೆ ಆರತಿ ಮಾಡಿ ಹಸೆಮಣೆಗೆ ವಧು-ವರನನ್ನು ಸಿದ್ಧಗೊಳಿಸುತ್ತಾರೆ.

ಸುರಿಗೆ ನೀರಿನ ಸ್ನಾನ ಮುಗಿದ ನಂತರ ವರನು ಬಿಳಿಯ ಕಚ್ಚೆ ಪಂಜೆ, ಬಿಳಿಯ ಅಂಗಿ, ತಲೆಗೆ ಬಿಳಿಯ ವಸ್ತ್ರವನ್ನು ಸುತ್ತಿಕೊಂಡು ಹಸೆಮಣೆಗೆ ಸಿದ್ದವಾಗಿ ಬರುತ್ತಾನೆ. ತಲೆಯಲ್ಲಿ ಬಾಸಿಂಗವನ್ನು ಕಟ್ಟಲಾಗುತ್ತದೆ. ವಧುವೂ ಸಹ ಬಿಳಿಯ ಸೀರೆಯುಟ್ಟು ಬಾಸಿಂಗದೊಂದಿಗೆ ಹೂ ಮುಡಿದು ಹಸೆಮಣೆಗೆ ಸಿದ್ಧಳಾಗಿ ಬರುತ್ತಾಳೆ. ಸಮುದಾಯದಲ್ಲಿ ಗಂಡು ಹೆಣ್ಣು ತಾಳಿಕಟ್ಟುವವರೆಗೆ ಪರಸ್ಪರ ಒಬ್ಬರ ಮುಖ ಒಬ್ಬರು ನೋಡುವಂತಿಲ್ಲ. ಮದುವೆ ಮಂಟಪದಲ್ಲಿ ಗಂಡು-ಹೆಣ್ಣು ಇಬ್ಬರೂ ಒಬ್ಬರ ತಲೆಯ ಮೇಲೆ ಒಬ್ಬರು ಎಳ್ಳು-ಜೀರಿಗೆಯನ್ನು ಸುರಿಯುತ್ತಾರೆ. (ಹಾಕುತ್ತಾರೆ)

**ತಾಳಿಕಟ್ಟುವ ಶಾಸ್ತ್ರ**

ಹಂಡಿಜೋಗಿಗಳಲ್ಲಿ ವಿವಾಹ ಸಂದರ್ಭದಲ್ಲಿ ಗಂಡು ಹೆಣ್ಣಿನ ಕೊರಳಿಗೆ ತಾಳಿಯನ್ನು (ಕರಿಮಣಿಸರ) ಕಟ್ಟುತ್ತಾನೆ. ಎಳ್ಳು-ಜೀರಿಗೆ ಹಾಕುವ ಶಾಸ್ತ್ರದ ನಂತರ ಗಂಡು-ಹೆಣ್ಣು ಇಬ್ಬರೂ ಪರಸ್ಪರ ಹೂವಿನ ಹಾರಗಳನ್ನು ಬದಲಾಯಿಸಿಕೊಳ್ಳುತ್ತಾರೆ. ಕುಟುಂಬದಲ್ಲಿನ ಹುಡುಗನ ಅಥವಾ ಗಂಡಿನ ಚಿಕ್ಕಪ್ಪ ಅಥವಾ ಹೆಣ್ಣಿನ ಚಿಕ್ಕಪ್ಪ ಮಂತ್ರೋಪದೇಶವನ್ನು ಹೇಳುತ್ತಾ ಹೆಣ್ಣಿನ ಕೊರಳಿಗೆ ಗಂಡಿನಿಂದ ತಾಳಿಯನ್ನು ಕಟ್ಟಿಸುತ್ತಾನೆ. ಆ ಮೂಲಕ ವಿವಾಹಕಾರ್ಯ ನೆರವೇರುತ್ತದೆ.

ಹಂಡಿಜೋಗಿಗಳಲ್ಲಿ ಮಾಂಗಲ್ಯಶಾಸ್ತ್ರ (ತಾಳಿಕಟ್ಟುವುದು) ಮುಗಿದ ನಂತರ ಅನೇಕ ಸಂಪ್ರದಾಯಗಳನ್ನು ವಧು-ವರನ ಕಡೆಯವರು ಮಾಡುವುದು ಕಂಡುಬರುತ್ತದೆ. ಈ ಸಂಪ್ರದಾಯಗಳು ಸಮುದಾಯದಲ್ಲಿ ಆಯಾ ಉಪ ಪಂಗಡಗಳ ಮನೆ ದೈವಗಳಿಗೆ ಸಂಬಂಧಿಸಿದಂತೆ ವಿಶಿಷ್ಟವಾಗಿರುವುದು ಕಂಡುಬರುತ್ತದೆ.

ಸಮುದಾಯದಲ್ಲಿ ಯಲ್ಲಮ್ಮನನ್ನು ಮನೆದೈವ ಮಾಡಿಕೊಂಡಿರುವವರು, ತಮ್ಮ ಕುಟುಂಬದಲ್ಲಿ ಗಂಡಿನ ಮದುವೆ ಮಾಡಿದರೆ ಬೇವಿನ ಸೀರೆ ಮತ್ತು ಅಗ್ನಿಕೊಂಡ (ಕೊಂಡ ಹಾಯುವ)

ಸಂಪ್ರದಾಯವನ್ನು ಮಾಡುತ್ತಾರೆ. ಸಮುದಾಯದಲ್ಲಿ ಯಲ್ಲಮ್ಮನನ್ನು ಮನೆದೈವವಾಗಿ ಮಾಡಿಕೊಂಡವರು ಹೆಣ್ಣಿನ ಮದುವೆಯನ್ನು ಮಾಡಿದರೆ ಬರೀ (ಕೇವಲ) ಬೇವಿನ ಸೀರೆ ಸಂಪ್ರದಾಯವನ್ನು ಮಾತ್ರ ಮಾಡುತ್ತಿರುವುದು ಕಂಡುಬರುತ್ತದೆ.

ಜೊತೆಗೆ ಸಮುದಾಯದಲ್ಲಿ ಹುಲಿಗೆಮ್ಮನನ್ನು ಮನೆದೈವವಾಗಿ ಮಾಡಿಕೊಂಡಿರುವವರು ಗಂಡಿನ ಮದುವೆ ಅಥವಾ ಹೆಣ್ಣಿನ ಮದುವೆ ಮಾಡಿದರೂ ಸಹ ಅವರು ಕೇವಲ ಬೇವಿನ ಸೀರೆ ಸಂಪ್ರದಾಯವನ್ನು ಮಾತ್ರ ಮಾಡುತ್ತಿರುವುದು ಕಂಡುಬರುತ್ತದೆ. ಹಂಡಿಜೋಗಿಗಳಲ್ಲಿರುವ ಆ ಎರಡು ಸಂಪ್ರದಾಯಗಳ ವಿವರಣೆಯನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

**ಅಗ್ನಿಕೊಂಡ ಸಂಪ್ರದಾಯ (ಅಗ್ನಿಕೊಂಡ ಮಾಡುವ ವಿಧಾನ)**

ಸಮುದಾಯದಲ್ಲಿ ಅಗ್ನಿಕೊಂಡದ ಆಚರಣೆಯನ್ನು ಊರ ಹೊರಭಾಗದಲ್ಲಿ ಮಾಡಲಾಗುತ್ತದೆ. ಊರಿನ ಹೊರಭಾಗದಲ್ಲಿ ಕೊಂಡವನ್ನು ನಿರ್ಮಿಸಲಾಗಿರುತ್ತದೆ. ಕೊಂಡವನ್ನು ಎರಡು ಅಡಿ ಅಗಲ ಮತ್ತು ಐದು ಅಡಿ ಉದ್ದವಾಗಿ ನಿರ್ಮಿಸಲಾಗಿರುತ್ತದೆ. ಈ ಕೊಂಡಕ್ಕೆ ಒಂಭತ್ತು ತೆಂಗಿನಕಾಯಿ ಒಂಭತ್ತು ನಿಂಬೆಹಣ್ಣು ಹಾಗೂ ಒಂಭತ್ತು ಕಡೆ ಎಲೆ ಅಡಿಕೆ ಜೊತೆಗೆ ಒಂಭತ್ತು ಊದುಕಡ್ಡಿಯನ್ನು ಹಚ್ಚಿ ಕೊಂಡವನ್ನು ಪೂಜಿಸಲಾಗುತ್ತದೆ. ಇದಾದ ನಂತರ ಅದರಲ್ಲಿ ಬೆಂಕಿಯನ್ನು ಮಾಡಿಕೊಳ್ಳುತ್ತಾರೆ.

ಸಮುದಾಯದಲ್ಲಿ ಗಂಡಿನ ಮದುವೆಯನ್ನು ಮಾಡಿದ ಕುಟುಂಬದವರು ಈ ಅಗ್ನಿಕುಂಡವನ್ನು ಹಾಯುತ್ತಾರೆ. ಮದುವೆಯ ಪ್ರಧಾನ ಪೂಜೆ ಅಥವಾ ಮದುವೆಯ ಕಾರ್ಯವನ್ನು ನಡೆಸಿಕೊಟ್ಟವರು ಈ ಕಾರ್ಯವನ್ನು ಮಾಡುತ್ತಾರೆ. ಇದಕ್ಕೂ ಮೊದಲು ಸಮುದಾಯದಲ್ಲಿ ಜೋಗವ್ವ ಹಾಡಿಸಲಾಗುತ್ತದೆ.

**ಜೋಗವ್ವ ಹಾಡಿಸುವುದು**

ಸಮುದಾಯದಲ್ಲಿ ವಾದ್ಯಗಳೊಂದಿಗೆ ಮದುವೆಯ ಮನೆಯಿಂದ ಪಡಲಿಗೆ (ಪಡ್ಲಿಗೆ)ಯನ್ನು ಹಿಡಿದು ಒಬ್ಬ ಮಹಿಳೆ ಜೋಗವ್ವ ಹಾಡುತ್ತಾಳೆ. ಮದುವೆ ಮನೆಯ ಗುಂಪುಗಳಿಗೆ ಸೇರಿದ ಎಲ್ಲಾ ಬಂಧುಗಳ ಮನೆಗೆ ಹೋಗಿ ಭಿಕ್ಷೆ ಬೇಡುತ್ತಾಳೆ. ಈ ಸಮಯದಲ್ಲಿ ಜೋಗವ್ವನ ಸೇವಕರಾಗಿ ಐದು ಜನ ಜೋಗಪ್ಪಗಳನ್ನು ಮಾಡುವುದು ಕಂಡುಬರುತ್ತದೆ. ಪಡಲಿಗೆ ಹಿಡಿದಿರುವ ಮಹಿಳೆಯನ್ನು ಮದುವೆ ಚಪ್ಪರಕ್ಕೆ ಕರೆತಂದು ಅವಳಿಗೆ ಬೇವಿನ ಸೀರೆಯನ್ನು, ಕೈಯಲ್ಲಿ ಒಂದು ಕತ್ತಿಯನ್ನು ಕೊಡಲಾಗುತ್ತದೆ. ಹೀಗೆ ಬೇವಿನ ಸೀರೆಯೊಂದಿಗೆ ಮಹಿಳೆ ಊರ ಹೊರಗೆ ಸಿದ್ಧಪಡಿಸಿರುವ ಅಗ್ನಿಕೊಂಡದ ಹತ್ತಿರ ಸಕಲ ವಾದ್ಯಗಳೊಂದಿಗೆ ಮದುವೆ ಮನೆಯಿಂದ ಕೊಂಡದ ಹತ್ತಿರ ಬರುತ್ತಾರೆ. ಬೇವಿನ ಸೀರೆ ತೊಟ್ಟಿರುವ ಮಹಿಳೆ ಕೊಂಡದ ಹತ್ತಿರ ಬಂದಾಗ ಕೊಂಡದಲ್ಲಿ ತುಪ್ಪವನ್ನು ಹಾಕಲಾಗುತ್ತದೆ. ನಂತರ ಆ ಮಹಿಳೆ ಮೂರು ಬಾರಿ ಕೆಂಡವನ್ನು ತುಳಿಯುತ್ತಾಳೆ. ಜೊತೆಗೆ ಬೇವಿನ ಸೀರೆಯನ್ನು ಅಲ್ಲೇ ಬಿಟ್ಟು ಸ್ನಾನ ಮಾಡಿಕೊಂಡು ಬಿಳಿ ಸೀರೆಯನ್ನು ತೊಟ್ಟು ಅಗ್ನಿಕೊಂಡವನ್ನು ಮೂರು ಸುತ್ತು ಪ್ರದಕ್ಷಿಣೆ ಹಾಕಿ ಪುನಃ ಮದುವೆಯ ಮನೆಗೆ ವಾಪಾಸ್ಸಾಗುತ್ತಾರೆ. ಮದುವೆಯ ಚಪ್ಪರದಲ್ಲಿ ಮದುಮಗ ಮತ್ತು ಮದುಮಗಳು ಅವಳಿಗೆ ಪೂಜೆ ಸಲ್ಲಿಸಿ ಮನೆಗೆ

ಕರೆದುಕೊಳ್ಳುತ್ತಾರೆ. ಕೊಂಡ ಹಾಯುವವರು ಕುಟುಂಬದಲ್ಲಿ ಉಪವಾಸದಿಂದಿರುತ್ತಾರೆ. ಇದೇ ರೀತಿಯಲ್ಲಿ ಹುಲಿಗೆಮ್ಮನನ್ನು ಮನೆದೈವ ಮಾಡಿಕೊಂಡಿರುವವರು ಪ್ರಮುಖವಾಗಿ ಕೊಂಡವನ್ನು ಮದುವೆ ಮನೆಯ ಚಪ್ಪರದ ಕೆಳಗೆ ಅಗ್ನಿಕುಂಡವನ್ನು ಮಾಡಬೇಕಿತ್ತು. ಆದರೆ ಇದರಿಂದ ತೊಂದರೆಯಾಗಬಹುದೆಂಬ ಕಾರಣಕ್ಕೆ ಅದರ ಬದಲಾಗಿ ಬೇವಿನ ಸೀರೆಯನ್ನು ಮಾತ್ರ ಮಾಡುವ ಪದ್ಧತಿಯನ್ನು ರೂಢಿಸಿಕೊಳ್ಳಲಾಯಿತು ಎಂದು ಸಮುದಾಯದ ಹಿರಿಯರು ವಿವರಿಸುತ್ತಾರೆ.

**ಬೇವಿನಸೀರೆಯ ಆಚರಣೆ**

ಇದೊಂದು ಆಹಾರ ಸಂಬಂಧಿ ಆಚರಣೆಯಾಗಿರುತ್ತದೆ. ಬೇವಿನಸೀರೆ ಕಾರ್ಯವನ್ನು ಮಾಡುವುದಕ್ಕೂ ಮೊದಲು ದೇವಿಗೆ ಬಲಿಯನ್ನು ಕೊಡಲಾಗುತ್ತದೆ. ಮದುವೆಯ ಮನೆಯವರು ಒಂದು ಕುರಿಯನ್ನು ತಂದು ಅದನ್ನು ಚಪ್ಪರದ ಕೆಳಗೆ ಒಂದು ಗುಂಡಿಯನ್ನು ತೋಡಿ ಅದರಲ್ಲಿ ರಕ್ತ ಹೋಗುವಂತೆ ಬಲಿ ಕೊಡಲಾಗುತ್ತದೆ. ಈ ಬಲಿ ನೀಡುವ ಸಮಯದಲ್ಲಿ ದೇವರ ಕೋಣೆಯ ಬಾಗಿಲಿಗೆ ಅಡ್ಡವಾಗಿ ಒಂದು ಪರದೆಯನ್ನು ಹಿಡಿದಿರುತ್ತಾರೆ. ಬಲಿ ನೀಡಿದ ಕುರಿಯ ಮಾಂಸಹಾರವನ್ನು ಸಿದ್ಧಪಡಿಸಿ, ಕುರಿಯ ಸಾಂಬಾರು (ತುಂಡು) ಮತ್ತು ಅನ್ನವನ್ನು ಮನೆಯಲ್ಲಿನ ದೇವರ ಮಂಟಪದ ಮುಂದೆ ಸ್ವಲ್ಪ ನೆಲವನ್ನು ಸಾರಿಸಿ ಅದರ ಮೇಲೆ ರಾಶಿ ಹಾಕಿ ಪೂಜೆ ಸಲ್ಲಿಸಲಾಗುತ್ತದೆ. ಇದನ್ನು ಪೂಜೆ ಮಾಡುವ ಮಹಿಳೆ ಉಪವಾಸವಿರುತ್ತಾಳೆ. ಇದರ ಪೂಜೆಯಾದ ಬಳಿಕ ಎಲ್ಲರೂ ಊಟ ಮಾಡತಕ್ಕದ್ದು. ದೇವರ ಮಂಟಪದ ಮುಂದೆ ಆಹಾರದ ರಾಶಿ ಬೆಳಗಿನ ಜಾವದವರೆಗೂ ಹಾಗೆಯೇ ಇರುತ್ತದೆ. ಬೆಳಗಿನ ಜಾವದಲ್ಲಿ ಮದುವೆಯ ಸಂಬಂಧಿಕರು (ಬಂಧುಗಳು) ಮಾತ್ರ ಅದನ್ನು ಊಟ ಮಾಡುತ್ತಾರೆ. ಈ ರಾಶಿಯ ಮುಂಭಾಗದಲ್ಲಿ ಗೋಧಿಯ ಹಿಟ್ಟಿನಿಂದ ಒಂದು ದೊಡ್ಡ ದೀವಟಿಗೆ ಮಾಡಿ ಅದರಲ್ಲಿ ದೊಡ್ಡ ಬತ್ತಿಯನ್ನು ಹಾಕಿ ಅದರಲ್ಲಿ ಔಡಲ ಎಣ್ಣೆಯನ್ನು ಹಾಕಿ ದೀಪವನ್ನು ಹಚ್ಚಲಾಗಿರುತ್ತದೆ. ಈ ದೀಪವನ್ನು ಬೆಳಗಿನವರೆಗೆ ಕೆಡದಂತೆ ನೋಡಿಕೊಳ್ಳಲಾಗುತ್ತದೆ. ಆಧುನಿಕ ಸಂದರ್ಭದಲ್ಲಿ ಈ ಆಚರಣೆಯಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಿಕೊಂಡಿರುವುದಾಗಿ ವಿವರಿಸುತ್ತಾರೆ. ಊಟವನ್ನು ಬೆಳಗಿನ ಜಾವದವರೆಗೆ ಕಾಯದೆ ಸಂಜೆಯೇ ದೇವರಿಗೆ ಅನ್ನದ ರಾಶಿ ಹಾಕಿ ಪೂಜೆ ಸಲ್ಲಿಸಿ ರಾತ್ರಿಯೇ ಸಂಬಂಧಿಕರು, ಕುಲಸ್ಥರು, ಬಂಧುಗಳೆಲ್ಲರೂ ಸೇರಿಕೊಂಡು ಶೇಂದಿಸೇವನೆ ಮಾಡಿ ಊಟ ಮಾಡುವ ಪದ್ಧತಿ ರೂಢಿಯಲ್ಲಿರುವುದು ಕಂಡುಬರುತ್ತದೆ. ಈ ಸಂದರ್ಭದಲ್ಲಿ ಮದುವೆಯ ಮನೆಯವರು ಶೇಂದಿ ವ್ಯವಸ್ಥೆಯನ್ನು ಮಾಡಿರುತ್ತಾರೆ. ಊಟಕ್ಕೂ ಮೊದಲು ಶೇಂದಿ ಸೇವನೆ ಕಡ್ಡಾಯವಾಗಿರುತ್ತದೆ. ಇದು ಆಹಾರ ಸಂಬಂಧಿ ಬೇವಿನಸೀರೆಯ ಆಚರಣೆಯಾಗಿರುತ್ತದೆ.

**ತಣಗೆಶಾಸ್ತ್ರ ಅಥವಾ ಗಂಡ-ಹೆಂಡತಿಗೆ ನೀರು ಹಾಕುವ ಶಾಸ್ತ್ರ**

ತಾಳಿ ಕಟ್ಟಿದ ಶಾಸ್ತ್ರ ಮುಗಿದ ನಂತರ ಪುನಃ ಮದುವೆಯ ಗಂಡು-ಹೆಣ್ಣಿಗೆ ಮತ್ತೊಂದು ಸಲ ಅವರಿಗೆ ಅರಿಶಿಣ ಹಚ್ಚಿ ಸ್ನಾನ ಮಾಡಿಸಲಾಗುತ್ತದೆ. ಐದು ಕುಂಭಗಳನ್ನು ಸುತ್ತಲೂ ಇರಿಸಿ

ಅವುಗಳಿಗೆ ದಾರದಿಂದ ಸುತ್ತುವರಿಯಲಾಗಿರುತ್ತದೆ. ಆ ಐದು ಕುಂಭಗಳ ಮಧ್ಯದಲ್ಲಿ ಗಂಡ-ಹೆಂಡತಿ ಇಬ್ಬರನ್ನು ಕೂರಿಸಲಾಗುತ್ತದೆ.

ವರನ-ವಧುವಿನ ತಂದೆ ತಾಯಿ, ಚಿಕ್ಕಪ್ಪ ಚಿಕ್ಕಮ್ಮ ಹಾಗೂ ಬಂಧುಗಳೆಲ್ಲರೂ ಸೇರಿ ಗಂಡ ಹೆಂಡತಿಗೆ ನೀರು ಹಾಕುತ್ತಾರೆ. ಮುತ್ತೈದೆಯರೆಲ್ಲರೂ ಸೇರಿ ಕಳಸದ ಒಂದು ತಂಬಿಗೆಯಿಂದ ನೀರನ್ನು ತೆಗೆದುಕೊಂಡು ಕುಂಭಗಳ ಮಧ್ಯೆ ಕುಳಿತಿರುವ ಗಂಡ-ಹೆಂಡತಿಗೆ ವಡಾ ವಡಾ ಎಂದು ಹೇಳುತ್ತಾ ನೀರು ಹಾಕುತ್ತಾರೆ. ಹೀಗೆ ಇಬ್ಬರಿಗೂ ಅರಿಶಿಣ ಹಚ್ಚಿ ಸ್ನಾನ ಮಾಡಿಸುವುದು ಕಂಡುಬರುತ್ತದೆ.

**ಬಾಗಿಲು ತಡೆಯುವ ಶಾಸ್ತ್ರ**

ತಾಳಿಕಟ್ಟುವಶಾಸ್ತ್ರ ಮುಗಿದ ನಂತರ ಮೊದಲಬಾರಿಗೆ ಹೆಣ್ಣನ್ನು ಗಂಡನ ಮನೆಗೆ ಕರೆದುಕೊಳ್ಳುವ ಸಂದರ್ಭದಲ್ಲಿ ಹೆಣ್ಣಿನ ತಮ್ಮ ಅಥವಾ ಅಣ್ಣನು ತಂಗಿಯನ್ನು ಅಥವಾ ಅಕ್ಕನನ್ನು ಮಗಳನ್ನು ಕೇಳುವ ಪದ್ಧತಿ ಇದೆ.

ಬಾಗಿಲು ತಡೆಯುವಂತಹ ಸಂದರ್ಭದಲ್ಲಿ ಒನಕೆಯನ್ನು ಪೂಜೆ ಮಾಡಿ ಹೆಣ್ಣನ್ನು ಕೇಳುವವರು. ತಲೆಗೆ ರುಮಾಲು ಪೇಟವನ್ನು ಸುತ್ತಿಕೊಂಡು ಅವರು ಬಾಗಿಲಿಗೆ ಪೂಜೆ ಮಾಡಿ ಒನಕೆಯನ್ನು ಬಾಗಿಲಿಗೆ ಅಡ್ಡಲಾಗಿ ಹಿಡಿದುಕೊಂಡು ಹೆಣ್ಣನ್ನು ಕೆಳುವಂತಹದ್ದಾಗಿದೆ. ಈ ಸಂದರ್ಭದಲ್ಲಿನ ಭಾಷಾ ಸಂವಹನ ಸಮುದಾಯದ ಮೂಲ ಭಾಷೆಯಲ್ಲಿಯೇ ನಡೆಯುತ್ತದೆ. ಆ ಸಂಭಾಷಣೆಯನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

**ಹೆಣ್ಣನ್ನು ಕೇಳುವುದು** : ಹಮಾಲ್ ಪಿಲ್ಲ ದಿವ್ವಾವ್ ತುಮಾಲ್ ದಾರ್ ಸೋಡಾವ್

ಇದಕ್ಕೆ ಗಂಡ-ಹೆಂಡತಿ ಇಬ್ಬರು ಸೇರಿ ಈ ಕೆಳಗಿನಂತೆ ಉತ್ತರಿಸುತ್ತಾರೆ.

**ಮದುಮಕ್ಕಳು** : ಹತ್ತಿಸಾನೆದೇತೋ ದಾದ ಹತ್ತಿಸಮಾಲ್ದೇತೋ ದಾದ ಹತ್ತಿಸೋತೋಲ್ ದೇತೊದಾದ, ಹಮೇಸ್ನಿದಾರ್ ಸೋಡಾವ್

ತುಮಸ್ನಿವಾಟ್ ಸೋಡವ್

**ಹೆಣ್ಣು ಕೇಳುವರು** : ಹತ್ತಿನೆಗೋ ಬೈಯ್ನೆ, ಹತ್ತಿಸತೋಲ್ ನೆಗೋಬೈಯ್ನೆ ಹಮಾಲ್ ಪಿಲ್ಲದಿವಾವ್ಹ್ ತುಮಾಲ್ ದಾರ್‍ಸೋಡಾವು

**ಮದುಮಗಳು** : (ನೌರಿ) ಊಟ್(ಒಂಟೆ) ದೇತೋದಾದ, ಊಟಸ್ ಮೋಲ್ ದೇತೊದಾದ

ಊಟಸ್ ತೋಲ್ ದೇತೋದಾದು ಹುಮಾಸ್ನಿದಾರ್ ಸೋಡಾವ್

ಹಮೇಸ್ನಿ ವಾಟ್ ಸೋಡಾವ್

ಹೆಣ್ಣು ಕೇಳುವುದು : ಊಟ್‌ನೇಗೋ ಬೈಯ್ನೆ ಊಟಸೋ ಮೊಲ್ ನೇಗೋ ಬೈಯ್ನೆ
ಊಟಿಸ್ ತೋಲ್ ನೇಗೋ ಬೈಯ್ನೆ ಹಮಾಲ್ ಪಿಲ್ಲ ದಿವ್ಹಾವ್
ತುಮಾಲ್ ದಾರ್‍ಸೋಡಾವ್

ಮದುಮಗಳು : ಗೋಡಾ(ಕುದುರೆ) ದೇತೋದಾದ ಗೋಡ್ಯಾಸ್ ಮೊಲ್ ದೇತೋ
ದಾದ.
ಗೋಡ್ಯಾಸ್ ತೋಲ್ದೇತೋದಾದ, ಹಮೇಸ್ನಿದಾರ್ ಸೊಡಾವ್
ಹಮೇಸ್ನಿ ವಾಟ್ ಸೋಡಾವ್ಹ

ಹೆಣ್ಣು ಕೇಳುವರು : ಗೋಡಾ ನೇಗೊ ಬೈಯ್ನೆ ಗೋಡ್ಯಾಸ್ ಮೋಲ್ ನೆಗೋ ಬೈಯ್ನೆ
ಗೋಡ್ಯಾಸ್ ತೋಲ್ ನೆಗೋಬೈಯ್ನೆ, ಹಮಾಲ್ ಪಿಲ್ಲೋ ದಿವ್ಹಾವ್,
ತುಮಾಲ್ ದಾರ್‍ಸೋಡಾವ್

ಮದುಮಗಳು : ಬೈಲ್ ದೇತೋದಾದ, ಬೈಲಸಾ ತೋಲ್ ದೇತೋದಾದ ಬೈಲಿಸಾ
ತೋಲ್ದೇತೋದಾದ ಹಮೇಸ್ನಿದಾರ್ ಸೋಡಾವ್ ಹಮೇಸ್ನಿ ವಾಟ್
ಸೋಡಾವ್

ಹೆಣ್ಣು ಕೇಳುವರು : ಬೈಲ್ ನೇಗೋ ಬೈಯ್ನೆ, ಬೈಲಸಾ ಮೋಲ್ ನೇಗೋ ಬೈಯ್ನೆ
ಬೈಲೀಸಾ ತೋಲ್ ನೇಗೋ ಬೈಯ್ನೆ ಹಮೇಲ್ ಪಿಲ್ಲದಿವ್ಹಾವ್
ತುಮಾಲ್ ದಾರ್‍ಸೋಡಾವ್

ಮದುಮಗಳು : ಗಾಯ್ ದೇತೋದಾದ, ಗಾಯಿಸೋ ಮೊಲ್ ದೇತೋದಾದ
ಗಾಯಿಸೋ ತೋಲ್ದೇತೋ ದಾದ ಹಮೇಸ್ನಿದಾರ್ ಸೊಡಾವ್
ಹಮೇಸ್ನಿ ವಾಟ್ ಸೋಡಾವ್ಹ

ಹೆಣ್ಣು ಕೇಳುವರು : ಗಾಯ್ ನೇಗೋ ಬೈಯ್ನೆ,
ಗಾಯಿಸೋ ಮೊಲ್ ನೇಗೋ ಬೈಯ್ನೆ
ಗಾಯಿಸೋ ತೋಲ್ ನೇಗೋ ಬೈಯ್ನೆ
ಹಮೇಲ್ ಪಿಲ್ಲ ದಿವ್ಹಾವ್
ತಮಾಲ್ ದಾರ್ ಸೋಡಾವ್ಹ

ಎಂದು ಮದುಮಗಳು ತನ್ನ ಅಣ್ಣನಿಗೆ ವಿವಿಧ ರೀತಿಯ ಆಸೆ ಆಕಾಂಕ್ಷೆಗಳನ್ನು ಒಡ್ಡಿ ದಾರಿ ಬಿಡಿ ಎಂದು ಕೇಳಿಕೊಳ್ಳುತ್ತಾಳೆ. ಅಣ್ಣಾ ನಿನಗೆ ಆನೆ, ಒಂಟೆ, ಕುದುರೆ ಮತ್ತು ಹಸು ಇತ್ಯಾದಿಗಳನ್ನು ಕೊಡುತ್ತೇವೆ ಮತ್ತು ಅದು ಎಷ್ಟು ಬಾಳುತ್ತದೆ ಅಷ್ಟು ಹಣವನ್ನು ಕೊಡುತ್ತೇವೆ ದಾರಿ ಬಿಡಿ ಎಂದು ಕೇಳಿಕೊಳ್ಳುತ್ತಾರೆ. ಆದರೆ ಹೆಣ್ಣು ಕೇಳುವವರು ಇವರ ಆಮಿಷಗಳಿಗೆ ಒಳಗಾಗದೆ ನಮಗೆ (ಪಿಲ್ಲ)

ಹುಡುಗಿ ಬೇಕು. ಹಣ ವಸ್ತು ಯಾವುದು ಬೇಡ ಎಂದು ಮುಂದೆ ಹುಟ್ಟುವ ಹೆಣ್ಣಿಗೆ ಗೊತ್ತು ಮಾಡಿಸಿಕೊಳ್ಳುವ ಪದ್ಧತಿ ಇಲ್ಲಿ ಕಾಣುತ್ತದೆ. ಆದರೆ ಕೊನೆಯಲ್ಲಿ ಗಂಡ ಹೆಂಡತಿ ಮಾತನಾಡಿಕೊಂಡು ಹೆಣ್ಣು ಕೊಡಲು ಒಪ್ಪುತ್ತಾರೆ. ಆಗ ಹೆಣ್ಣು ಕೇಳಿದವರು ದಾರಿ ಬಿಡುತ್ತಾರೆ.

ಈ ಸಂಭಾಷಣೆಯು ಹಾಡಿನ ಮುಖಾಂತರ ನಡೆಯುತ್ತದೆ. ಹೀಗೆ ಹೆಣ್ಣು ಕೇಳುವುದು ಒಂದು ಸಂಪ್ರದಾಯವಾಗಿ ಕಂಡುಬರುತ್ತದೆ.

ಇದಾದ ನಂತರ ಕರಿ ಕಂಬಳಿಯ ಮೇಲೆ ಸೇಸೆಹಾಕಿ ಗಂಡ ಹೆಂಡತಿಯನ್ನು ಕೂಡಿಸಿ ಅವರಿಂದ ವಿವಿಧ ಆಟಗಳನ್ನು ಆಡಿಸುತ್ತಾರೆ. ಒಂದು ಬಟ್ಟೆಯಿಂದ ಮಗುವನ್ನು ಮಾಡಿ ಅದನ್ನು ಜೋಗುಳ ಹಾಡುವ ಪದ್ಧತಿ ಕಂಡುಬರುತ್ತದೆ.

ಇದರಲ್ಲಿ ತಂದೆ – ತಾಯಿ (ಬಾ – ಆಯೀ)

ಚಿಕ್ಕಪ್ಪ – ಚಿಕ್ಕಮ್ಮ (ಅಪಾ – ಮಾವ್‌ಸಿ)

ದೊಡ್ಡಪ್ಪ – ದೊಡ್ಡಮ್ಮ (ತರ್ಲಬಾ – ತಲ್ಲಿ ಆಯೀ)

ರಕ್ತಸಂಬಂಧಿಕರು ಮಗುವನ್ನು ಜೋಗುಳ ಹಾಡಿಸುವುದು ಕಂಡುಬರುತ್ತದೆ. ಈ ಸಂದರ್ಭದಲ್ಲಿ ಹಾಡುವ ಹಾಡನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ಏಕ್‌ಮಾಸ್ ಬರ್ಲೋ ದೋನ್ ಮಾಸು ಬರ್ಲೋ
ಅಮ್ಮರೇ ಸರದಾ ಸಾವಂತ್ರಿನಾರೀ ನಂದಲಾ ಬನ್ನಾಲ್ ಜಾವುಯೇ
ತ್ಯಾನಿ ಅನಲ್ ತಾಕೋಡಿ ಕೇನ್ ದೇವ ನಾರಾಯಣ್
ದಿಲ್ಲ ಕಾಳ್ನಾ ರತ್ನಸ್ ಪಾಣ್ಯ ಜೋಬಾಳ್ ಜೋ

ದೋನ್ ಮಾಸು ಬರ್ಲೋ ತೀನ್ ಮಾಸು ಬರ್ಲೋ
ಅಮ್ಮರೇ ಸರದಾಸಾವಂತ್ರೀನಾರೀ ನಂದಲಿ ಬನನಾಲಾ ಜಾವುಯಾ
ತ್ಯಾನಿ ಅನಲ್ ತಾಕೋಡಿ ಕೇನ್ ದೇವ ನಾರಾಯಣ್
ದಿಲ್ಲ ಕಾಳ್ನಾ ರತ್ನಸ್ ಪಾಣ್ಯ ಜೋಬಾಳ್ ಜೋ–ಎಂದು

ಹೀಗೆ ಒಂಭತ್ತು ತಿಂಗಳವರೆಗೆ ಈ ಹಾಡು ಮುಂದುವರಿಯುತ್ತದೆ. ಇದರಲ್ಲಿ ಮಗು ಅಳುವ ಸಂದರ್ಭದಲ್ಲಿ ಗಂಡ–ಹೆಂಡತಿ ಮೂನ್ಸೂಚನೆಯಾಗಿ ಯಾವ ರೀತಿ ಜೋಗುಳ ಹಾಡಿ ಸಂತೋಷ ಪಡಿಸಬೇಕೆಂಬುದನ್ನು ತಂದೆ ತಾಯಿಯಾದವರು ನೂತನ ದಂಪತಿಗಳಿಗೆ ವಿವರಿಸಿಕೊಡುವುದನ್ನು ಮೇಲಿನ ಹಾಡು ವಿವರಿಸುತ್ತದೆ.

**ದೇವರು ಬಿಡುವುದು (ಗಂಗೆಪೂಜೆ)**

ದೇವರು ಬಿಡಲು ಐದು ಜನ ಮುತ್ತೈದೆಯರು ಕಳಸಗಳನ್ನು ಹಿಡಿದು ಮಣ್ಣಿನ ಮಡಿಕೆಯನ್ನು

ಹೆಣ್ಣಿಗೆ ಹೊರಿಸಿಕೊಂಡು ನೀರಿರುವ ಬಾವಿ ಅಥವಾ ಕೆರೆಗೆ ಹೋಗಿ ಗಂಗೆ ಪೂಜೆ ಮಾಡಿ ದೇವರು ಬಿಟ್ಟು ಬರುತ್ತಾರೆ. (ಹೆಣ್ಣು ಹೊತ್ತಿರುವ ಕುಡಿಕೆಯಲ್ಲಿ ವಸ್ತುಗಳಾದ ಎಲೆ, ಅಡಿಕೆ, ಹೂ, ಅರಿಶಿಣಕೊಂಬು ಇತ್ಯಾದಿಗಳನ್ನು ನೀರಿಗೆ ಬಿಡುವುದು).

ನಂತರ ಪುನಃ ಹೊಸ ನೀರನ್ನು ಕುಡಿಕೆಯಲ್ಲಿ ತುಂಬಿ, ಅದನ್ನು ಪೂಜೆ ಮಾಡಿ ಮುತ್ತೈದೆಯರು ಉಡಿ ತುಂಬಿಸಿಕೊಂಡು, ಜೊತೆಗೆ ಹೆಣ್ಣಿಗೂ ಉಡಿ ತುಂಬಿ ನೀರು ತುಂಬಿದ ಕರಗವನ್ನು ಹೆಣ್ಣಿನ ತಲೆಯ ಮೇಲಿರಿಸಿಕೊಂಡು ಗಂಡನ ಮನೆಗೆ ಕರೆದುಕೊಂಡು ಬರಲಾಗುತ್ತದೆ.

ಮನೆಯಲ್ಲಿದ್ದ ಗಂಡು ಗಂಗೆಗೆ ಪೂಜೆ ಸಲ್ಲಿಸಿ ತೆಂಗಿನ ಕಾಯಿ ಹೊಡೆಯುತ್ತಾನೆ. ನಂತರ ಮದುಮಗಳ (ಹೆಣ್ಣು) ಬಲಗಾಲನ್ನು ಹೊಸ್ತಿಲ ಮೇಲಿರಿಸಿ ಕಾಲಿನ ಹೆಬ್ಬೆರಳು ಮತ್ತು ತೋರುಬೆರಳಿನ ಮಧ್ಯದಲ್ಲಿ ಒಂದು ನಾಣ್ಯವನ್ನಿರಿಸಿ ಆ ನಾಣ್ಯವನ್ನು ಮೊಳೆಯಿಂದ ಹೊಸ್ತಿಲಿಗೆ ಬಡೆಯುವ ಮುಖಾಂತರ ಹೆಣ್ಣನ್ನು ಮನೆತುಂಬಿಸಿಕೊಳ್ಳುವ ಪದ್ಧತಿ ಕಂಡುಬರುತ್ತದೆ.

**ಬೀಗರೂಟ (ಸೈರ್ಯಾಸೋ ಜೇವನ್) ಕಂಕಣ ಬಿಚ್ಚುವ ಪದ್ಧತಿ**

ಮದುವೆಯ ಕೊನೆಯ ಆಚರಣೆ ಇದಾಗಿದೆ. ಮದುವೆ ಮುಗಿದ ನಾಲ್ಕೈದು ದಿನಗಳ ನಂತರ ಸಮುದಾಯದಲ್ಲಿ ಹಿರಿಯರು ನಿಶ್ಚಯಿಸಿದ ದಿನದಂದು ಊಟದ ಏರ್ಪಾಟಾಗುತ್ತದೆ. ಅಂದು ಮದುವೆಯ ದಿನ ಕೈಗೆ ಕಟ್ಟಿರುವ ಕಂಕಣವನ್ನು ಬಿಚ್ಚುವ ಶಾಸ್ತ್ರ ನಡೆಯುತ್ತದೆ.

ಈ ಆಚರಣೆಯಲ್ಲಿ ಮದುವೆಯ ಕುಟುಂಬದವರೆಲ್ಲರೂ (ಬಂಧುಗಳು) ಸೇರಿರುತ್ತಾರೆ. ಕಂಕಣ ಬಿಚ್ಚುವ ಸಂದರ್ಭದಲ್ಲಿ ಹಿರಿಯರು ಸಮುದಾಯದ ಮೂಲ ಭಾಷೆಯಲ್ಲಿ ಹಾಡನ್ನು ಹಾಡುತ್ತಾರೆ. ಆ ಹಾಡಿನ ಸಂಭಾಷಣೆಯನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ. ಇದಕ್ಕೂ ಮೊದಲು ಈ ಆಚರಣೆಯಲ್ಲಿ ಭಾಗವಹಿಸುವ ಕುಟುಂಬದ ಬಂಧುಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

ಅಜ್ಜ – ತಾಲ್ಡ, ಆಜಾ

ಅಜ್ಜಿ – ಅಜ್ಜೆ (ಆಜೀ)

ದೊಡ್ಡಪ್ಪ – ತರ್ಲಬಾ

ದೊಡ್ಡಮ್ಮ – ತರ್ಲಿಆಯೀ

ತಂದೆ – ಬಾ

ತಾಯಿ – ಆಯೀ

ಚಿಕ್ಕಪ್ಪ – ಆಪಾ

ಚಿಕ್ಕಮ್ಮ – ಮಾವ್‌ಸಿ

ಅಣ್ಣ – ದಾದ

ಅಕ್ಕ – ಆಕಾ(ಅಕ್ಕ)

ತಂಗಿ – ಬಾಯಿ/ಬೈನ್

ಹೀಗೆ ಮದುವೆಯಲ್ಲಿ ಪಾಲ್ಗೊಂಡವರೆಲ್ಲರೂ ಈ ಕೆಳಗಿನ ಮರಾಠಿ ಹಾಡನ್ನು ಹಾಡುವುದರೊಂದಿಗೆ ಕೈಗೆ ಕಟ್ಟಿರುವ ಕಂಕಣವನ್ನು ಬಿಚ್ಚುತ್ತಾರೆ. ಮೊದಲನೆಯದಾಗಿ ಹಿರಿಯರು,

**ಅಜ್ಜ** : ತುಮಾರೆ ನಾನುಕು ಬುಲಾರೆ ನಾರಿ ಕಂಕಣ ಸುಟೆ
ಕಂಕಣ ತುದಾಸ್ಕಡಿ

**ಅಜ್ಜಿ** : ತುಮಾರೆ ನಾನಿತು ಬುಲಾರೆ ನಾರಿ ಕಂಕಣ ಸುಟೆ
ಕಂಕಣ ತುದಾಸ್ಕಡಿ

**ದೊಡ್ಡಪ್ಪ** : ತುಮಾರೆ ಬಡೆಬಾಪ್ಕೆ ಬುಲಾರೆ ನಾರಿ ಕಂಕಣಸುಟೆ
ಕಂಕಣ ತುದಾಸ್ಕಡಿ

**ದೊಡ್ಡಮ್ಮ** : ತುಮಾರೆ ಬಡ ಅಮ್ಮತು ಬುಲಾರೆ ನಾರಿ ಕಂಕಣಸುಟೆ
ಕಂಕಣ ತುದಾಸ್ಕಡಿ

**ತಂದೆ** : ತುಮಾರೆ ಬಾಪ್ಕೊ ಬುಲಾರೆ ನಾರಿ ಕಂಕಣಸುಟೆ
ಕಂಕಣ ತುದಾಸ್ಕಡಿ

**ತಾಯಿ** : ತುಮಾರೆ ಅಮ್ಮಾತು ಬುಲಾರೆ ನಾರಿ ಕಂಕಣಸುಟೆ
ಕಂಕಣ ತುದಾಸ್ಕಡಿ

**ಚಿಕ್ಕಪ್ಪ** : ತುಮಾರೆ ಚಿಟ್ಟಿತು ಬುಲಾರೆ ನಾರಿ ಕಂಕಣಸುಟೆ
ಕಂಕಣ ತುದಾಸ್ಕಡಿ

**ಚಿಕ್ಕಮ್ಮ** : ತುಮಾರೆ ಚಿಟ್ಟಿತು ಬುಲಾರೆ ನಾರಿ ಕಂಕಣಸುಟೆ
ಕಂಕಣ ತುದಾಸ್ಕಡಿ

**ಅಣ್ಣ** : ತುಮಾರೆ ಬೈಯ್ಯಾಂತು ಬುಲಾರೆ ನಾರಿ ಕಂಕಣಸುಟೆ
ಕಂಕಣ ತುದಾಸ್ಕಡಿ

**ಅಕ್ಕ** : ತುಮಾರೆ ಬಾಬಾಕು ಬುಲಾರೆ ನಾರಿ ಕಂಕಣಸುಟೆ
ಕಂಕಣ ತುದಾಸ್ಕಡಿ

ತಂಗಿ : ತುಮಾರೆ ಭಾಯ್ನೆತು ಬುಲಾರೆ ನಾರಿ ಕಂಕಣಸುಟೆ

ಕಂಕಣ ತುದಾಸ್ಕಡಿ ಎಂದು

ಹೀಗೆ ಕಂಕಣವು ಏಳೇಳು ಜನ್ಮಕ್ಕೆ ಬಿಚ್ಚದೆ ಇರಲಿ ಎಂದು ಕಟ್ಟಿರುತ್ತಾರೆ ಹಾಗೂ ಆ ಸಂಪ್ರದಾಯದ ಹಿನ್ನೆಲೆಯಲ್ಲಿ ಮದುಮಗ ಮದುಮಗಳು ಒಬ್ಬರ ಕೈ ಒಬ್ಬರ ಮೇಲೆ ಇಟ್ಟು ಕಂಕಣವನ್ನು ಬಿಚ್ಚುವಂತಹದ್ದು. ಈ ಸಂದರ್ಭದಲ್ಲಿ ಅಜ್ಜ-ಅಜ್ಜಿ, ದೊಡ್ಡಪ್ಪ-ದೊಡ್ಡಮ್ಮ, ಅಪ್ಪ-ಅಮ್ಮ, ಚಿಕ್ಕಪ್ಪ-ಚಿಕ್ಕಮ್ಮ, ಅಣ್ಣ, ಅಕ್ಕ, ತಂಗಿ ಮುಂತಾದವರೆಲ್ಲರೂ ಒಬ್ಬೊಬ್ಬರಾಗಿ ಆ ಕಂಕಣವನ್ನು ನಾನು ಹೇಳುತ್ತಿದ್ದೇನೆ ಬಿಚ್ಚಿ ಬರಲಿ ಎಂಬುದನ್ನು ಹಾಡಿನ ಮುಖಾಂತರ ಒಬ್ಬೊಬ್ಬರಾಗಿ ಮದುಮಕ್ಕಳ ಕೈಯನ್ನು ಹಿಡಿದು ಅವುಗಳನ್ನು ಅಲ್ಲಾಡಿಸುತ್ತಾ ಮೇಲಿನ ರೀತಿ ಹಾಡುವುದು ಕಂಡುಬರುತ್ತದೆ. ಇದರ ಜೊತೆಗೆ ತಾಳಿಯನ್ನು ಕಟ್ಟುವಾಗ ತಾಳಿಯ ಕರಿ ಮಣಿಗಳಲ್ಲಿ ಅಲ್ಲಲ್ಲಿ ಮೂರು ಗಂಡು ಹಾಕಿರುತ್ತಾನೆ. ಅದನ್ನು ಮತ್ತೆ ಮದುಮಗನು ಬಿಚ್ಚಿ, ಪುನಃ ಆ ತಾಳಿಯನ್ನು ಮದುಮಗಳಿಗೆ ಕಟ್ಟುತ್ತಾನೆ. ಹೀಗೆ ಹಂಡಿಜೋಗಿಗಳಲ್ಲಿ ವಿವಾಹ ಕಾರ್ಯವು ಸಾಂಸ್ಕೃತಿಕ ಆಚರಣೆಯ ಭಾಗವಾಗಿ ನಡೆಯುತ್ತದೆ. ಹಾಗೂ ವಿವಾಹ ನಿಶ್ಚಯದಿಂದ ಹಿಡಿದು ಕೊನೆಯವರೆಗೆ ಅನೇಕ ಕಾರ್ಯಗಳನ್ನು ನೆರವೇರಿಸುವುದು ಕಂಡುಬರುತ್ತದೆ. ಜೊತೆಗೆ ವಿವಾಹ ಸಂಪ್ರದಾಯದಲ್ಲಿ ಪಾಲ್ಗೊಳ್ಳುವವರೆಲ್ಲರು ತಮ್ಮ ಸಮುದಾಯದ ಕುಲಸ್ಥರು ಹಾಗೂ ಬಂಧುಗಳೇ(ರಕ್ತಸಂಬಂಧಿಗಳು) ಆಗಿರುವುದರಿಂದ ಅಲ್ಲಿನ ಸಂವಹನ ಹಾಗೂ ಸಂಭಾಷಣೆಗಳೆಲ್ಲವೂ ಸಹ ಸಮುದಾಯದ ಮನೆಮಾತಾದ ಮರಾಠಿ ಭಾಷೆಯಲ್ಲಿಯೇ ನಡೆಯುತ್ತದೆ.

**ಸೀಮಂತ** : ಸದಾ ಅಲೆಮಾರಿಗಳಾಗಿದ್ದ ಈ ಸಮುದಾಯದಲ್ಲಿ ಸೀಮಂತ ಕಾರ್ಯ ಮೊದಲು ಮಾಡುತ್ತಿರಲಿಲ್ಲ. ಇತ್ತೀಚಿನ ದಿನಗಳಲ್ಲಿ ಇವರು ಒಂದು ಕಡೆ ಖಾಯಂ ಆಗಿ ನೆಲೆವೂರಲು ಆರಂಭಿಸಿದ ಮೇಲೆ ಸ್ಥಿತಿವಂತರಾದವರು ಸೀಮಂತ ಮಾಡುವರು(ಘರ್‌ನ್‌ವಾಲ ವಾಡುಚೊ). ಪ್ರಥಮವಾಗಿ ಗರ್ಭಿಣಿಯಾದವಳು ಕೋಳಿಮರಿಗೆ ಅಕ್ಕಿ ತಿನ್ನಿಸುವಳು. ಆ ಕೋಳಿಯನ್ನು ಮನೆಯವರು ಯಾವತ್ತು ಮಾಂಸಕ್ಕಾಗಿ ಉಪಯೋಗಿಸಬಾರದು. ಮಧ್ಯಾಹ್ನ ಗರ್ಭಿಣಿಗೆ ಹೊಸಬಟ್ಟೆ ಉಡಿಸಿ ಕುಳ್ಳಿರಿಸಿ ಅತ್ತೆಯಾದವಳು ಹಲವಾರು ಭಕ್ಷ್ಯಗಳನ್ನು(ಹಣ್ಣು ಹಂಪಲು, ಅನ್ನ, ಕೋಳಿಪಲ್ಯ) ಇತ್ಯಾದಿ ಊಟ ಬಡಿಸುತ್ತಾಳೆ. ಆನಂತರ ಹಿರಿಯರ ಅಪ್ಪಣೆ ಪಡೆದು ಗರ್ಭಿಣಿ ಊಟಮಾಡುತ್ತಾಳೆ. ಗರ್ಭಿಣಿಯು ತಾನು ತಿಂದು ಉಳಿದುದನ್ನು ತವರಿಗೆ ತೆಗೆದು ಕೊಂಡು ಹೋಗಿ ಮಕ್ಕಳಿಗೆ, ಹಿರಿಯರಿಗೆ ಹಂಚುತ್ತಾರೆ. ಸಾಮಾನ್ಯವಾಗಿ ಮೊದಲ ಹೆರಿಗೆ ತಾಯಿಮನೆಯಲ್ಲಿ ಜರಗುತ್ತದೆ. ಈ ಸಂದರ್ಭದಲ್ಲಿ ಗರ್ಭಿಣಿ ಮಹಿಳೆಗೆ ಸಮುದಾಯದ ಬಂಧುಗಳು ಉಡುಗೊರೆಗಳನ್ನು (ಸೀರೆ, ಕುಬುಸ) ನೀಡುವುದು ಕಂಡುಬರುತ್ತದೆ.

**ಸಾವು**: ಹಂಡಿಜೋಗಿಗಳಲ್ಲಿ ಸತ್ತ ವ್ಯಕ್ತಿಗಳ ಶವವನ್ನು ಹೂಳುವ ಮತ್ತು ಸುಡುವ ಪದ್ಧತಿ ಸಮುದಾಯದಲ್ಲಿ ರೂಢಿಯಲ್ಲಿದೆ. ಸಮುದಾಯದಲ್ಲಿನ ಗೃಹಸ್ಥರು ವಯೋಸಹಜವಾದ ಸಾವನ್ನಪ್ಪಿದರೆ

ಅಂತಹ ಪುರುಷ ಅಥವಾ ಮಹಿಳೆಯರ ಶವಗಳನ್ನು ಹೂಳುವ ಮೂಲಕ ಶವಸಂಸ್ಕಾರ ಮಾಡಲಾಗುತ್ತದೆ. ಸಮುದಾಯದಲ್ಲಿ ಅಕಾಲಿಕವಾಗಿ ಸಾವನ್ನಪ್ಪಿದ ಯುವಕ, ಯುವತಿಯರು ಅಥವಾ ಮಕ್ಕಳನ್ನು ಸಹ ಹೂಳುವ ಪದ್ದತಿ ಸಮುದಾಯದಲ್ಲಿ ರೂಢಿಯಲ್ಲಿದೆ.

ಸಮುದಾಯದಲ್ಲಿ ಗಂಭೀರ ಖಾಯಿಲೆಗಳಿಂದ ಸಾವನ್ನಪ್ಪಿದವರು ಹಾಗೂ

ಅಪಘಾತಗಳಲ್ಲಿ ಸಾವನ್ನಪ್ಪಿದವರು,

ಗರ್ಭಿಣಿ ಸ್ತ್ರೀ ಮರಣ ಹೊಂದಿದರೆ,

ಬಾಣಂತಿ ಹೆಂಗಸು ಸಾವನ್ನಪ್ಪಿದರೆ,

ತೊನ್ನು ರೋಗ ಇರುವವರು ಸಾವನ್ನಪ್ಪಿದರೆ,

ಇಂತಹವರ ಶವವನ್ನು ಸುಡುವ ಮುಖಾಂತರ ಶವಸಂಸ್ಕಾರ ಮಾಡಲಾಗುತ್ತದೆ. ನಂತರ ಆತ್ಮಹತ್ಯೆ, ಕೊಲೆಯಾದ ವ್ಯಕ್ತಿಗಳ ಶವವನ್ನೂ ಸಹ ಮರಣೋತ್ತರ ಪರೀಕ್ಷೆಯ ನಂತರ ಸುಡುವ ಮುಖಾಂತರ ಶವಸಂಸ್ಕಾರ ಮಾಡಲಾಗುತ್ತದೆ. ಇವರಲ್ಲಿ ಮದುವೆಯಾಗದ ಗಂಡು-ಹೆಣ್ಣುಮಕ್ಕಳು ಹಾಗೂ ಚಿಕ್ಕ ಮಕ್ಕಳು ಸಾವನ್ನಪ್ಪಿದರೆ ಅವರನ್ನು ಮುಖ ಕೆಳಗೆ ಮಾಡಿ ಮಲಗಿಸಿ ಶವಸಂಸ್ಕಾರ ಮಾಡಲಾಗುತ್ತದೆ. ಉಳಿದಂತೆ ಸಮುದಾಯದಲ್ಲಿ ಮದುವೆಯಾದ ಪುರುಷ ಅಥವಾ ಮಹಿಳೆಯರು ಸತ್ತರೆ ಅವರನ್ನು ಕುಣಿಯಲ್ಲಿ ಕೂಡಿಸಿ ಶವಸಂಸ್ಕಾರ ಮಾಡಲಾಗುತ್ತದೆ. ಸಮುದಾಯದಲ್ಲಿ ಸತ್ತ ಶವವನ್ನು ಸ್ಮಶಾನಕ್ಕೆ ಸಾಗಿಸಲು ಜೋಳಿಗೆ ರೂಪದ ಕೌದಿಗಳನ್ನು ಬಳಸುತ್ತಾರೆ. ಜೋಳಿಗೆ ರೂಪದ ಕೌದಿಯಲ್ಲಿ ಶವವನ್ನು ಕೂಡಿಸಿ ಅದನ್ನು ಅಡ್ಡ ಗಳುವಿಗೆ ಸೇರಿಸಿಕೊಂಡು ನಾಲ್ಕು ಜನ ಹೊತ್ತು ಸಾಗುತ್ತಾರೆ. ಸಮುದಾಯದ ಹೊರಗಡೆ (ಆಸ್ಪತ್ರೆ, ಕೊಲೆ, ಆತ್ಮಹತ್ಯೆ) ಸಾವನ್ನಪ್ಪಿದ ಶವವನ್ನು ಕಾಲೋನಿಯ ಒಳಗೆ ಸೇರಿಸುವುದಿಲ್ಲ. ಊರ ಹೊರಗಡೆ ಇರಿಸಿ ಅಲ್ಲಿಂದಲೇ ಸ್ಮಶಾನಕ್ಕೆ ಕೊಂಡೊಯ್ದು ಶವಸಂಸ್ಕಾರ ವಿಧಿಯನ್ನು ನೆರವೇರಿಸಲಾಗುತ್ತದೆ.

**ಶವಸಂಸ್ಕಾರ ವಿಧಾನ:** ಸಮುದಾಯದಲ್ಲಿ ಮದುವೆಯಾದ ಪುರುಷ ಅಥವಾ ಮಹಿಳೆ ಸಾವನ್ನಪ್ಪಿದರೆ, ಕೂಡಲೇ ಆ ಮನೆಯ ಮುಂಭಾಗದಲ್ಲಿ ಬೆಂಕಿ ಹಾಕುತ್ತಾರೆ. ಸಮುದಾಯದಲ್ಲಿನ ಈ ಆಚರಣೆಯನ್ನು 'ತಲೆಕೊಳ್ಳಿ' ಎಂದು ಕರೆಯುತ್ತಾರೆ. ನಂತರ ಇದರ ಪಕ್ಕದಲ್ಲಿಯೇ ಮೂರು ಕಲ್ಲುಗಳನ್ನಿರಿಸಿ ಒಲೆಯನ್ನು ನಿರ್ಮಿಸಿ ಅದರ ಮೇಲೆ ದೊಡ್ಡ ಹಿತ್ತಾಳೆಯ ಹಂಡೆ (ಪಾತ್ರೆ) ಅಥವಾ ದೊಡ್ಡ ಮಣ್ಣಿನ ಹಳಗೆಯ (ಮಡಕೆ)ನ್ನಿಟ್ಟು ಅದರ ತುಂಬ ನೀರು ಕಾಯಿಸುತ್ತಾರೆ.

**ಶವಪೂಜೆ:** ಸಮುದಾಯದ ಬಂಧು-ಬಾಂಧವರೆಲ್ಲರೂ ಸೇರಿ ಮನೆಯ ಮುಂಭಾಗದಲ್ಲಿಯೇ ಶವವನ್ನು ಪೂರ್ವದಿಕ್ಕಿಗೆ ಮುಖಮಾಡಿ ಕೂಡಿಸಿ (ಕುಳ್ಳಿರಿಸಿ) ಶವಸ್ನಾನ ಮಾಡಲಾಗುತ್ತದೆ. ಸಂಬಂಧಿಕರು ಒಂದೊಂದು ಬಿಂದಿಗೆ ನೀರು ಹಾಕುವ ಮೂಲಕ ಶವದ ಸ್ನಾನ ಮಾಡಿಸುತ್ತಾರೆ. ಶವದ ಸ್ನಾನವಾದ ಬಳಿಕ ಮನೆಯ ಹೊರಾಂಗಣ ಮುಂಭಾಗದ ಗೋಡೆಗೆ ಅಂಟಿಕೊಂಡಂತೆ

ಪದ್ಮಾಸನದಲ್ಲಿ ಕೂರಿಸಲಾಗುತ್ತದೆ. ಶವ ಕೆಳಗೆ ಬೀಳದಂತೆ ಶವದ ಕುತ್ತಿಗೆಯ ಭಾಗಕ್ಕೆ ಎರಡು ಕೋಲುಗಳನ್ನು ಕತ್ತರಿಯಾಕಾರದಲ್ಲಿ ಜೋಡಿಸಲಾಗುತ್ತದೆ. ನಂತರ ಶವದ ತಲೆಗೆ ಎಣ್ಣೆ ಹಚ್ಚಿ, ಹಣೆಗೆ ಕುಂಕುಮ, ವಿಭೂತಿಯಿರಿಸಿ ಪೂಜಿಸಲಾಗುತ್ತದೆ. ಸಮುದಾಯದಲ್ಲಿ ಮುತ್ತೈದೆಯರು ಸಾವನ್ನಪ್ಪಿದರೆ ಅವರಿಗೆ ಅರಿಶಿಣ ಹಚ್ಚಿ ಕೊರಳಲ್ಲಿ ಹೂಮಾಲೆ ಹಾಕಿ ಶೃಂಗಾರ ಮಾಡಲಾಗುತ್ತದೆ. ನಂತರ ಶವಸ್ನಾನ ಮಾಡಿದ ಭಾಗವನ್ನು ಗೋಮೂತ್ರ ಸಿಂಪಡಿಸಿ ಶುದ್ಧಿಗೊಳಿಸಲಾಗುತ್ತದೆ.

ಹಂಡಿಜೋಗಿಗಳ ಕೆಲವು ನೆಲೆಗಳಲ್ಲಿ ಮುತ್ತೈದೆಯರು ಸಾವನ್ನಪ್ಪಿದರೆ, ಅವರಿಗೆ ವಿವಾಹ ಸಂದರ್ಭದ ಕಾರ್ಯಕ್ರಮದಂತೆ ಮೈಗೆಲ್ಲಾ ಅರಿಶಿಣ, ಹಣೆಗೆ ಕುಂಕುಮ, ವಿಭೂತಿ ಇರಿಸಿ ಹೊಸ ಬಿಳಿ ವಸ್ತ್ರ ತೊಡಿಸಿ ಹೂಮಾಲೆ ಹಾಕಿ ಶೃಂಗಾರ ಮಾಡಲಾಗುತ್ತದೆ. ಬಳಿಕ ಅವಳ ಗಂಡನನ್ನು ಪಕ್ಕದಲ್ಲಿ ಕೂಡಿಸಿ ಕೊರಳಿಗೆ ಹಾರ ಹಾಕಿ ಸತ್ತ ಮುತ್ತೈದೆಗೆ ತಾಳಿ ಕಟ್ಟುವ ಪದ್ದತಿ ರೂಢಿಯಲ್ಲಿದೆ. ನಂತರ ಸಮುದಾಯದ ಬಾಂಧವರೆಲ್ಲರೂ ಸೇರಿ ಇಬ್ಬರಿಗೆ ಆರತಿ ಮಾಡಿ ಸತ್ತ ಮುತ್ತೈದೆಗೆ ಹೂ, ಬಳೆ ಹಾಕಿ ಉಡಿ ತುಂಬಲಾಗುತ್ತದೆ. ನಂತರ ಕೌದಿಯಲ್ಲಿ ಶವವನ್ನು ತೆಗೆದುಕೊಂಡು ಹೋಗಲಾಗುತ್ತದೆ.

ಹಂಡಿಜೋಗಿಗಳಲ್ಲಿ ಶವವನ್ನು ಸ್ಮಶಾನಕ್ಕೆ ಸಾಗಿಸಲು ಚಟ್ಟ ಬಳಸುತ್ತಿರಲಿಲ್ಲ. ಸತ್ತ ವ್ಯಕ್ತಿಯು ಬಳಸುತ್ತಿದ್ದ ಹಾಸಿಗೆಗಳನ್ನೇ ಜೋಳಿಗೆ ರೂಪದಲ್ಲಿ ಮಾಡಿ, ಕೌದಿಯನ್ನು ಹಾಸಿ ಅದರಲ್ಲಿ ಕೂರಿಸಿಕೊಂಡು ನಾಲ್ಕು ಜನ ನಾಲ್ಕು ಮೂಲೆಗಳನ್ನು ಹಿಡಿದುಕೊಂಡು ಹೋಗುತ್ತಾರೆ. ಒಬ್ಬರು ಶವದ ತಲೆಯನ್ನು ಬೀಳದಂತೆ ಹಿಡಿದು ಸಾಗುತ್ತಾರೆ. ಹೀಗೆ ಶವವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗುವಾಗ ದಾರಿಯುದ್ದಕ್ಕೂ ಗುರುಗೋರಖ್, ಗುರುಗೋರಖ್, ಗುರುಗೋರಖ್ ಎಂದು ಹೇಳುತ್ತ ಮುಂದೆ ಹೋಗುತ್ತಾರೆ.

ಶವದ ಜೊತೆಯಲ್ಲಿಯೇ ಒಂದು ಮಣ್ಣಿನ ಮಡಕೆಯಲ್ಲಿ ಅರ್ಧ ಬೆಂದ ಅನ್ನಕ್ಕೆ ಅರಿಶಿಣ ಹಾಕಿ ತಯಾರಿಸಲಾದ ಅನ್ನದ ಮಡಕೆಯನ್ನು ಸತ್ತ ವ್ಯಕ್ತಿಯ ಹಿರಿಯ ಮಗನು ಕೈಯಲ್ಲಿ ಹಿಡಿದು ಸಾಗುತ್ತಾನೆ. ಮತ್ತೊಂದು ಕೈಯಲ್ಲಿ ಕುಡುಗೋಲನ್ನು ಹಿಡಿದಿರುತ್ತಾನೆ. ಇದನ್ನು ಶವಸಂಸ್ಕಾರ ಮುಗಿದ ಬಳಿಕ ಸಮಾಧಿಯ ಮಣ್ಣಿನ ರಾಶಿಯ ಮೇಲೆ ಬೋರಲಾಗಿ ಹಾಕಿ, ಎಡಗೈಯಲ್ಲಿ ಕುಡುಗೋಲು ಹಿಡಿದು ಮಡಿಕೆ ಪುಡಿಯಾಗುವಂತೆ ಹೊಡೆದುಹಾಕಲಾಗುತ್ತದೆ.

**ಕುಣಿ ಪೂಜೆ**

ಸಮುದಾಯದ ವ್ಯಕ್ತಿಗಳೇ ಶವದ ಕುಣಿಯನ್ನು ನಿರ್ಮಿಸುತ್ತಾರೆ. ಶವವನ್ನು ಕೂಡಿಸಿ ಸಂಸ್ಕಾರ ಮಾಡುವುದರಿಂದ ಮೂರು ಮೊಳ ಆಳ, ಎರಡು ಮೊಳ ಅಗಲವಾದ ಗುಂಡಿಯನ್ನು (ಕುಣಿ) ತೋಡುತ್ತಾರೆ. ಕೆಲವು ನೆಲೆಗಳಲ್ಲಿ ಕುಣಿಯನ್ನು ಸಾರಿಸಿ ಅದರ ಗೋಡೆಗೆ ಓಂ ಅಥವಾ ತ್ರಿಶೂಲವನ್ನು ಬಿಡಿಸುವ ಪದ್ಧತಿ ಕಂಡುಬರುತ್ತದೆ. ಇನ್ನೂ ಕೆಲವು ನೆಲೆಗಳಲ್ಲಿ ಕುಣಿಯನ್ನು ವಿಭೂತಿ, ಊದುಬತ್ತಿ, ಕುಂಕುಮ, ಕರ್ಪೂರದಿಂದ ಪೂಜೆ ಮಾಡಿ ತೆಂಗಿನ ಕಾಯಿ ಹೊಡೆದು, ವಿಭೂತಿಯನ್ನು ಪುಡಿ ಮಾಡಿ ಕುಣಿಯೊಳಗೆ ಹಾಕಲಾಗುತ್ತದೆ. ಕುಣಿ ನಿರ್ಮಿಸುವವರು ಶವಸಂಸ್ಕಾರ

ಪೂರ್ಣವಾಗುವವರೆಗೆ ಮನೆಗೆ ಬರುವಂತಿಲ್ಲ. ಕುಣಿಪೂಜೆಯಾದ ನಂತರ ಶವವನ್ನು ಪೂರ್ವ ದಿಕ್ಕಿಗೆ ಮುಖ ಮಾಡಿ ಕುಣಿಯಲ್ಲಿ ಕೂರಿಸಲಾಗುತ್ತದೆ. ಹೀಗೆ ಕೂರಿಸಿದ ಶವದ ಜೊತೆಯಲ್ಲಿ ಸೋರೆ ಬುರುಡೆಯ ಕಪಾಲ ಪಾತ್ರೆ (ಭಿಕ್ಷಾಪಾತ್ರೆ-ಹಂಡೆ)ಯನ್ನಿರಿಸಿ ಸಂಸ್ಕಾರ ಮಾಡಲಾಗುತ್ತದೆ. ಜೊತೆಗೆ ಶವದ ಹೆಗಲಿಗೆ ಜೋಳಿಗೆ ಹಾಕಿ ಪೂಜೆ ಸಲ್ಲಿಸಿದ ನಂತರ ಸಮುದಾಯದ ಬಂಧು-ಬಾಂಧವರೆಲ್ಲರೂ ಒಂದೊಂದು ಹಿಡಿ ಮಣ್ಣು ಹಾಕುತ್ತಾರೆ. ಕೊನೆಯಲ್ಲಿ ಕುಣಿ ನಿರ್ಮಿಸಿದವರು ಶವವನ್ನು ಮಣ್ಣಲ್ಲಿ ಮುಚ್ಚಿ ಸಮಾಧಿ ಮಾಡುತ್ತಾರೆ. ಇದು ಹಂಡಿಜೋಗಿಗಳು ಮಾಡುವ ಶವಸಂಸ್ಕಾರ ಕ್ರಮವಾಗಿದೆ.

ಹಂಡಿಜೋಗಿಗಳಲ್ಲಿ ಹುಟ್ಟು (ಜನನ) ಮುಟ್ಟು (ಋತುಮತಿ) ಸಾವು (ಮರಣ) ಈ ಮೂರು ಆಚರಣೆಗಳ ಬಗ್ಗೆ ಮೈಲಿಗೆ (ಸೂತಕದ) ಭಾವನೆ ಸಮುದಾಯದಲ್ಲಿ ರೂಢಿಯಲ್ಲಿದೆ. ಜೊತೆಗೆ ಶವಸಂಸ್ಕಾರಕ್ಕೆ ಚಿಕ್ಕ ಮಕ್ಕಳು (ಗಂಡು ಮತ್ತು ಹೆಣ್ಣು) ಬಾಣಂತಿಯರು, (ಚಿಕ್ಕ ಮಕ್ಕಳ ತಾಯಂದಿರು) ಹೋಗುವುದಿಲ್ಲ. ಶವಸಂಸ್ಕಾರಕ್ಕೆ ಹೋದವರು ಸ್ನಾನಮಾಡಿಕೊಂಡು ದೇವರ ದರ್ಶನ ಮಾಡಿಕೊಂಡು ಸತ್ತವರ ಮನೆಗೆ ಹೋಗಿ ದೀಪ ನೋಡಿ ನಮಸ್ಕರಿಸಿದ ನಂತರ ತಮ್ಮ ತಮ್ಮ ಮನೆಗಳಿಗೆ ತೆರಳುತ್ತಾರೆ. ಇದರ ನಂತರ ಸತ್ತ ವ್ಯಕ್ತಿಯ ಕುಟುಂಬದವರಿಂದ ಮಧ್ಯ ಸೇವನೆಯ ವ್ಯವಸ್ಥೆಯನ್ನು ಮಾಡಲಾಗುತ್ತದೆ.

ನಂತರ ಸಮುದಾಯದಲ್ಲಿ ಶವವನ್ನು ಹೊತ್ತವರು ಮೂರು ದಿನಗಳವರೆಗೆ ಮನೆಯೊಳಗೆ ಹೋಗಬಾರದೆಂಬ ನಿಯಮವಿದೆ. ಜೊತೆಗೆ ಇವರಾರು ಮನೆಯಲ್ಲಿನ ಸಣ್ಣ ಮಕ್ಕಳನ್ನು ಮುಟ್ಟಬಾರದು ಎಂಬ ನಂಬಿಕೆ ಇದೆ. ಶವಸಂಸ್ಕಾರದ ಬಳಿಕ ಇಡೀ ನೆಲೆಯಲ್ಲಿನ ಎಲ್ಲಾ ಸಮುದಾಯದವರು ದಿನಬಳಕೆಯ ವಸ್ತುಗಳನ್ನು ಶುದ್ಧಗೊಳಿಸಿಕೊಳ್ಳುತ್ತಾರೆ. ಮರಣ ಹೊಂದಿದ ವ್ಯಕ್ತಿಯ ಮನೆಯವರು ಶವಸಂಸ್ಕಾರ ಮುಗಿಸಿ ಹಿಂತಿರುಗುವ ಹೊತ್ತಿಗೆ ಇಡೀ ಮನೆಯ ಕಸವನ್ನೆಲ್ಲ ಗುಡಿಸಿ, ಮನೆಯಲ್ಲಿನ ಗೃಹೋಪಯೋಗಿ ವಸ್ತುಗಳನ್ನು ಸ್ವಚ್ಛಗೊಳಿಸಿ ಇಡೀ ಮನೆಗೆಲ್ಲ ಗೋಮೂತ್ರ ಸಿಂಪಡಿಸಿ ಸ್ವಚ್ಛಗೊಳಿಸುತ್ತಾರೆ.

**ದಿವಸ (ಮೂರು ದಿನದ ಕಾರ್ಯಕ್ರಮ) (ಸಣ್ಣ ದಿವಸ)**

ಶವಸಂಸ್ಕಾರ ಮಾಡಿದ ಮೂರು ದಿನಕ್ಕೆ ಈ ಕಾರ್ಯಕ್ರಮವಿರುತ್ತದೆ. ಸಮುದಾಯದಲ್ಲಿ ಇದನ್ನು ಮೂರು ದಿನದ ಕಾರ್ಯ, ಸಣ್ಣ ದಿವಸ ಎಂದು ಕರೆಯುತ್ತಾರೆ. ಮೂರು ದಿನದ ಕಾರ್ಯವನ್ನು ಸಮುದಾಯದಲ್ಲಿ ದೀಕ್ಷಬದ್ದರಾದ ಯುವಕರು, ಗೃಹಸ್ಥರಾದ ಪುರುಷರು, ಮುತ್ತೈದೆಯರು, ಸಾವನ್ನಪ್ಪಿದಾಗ ಮಾತ್ರ ಆಚರಿಸಲಾಗುತ್ತದೆ. ವಿವಾಹವಾಗದ ಮಹಿಳೆಯರು, ಚಿಕ್ಕಮಕ್ಕಳು (ದೀಕ್ಷೆ ಪಡೆಯದೇ ಇರುವವರು) ಸಾವನ್ನಪ್ಪಿದರೆ ಈ ಆಚರಣೆ ಮಾಡುವುದಿಲ್ಲ.

ಮೂರು ದಿನದ ಕಾರ್ಯದಂದು ಮಾಂಸದ ಊಟ ಶೇಂದಿ ಸೇವನೆ ಸಮುದಾಯದಲ್ಲಿ ಕಡ್ಡಾಯವಾಗಿರುತ್ತದೆ. ಸತ್ತ ವ್ಯಕ್ತಿಯ ಕುಟುಂಬದವರೆಲ್ಲರೂ ಸ್ನಾನ ಮಾಡಿಕೊಂಡು ಇಡೀ

ಮನೆಯನ್ನು ಸ್ವಚ್ಛಗೊಳಿಸಿ, ಮನೆಯ ಮುಂಭಾಗದ ಅಂಗಳವನ್ನು ಸಗಣಿಯಿಂದ ಸಾರಿಸಲಾಗುತ್ತದೆ. ನಂತರ ಕುಟುಂಬದವರು ತಮ್ಮ ಆರ್ಥಿಕ ಸಾಮರ್ಥ್ಯಾನುಸಾರ ೫-೧೦ ಕೋಳಿಗಳನ್ನು ತಂದು ಪೂಜೆ ಮಾಡಿ, ಕೋಳಿಗಳನ್ನು ಕೊಯ್ದು ಅದರಿಂದ ಸಾಂಬಾರು (ಮಾಂಸಹಾರ) ಸಿದ್ದಪಡಿಸುತ್ತಾರೆ. ಇದರ ಜೊತೆಗೆ ಅನೇಕ ತರಕಾರಿಗಳಿಂದ ಪಲ್ಯ ತಯಾರಿಸುತ್ತಾರೆ. ಇವುಗಳ ಜೊತೆಗೆ ರೊಟ್ಟಿ ಅನ್ನವನ್ನು ಪ್ರತ್ಯೇಕವಾಗಿ ಒಂದೊಂದು ಮುಚ್ಚಳದಲ್ಲಿರಿಸಿಕೊಂಡು ಎಡೆ ತೆಗೆದುಕೊಂಡು ಹೂ, ಪೂಜಾ ಸಾಮಗ್ರಿಗಳೊಂದಿಗೆ ಸಮಾಧಿ ಸ್ಥಳಕ್ಕೆ ತೆರಳಿ ಪೂಜೆ ಸಲ್ಲಿಸಲಾಗುತ್ತದೆ. ಪೂಜೆಯಲ್ಲಿ ಸತ್ತ ವ್ಯಕ್ತಿಯ ಇಡೀ ಕುಟುಂಬ ಹಾಗೂ ಸಮುದಾಯದ ಬಂಧು ಬಾಂಧವರು ಪಾಲ್ಗೊಂಡು ಸತ್ತ ವ್ಯಕ್ತಿಯ ಸಮಾಧಿಗೆ ಪೂಜೆ ಸಲ್ಲಿಸಿ, ನಮಸ್ಕರಿಸಿ ಸತ್ತ ವ್ಯಕ್ತಿಗೆ ಸ್ವರ್ಗ ಪ್ರಾಪ್ತಿಯಾಗಲಿ ಎಂದು ಬೇಡಿಕೊಳ್ಳುತ್ತಾರೆ (ಹಾರೈಸುತ್ತಾರೆ). ಸಮಾಧಿಗೆ ಪೂಜೆ ಸಲ್ಲಿಸಿ ಹಿಂತಿರುಗಿ ಮನೆಗೆ ಬರುವ ಸಂದರ್ಭದಲ್ಲಿ ಮೂರು ಸ್ಥಳದಲ್ಲಿ ಸ್ವಲ್ಪ ಹೊತ್ತು ಕುಳಿತು ಅಲ್ಲಿ ಎಡೆ ಇಟ್ಟಿರುವುದನ್ನು (ಹಿಂಡಿ ಕೂಳು) ಕಾಗೆ ಮುಟ್ಟುವವರೆಗೆ ಇದ್ದು, ಬರುತ್ತಾರೆ. ಕೂತಿದ್ದ ಸ್ಥಳದಲ್ಲಿ ಬೀಡಿ, ಸಿಗರೇಟ್ ಸೇದಿ, ಎಲೆ ಅಡಿಕೆ ತಿಂದು ಮನೆಗೆ ಬರುತ್ತಾರೆ. ಮನೆಯಲ್ಲಿ ಕೈಕಾಲು ತೊಳೆದು, ಹಣೆಗೆ ಬೂದಿ ಹಚ್ಚಿಕೊಂಡು (ಭಸ್ಮ), ತಲೆಗೆ ಗೋಮೂತ್ರ ಸಿಂಪಡಿಸಿಕೊಳ್ಳುತ್ತಾರೆ. ಇದಾದ ನಂತರ ಸತ್ತ ವ್ಯಕ್ತಿಯ ಮನೆಯಲ್ಲಿ ಮಾಡಿದ್ದ ಅಡಿಗೆ (ಮಾಂಸಹಾರ)ಯನ್ನು ಶವಸಂಸ್ಕಾರಕ್ಕೆ ಹೋದ ಸಮುದಾಯದ ಬಂಧು ಬಾಂಧವರೆಲ್ಲರೂ ಸೇರಿ ಊಟ ಮಾಡುತ್ತಾರೆ. ಇದು ಮೂರು ದಿನದ ಕಾರ್ಯವಾಗಿದೆ.

**ತಿಥಿ (ದೊಡ್ಡ ದಿವಸ)**: ಹಂಡಿಜೋಗಿಗಳಲ್ಲಿ ಸತ್ತ ೧೩ ಅಥವಾ ೧೬ ದಿನದಂದು ತಿಥಿ ಕಾರ್ಯ ಮಾಡುತ್ತಾರೆ. ಅಂದು ಸತ್ತ ವ್ಯಕ್ತಿಯ ಕುಟುಂಬದವರು ಇಡೀ ಮನೆಯನ್ನು ಸ್ವಚ್ಛಗೊಳಿಸಿ, ಸಮಾಧಿ ಜಾಗಕ್ಕೆ ತೆರಳಿ, ಸಮಾಧಿಗೆ ಪೂಜೆ ಸಲ್ಲಿಸಿ, ಅಂದು ಸತ್ತ ವ್ಯಕ್ತಿಗೆ ಪ್ರಿಯವಾದ ಆಹಾರ, ಸಿಹಿ ಊಟ, ಅಥವಾ ಸತ್ತ ವ್ಯಕ್ತಿಯು ಸೇವಿಸುತ್ತಿದ್ದ ಶೇಂದಿ, ಸಿಗರೇಟು, ಬೀಡಿ, ಭಂಗಿ (ತಂಬಾಕು), ಎಲೆ, ಅಡಿಕೆ, ಮೊಟ್ಟೆ ಇತ್ಯಾದಿ ವಸ್ತುಗಳನ್ನಿರಿಸಿ ಪೂಜೆ ಸಲ್ಲಿಸಲಾಗುತ್ತದೆ. ಮಾಂಸದ ಅಡಿಗೆ ಅಥವಾ ಸಿಹಿ ಊಟವನ್ನು ನೈವೇದ್ಯವಾಗಿರಿಸಲಾಗುತ್ತದೆ.

**ಸಿದ್ಧಭುಕ್ತಿ:** ಹಂಡಿಜೋಗಿಗಳು ಸತ್ತ ವ್ಯಕ್ತಿಯ ತಿಥಿ ದಿನದಂದು ಸಿದ್ಧಭುಕ್ತಿ ಆಚರಣೆಯನ್ನು ಮಾಡುತ್ತಾರೆ. ಇದೊಂದು ಆಹಾರ ಸಂಬಂಧಿ ಆಚರಣೆಯಾಗಿದೆ. ಜೊತೆಗೆ ಮಾಂಸಹಾರ ಪದ್ಧತಿಯಾಗಿದೆ. ತಿಥಿಯ ದಿನದಂದು ಸತ್ತ ವ್ಯಕ್ತಿಯ ಕುಟುಂಬದವರು, ಆ ದಿನ ಒಂದು ಕುರಿ (ಬ್ಯಾಟೆ)ಯನ್ನು ತಂದು ಕೊಯ್ದು ಮಾಂಸಹಾರವನ್ನು ಸಿದ್ದಪಡಿಸುತ್ತಾರೆ. ಕುರಿಸಾಂಬಾರಿನ ಜೊತೆಗೆ ರೊಟ್ಟಿ, ಅನ್ನವನ್ನು ಸಿದ್ದಪಡಿಸುತ್ತಾರೆ. ಮಾಂಸಹಾರ ಸಿದ್ದವಾದ ಬಳಿಕ ಕುಟುಂಬದಲ್ಲಿ ಸಿದ್ಧಭುಕ್ತಿ ಆಚರಣೆ ಮಾಡುತ್ತಾರೆ.

**ವಿಧಾನ:** ಕರಿ ಕಂಬಳಿಯ ಗದ್ದುಗೆ ಹಾಸಿ, ಅದರ ಮೇಲೆ ಜೋಳದ ನಿಧಿಯಿಂದ ರಾಶಿ ಮಾಡಿ ಅದರ ಮೇಲೆ ೫ ಕುಂಬಳಕಾಯಿಯ ಸೋರೆ ಬುರುಡೆಯ ಪಾತ್ರೆಗಳನ್ನಿರಿಸಲಾಗುತ್ತದೆ.

ಅವುಗಳಿಗೆ (ಪಾತ್ರೆಗಳಿಗೆ) ವಿಭೂತಿ, ಕುಂಕುಮ ಹಚ್ಚಲಾಗುತ್ತದೆ. ನಂತರ ಕುರಿಯ ಮಾಂಸದ ಅಡಿಗೆ ಹಾಗೂ ರೊಟ್ಟಿ ಮತ್ತು ಅನ್ನವನ್ನು ಪಾತ್ರೆಗಳಿಗೆ ತುಂಬಿ ಆ ಐದು ಸೋರೆ ಬುರುಡೆಯ ಪಾತ್ರೆಗಳ ಮಧ್ಯೆ ಭೈರವ ಸ್ವರೂಪಿ (ಸಂಕೇತ)ಯಾದ ತ್ರಿಶೂಲವನ್ನಿರಿಸಿ ಸಿದ್ಧಭುಕ್ತಿ ಮಾಡಲಾಗುತ್ತದೆ.

ಹೀಗೆ ಪೂಜಿಸಿದ ನಂತರ ಸತ್ತ ವ್ಯಕ್ತಿಯ ಸಮಾಧಿಗೆ ತೆರಳಿ ಸತ್ತ ವ್ಯಕ್ತಿ ತಿನ್ನುವ ಪದಾರ್ಥಗಳನ್ನು, ಪಾನೀಯಗಳನ್ನು ಸಮಾಧಿ ಬಳಿ ಇರಿಸಿ ಪೂಜೆ ಸಲ್ಲಿಸಲಾಗುತ್ತದೆ. ನಂತರ ಸಿದ್ಧಭುಕ್ತಿ ಪೂಜೆಯಾದ ಬಳಿಕ ಸಮುದಾಯದ ಬಂಧು-ಬಾಂಧವರೆಲ್ಲರೂ ಸತ್ತ ವ್ಯಕ್ತಿಯ ಭಾವಚಿತ್ರಕ್ಕೆ ಪೂಜೆ ಸಲ್ಲಿಸಿ, ಹಣ್ಣುಕಾಯಿ, ಕರ್ಪೂರಗಳನ್ನಿರಿಸಿ ನಮಸ್ಕರಿಸಲಾಗುತ್ತದೆ. ಕೊನೆಯಲ್ಲಿ ಸೇಂದಿ ಸೇವನೆ ಆದ ನಂತರ ಮಾಂಸಹಾರದ ಭೋಜನದ ವ್ಯವಸ್ಥೆಯನ್ನು ಮಾಡಲಾಗುತ್ತದೆ.

ನಂತರ ಸಮುದಾಯದಲ್ಲಿ ಸತ್ತ ವ್ಯಕ್ತಿಗಳಿಗೆ (ಹಿರಿಯರಿಗೆ) ಪ್ರತೀ ವರ್ಷ ನವರಾತ್ರಿಯ ಸಂದರ್ಭದಲ್ಲಿ ಮಾಂಸಹಾರದ ಎಡೆಯನ್ನು ಹಾಕಲಾಗುತ್ತದೆ.

### ೪.೨. ಹಂಡಿಜೋಗಿಗಳ ವೇಷಭೂಷಣಗಳು

ಕರ್ನಾಟಕ ವೃತ್ತಿಗಾಯಕ ಪರಂಪರೆಯಲ್ಲಿಯೇ ಅತ್ಯಂತ ಮುಖ್ಯವಾದ ಗಾಯಕವರ್ಗವೆಂದರೆ ಹಂಡಿಜೋಗಿಗಳು. ಇವರು ಮೌಖಿಕ ಪರಂಪರೆಯ ನೆಲೆಯಲ್ಲಿ ತಮ್ಮ ಕಲೆಯನ್ನು ಸಂರಕ್ಷಿಸಿಕೊಂಡು ಬಂದಿದ್ದಾರೆ. ಹಾಡುಗಾರಿಕೆ ಈ ಸಮುದಾಯದ ಪ್ರಧಾನವೃತ್ತಿಯಾಗಿದೆ. ಸಮುದಾಯದ ಹಿರಿಯರಿಂದ ಸಿದ್ಧಪಡಿಸಿಕೊಂಡ ಕಿನ್ನರಿವಾದ್ಯ ಹಾಡುಗಾರಿಕೆಯ ಪ್ರಧಾನ ಆಕರ್ಷಣೆಯಾಗಿದೆ. ಅಲೆಮಾರಿಗಳಾದ ಇವರು ಸದಾ ಸಂಚಾರದಲ್ಲಿಯೇ ವರ್ಷದ ಅನೇಕ ದಿನಗಳನ್ನು ಕಳೆಯುತ್ತಾರೆ.

ಹಂಡಿಜೋಗಿಗಳು ವೃತ್ತಿಯ ಆಚರಣೆ(ಪ್ರದರ್ಶನ)ಯ ಸಂದರ್ಭದಲ್ಲಿ ಮಾತ್ರ ತಮ್ಮ ಸಮುದಾಯದ ಸಂಪ್ರದಾಯದ ಉಡುಗೆಗಳು ಹಾಗೂ ಸಮುದಾಯದ ಕುಲ ಸಂಕೇತಗಳನ್ನು ಧರಿಸುತ್ತಾರೆ. ಅಂತಹ ಜೋಗಿಯ ವೇಷಭೂಷಣಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

ಜೋಗಿಯಾದವನು ಮುಖ್ಯವಾಗಿ ವೃತ್ತಿಯ ಆಚರಣೆಯ ಸಂದರ್ಭದಲ್ಲಿ ಕೈಯಲ್ಲಿ ಕಿನ್ನರಿ, ಎರಡು ಹೆಗಲಿಗೆ ಎರಡು ಜೋಳಿಗೆ, ಜೋಳಿಗೆಯಲ್ಲಿ ಸದಾ ಹಂಡೆ(ಭಿಕ್ಷಾಪಾತ್ರೆ) (ಕಪಾಲಬುಟ್ಟಿ) ಹೊಂದಿರುತ್ತಾರೆ. ಇದರ ಜೊತೆಗೆ ತಲೆಗೆ ಬಣ್ಣಬಣ್ಣದ ಮುಂಡಾಸು, ಮುಂಡಾಸಿಗೊಂಡು ತ್ರಿಶೂಲ, ಮುಂಡಾಸಿಗೆ ಅಂಟಿಕೊಂಡಂತೆ ಗಾಜಿನ ಕಡ್ಡಿಯ ಗುಳೇಪು, ಕರಿಯ ನಿಲುವಂಗಿ (ಕಪ್ಪು ಕೋಟು), ಬಿಳಿಯ ಕಚ್ಚೆಪಂಚೆ, ಕುತ್ತಿಗೆಯ ತುಂಬ ಉದ್ದನೆಯ ಮುತ್ತಿನ ಸರಗಳು ಜೊತೆಗೆ ಕೊರಳಲ್ಲಿ ರುದ್ರಾಕ್ಷಿ ಸರಗಳು, ಸಿಂಗನಾದವನ್ನು ಧರಿಸಿರುತ್ತಾರೆ. ಜೊತೆಗೆ ಹಳದಿ ಶಲ್ಯ, ಕಿವಿಗೆ ಕರ್ಣಕುಂಡಲ, ಕಾಲಿಗೆ ಕಿರುಗೆಜ್ಜೆ, ಒಂದು ಕೈಯಲ್ಲಿ ಕಿನ್ನರಿ ಮತ್ತೊಂದು ಕೈಯಲ್ಲಿ ಗಗ್ರ ಧರಿಸಿರುತ್ತಾರೆ. ಹಂಡಿಜೋಗಿಗಳು ಹಾಡುಗಾರಿಕೆ ಕಲೆಯ ಪ್ರದರ್ಶನದ ಸಂದರ್ಭದಲ್ಲಿ ಮಾತ್ರ ತಮ್ಮ ಸಮುದಾಯದ ಪಾರಂಪರಿಕ ಉಡುಗೆ-ತೊಡುಗೆಗಳನ್ನು ಧರಿಸುತ್ತಾರೆ. ಸಮುದಾಯದಲ್ಲಿ ನವರಾತ್ರಿಯ ಸಂದರ್ಭದಲ್ಲಿ ಈ ವೇಷ ಭೂಷಣಗಳಿಗೆ ಪೂಜೆ ಸಲ್ಲಿಸಲಾಗುತ್ತದೆ. ಹಂಡಿಜೋಗಿಗಳು ತಾವು ಧರಿಸುವ ಈ ಪಾರಂಪರಿಕ

ಉಡುಗೆ-ತೊಡುಗೆಗಳ ಬಗೆಗೆ ದೈವಿಕ ಮನೋಭಾವನೆ ಇರುವುದು ಕಂಡುಬರುತ್ತದೆ. ಹಂಡಿಜೋಗಿಗಳು ತಮ್ಮ ಸಮುದಾಯದ ಕುಲಸಂಕೇತಗಳನ್ನು ತಪ್ಪದೇ ಕಲಾ ಪ್ರದರ್ಶನದ ಸಂದರ್ಭದಲ್ಲಿ ಧರಿಸುತ್ತಾರೆ. ಅವುಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ತ್ರಿಶೂಲ (ಭೈರವ ಸ್ವರೂಪಿ)

ಕಿನ್ನರಿ (ಅನ್ನ ಕೊಡುವ ದೈವ)

ಕಾಂಚೀರ (ಕರ್ಣಕುಂಡಲ, ಕಾಮಾಕ್ಷಿ ಜೋಗಿಮುದ್ರೆ)

ಜೋಳಿಗೆ (ತುತ್ತಿನ ಚೀಲ)

ಹಂಡೆ (ಕಪಾಲಬುಟ್ಟಿ, ಭಿಕ್ಷಾಪಾತ್ರೆ)

ಸಿಂಗನಾದ (ಪಾರಂಪರಿಕ ವಾದ್ಯ ಪರಿಕರ) ಮೊದಲಾದವುಗಳನ್ನು ತಪ್ಪದೇ ಧರಿಸುವುದು ಕಂಡುಬರುತ್ತದೆ.

**೪.೩. ಸಮುದಾಯದ ಉಪಪಂಗಡಗಳು**

ಮೂಲತಹ ಅಲೆಮಾರಿ ಬುಡಕಟ್ಟಿಗೆ ಸೇರಿದ ಹಂಡಿಜೋಗಿಗಳು ಹಾಡುಗಾರಿಕೆ ವೃತ್ತಿಯಿಂದ ಜೀವನ ನಿರ್ವಹಣೆ ಮಾಡುತ್ತಿರುವುದನ್ನು ಕಾಣಬಹುದಾಗಿದೆ. ಗಾಯಕ ವೃತ್ತಿ ಈ ಸಮುದಾಯದ ಸಾಂಪ್ರದಾಯಿಕ ಮೂಲ ವೃತ್ತಿಯಾಗಿದೆ. ಕರ್ನಾಟಕದ ಶಿವಮೊಗ್ಗ, ದಾವಣಗೆರೆ, ಬಳ್ಳಾರಿ ಹಾಗೂ ಚಿತ್ರದುರ್ಗ ಜಿಲ್ಲೆಗಳಲ್ಲಿ ಇವರು ಹೆಚ್ಚಾಗಿ ಕಂಡುಬರುತ್ತಾರೆ. ಸಾಂಪ್ರದಾಯಿಕ ಹಾಡುಗಾರರಾದ ಇವರಲ್ಲಿ ೧೦ಕ್ಕೂ ಅಧಿಕ ಸಂಖ್ಯೆಯ ಉಪ-ಕುಲ-ಬಳಿಗಳು ಕಂಡುಬರುತ್ತವೆ. ಕರ್ನಾಟಕದಲ್ಲಿನ ಯಾವೊಂದು ನೆಲೆಯಲ್ಲೂ ಸಹ ಸಮುದಾಯದ ಎಲ್ಲಾ ಉಪ-ಕುಲ-ಬಳಿಗಳಿಗೆ ಸೇರಿದವರು ಕಂಡುಬರುವುದಿಲ್ಲ. ಮೂಲತಹ ಮರಾಠಿ ಭಾಷಿಕರಾದ ಇವರು ಕರ್ನಾಟಕದಲ್ಲಿನ ನಾಥಮಠ ವೊಂದರಿಂದ ದೀಕ್ಷೆ ಪಡೆದು ಜೋಗಿಗಳಾಗುತ್ತಾರೆ. ಸಮುದಾಯದಲ್ಲಿ ಭೈರವನ ಹೆಸರಿನಲ್ಲಿ ನಾಥಮಠದ ಭಾವಾಜಿಯಿಂದ ಪಡೆಯುವ ಈ ದೀಕ್ಷೆಗೆ ಕಾಂಚೀರ ಎಂದು ಕರೆಯುತ್ತಾರೆ. ಸಮುದಾಯದಲ್ಲಿ ಕಾಲಭೈರವನ ಸನ್ನಿಧಿಯಲ್ಲಿ ಈ ದೀಕ್ಷೆ ಪಡೆಯುವುದರಿಂದ ಇದಕ್ಕೆ ಭೈರವದೀಕ್ಷೆ, ಸಿದ್ಧದೀಕ್ಷೆ, ಜೋಗಿದೀಕ್ಷೆ, ನಾಥದೀಕ್ಷೆ, ಕರ್ಣಕುಂಡಲ ಕಾಮಾಕ್ಷಿಮುದ್ರೆ ಎಂದು ಅನೇಕ ಹೆಸರುಗಳಿಂದ ಕರೆಯುವುದನ್ನು ಕಾಣಬಹುದಾಗಿದೆ. ಸಮುದಾಯದಲ್ಲಿನ ಪ್ರತಿಯೊಂದು ಉಪ-ಕುಲ-ಬಳಿಗಳಿಗೆ ಸೇರಿದ ಪುರುಷರು ಭೈರವನ ಹೆಸರಿನಲ್ಲಿ ದೀಕ್ಷೆ ಪಡೆಯುತ್ತಾರೆ. ಕಾಲಭೈರವ ಹಂಡಿಜೋಗಿ ಸಮುದಾಯದ ಆರಾಧ್ಯ ದೈವವಾಗಿದೆ. ಈ ದೈವದ ಜೊತೆಗೆ ಜೋಗಿಗಳು ಇನ್ನೂ ಅನೇಕ ಸ್ಥಳೀಯ ದೈವಗಳನ್ನು ಪೂಜಿಸುತ್ತಿರುವುದನ್ನು ಗುರುತಿಸಬಹುದಾಗಿದೆ. ಹಂಡಿಜೋಗಿ ಸಮುದಾಯದಲ್ಲಿನ ಪ್ರಧಾನ ಉಪ-ಕುಲ-ಬಳಿಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ. ಅವುಗಳೆಂದರೆ

ಪುಳಸ್ಕರ್ ಪಾಟೀಲ್ (ಸಮುದಾಯದ ಕುಲಗೌಡ)

ಹರಿಪೀರ್

ಶೆವಾನ್‌ಗೋರ್‍ಯಾ

ದಳವಾಯಿ

ಭಂಡಾರಿ

ಗಣಾಚಾರಿ

ಮದುರ್‌ಕೋರ್

ಪ್ರಭಳ್‌ಕರ್

ಡೋಕಾರಿ

ಸಿಂಧ್ಯಾ (ಶಿಂಧೆ)

ಚೌವ್ಹಾಣ್

ಎಂಬ ಪ್ರಧಾನ ಉಪ-ಕುಲ-ಬಳಿಗಳನ್ನು ಗುರುತಿಸಬಹುದಾಗಿದೆ. ಮೇಲಿನ ಉಪ ಪಂಗಡಗಳಲ್ಲಿ ಪುನಃ ಕೆಲವು ಬಳಿಗಳನ್ನು ಕಾಣಬಹುದಾಗಿದೆ. ಅಂತಹ ಬಳಿಗಳನ್ನು ಈ ಮುಂದಿನಂತೆ ನೋಡಬಹುದಾಗಿದೆ.

**ಹರಿಪೀರ್** ಎಂಬ ಉಪ ಪಂಗಡದಲ್ಲಿ ಎರಡು ಉಪ ಬಳಿಗಳನ್ನು ಗುರುತಿಸಬಹುದಾಗಿದೆ.

೧. ಕಟ್ಲ್ಯಾಪೀರ್

೨. ಡೋಕಾರಿಪೀರ್

**ದಳವಾಯಿ-** ಉಪ ಪಂಗಡದಲ್ಲಿ ಎರಡು ಬಳಿಗಳನ್ನು ಹೆಸರಿಸಬಹುದಾಗಿದೆ

೧. ಬಣಗಾರ ದಳವಾಯಿ

೨. ಕೊತ್ವಾಲ್

**ಭಂಡಾರಿ-** ಉಪ ಪಂಗಡದಲ್ಲಿ ಐದು ಉಪ ಬಳಿಗಳನ್ನು ಕಾಣಬಹುದಾಗಿದೆ.

೧. ಪಂಚಮ ಭಂಡಾರಿ

೨. ಭಂಡಾರಿ

೩. ಕುಂಬಾರ ಭಂಡಾರಿ

೪. ದನಗರ್ ಭಂಡಾರಿ

೫. ಪಾವಲಿ ಭಂಡಾರಿ

೬. ಪುಕ್ಟೇ ಭಂಡಾರಿ

ಈ ಮೇಲಿನ ಉಪ ಪಂಗಡಗಳ ಹೆಸರುಗಳನ್ನು ಗಮನಿಸಿದರೆ ಕೆಲವು ಅಂಶಗಳು ನಮಗೆ ದೊರಕುತ್ತವೆ. ಭಾಷಿಕವಾಗಿ ಕನ್ನಡೇತರ ಸಮುದಾಯವಾದ ಇವರಲ್ಲಿ ಕನ್ನಡ ಭಾಷೆಯಲ್ಲಿನ ಉಪ

ಪಂಗಡಗಳು ಇರುವುದನ್ನು ಗುರುತಿಸಬಹುದಾಗಿದೆ. ಇದಕ್ಕೆ ಸ್ಥಳೀಯ ಪ್ರಾದೇಶಿಕತೆ ಕಾರಣ ವಾಗಿರಬಹುದು. ಪ್ರತಿಯೊಂದು ಸಮುದಾಯದಲ್ಲಿರುವಂತೆ ಈ ಸಮುದಾಯದಲ್ಲೂ ಗೌಡ, ಪಾಟೀಲ, ದಳವಾಯಿ ಮೊದಲಾದ ವೃತ್ತಿವಾಚಿ ಘಟಕಗಳು ಸಮುದಾಯದಲ್ಲಿ ವ್ಯಕ್ತಿಗಳು ನಿರ್ವಹಿಸುವ ವೃತ್ತಿಯಿಂದಾಗಿ ಸ್ಥಾನ ಪಡೆದುಕೊಂಡಿರುವುದನ್ನು ಗುರುತಿಸಬಹುದಾಗಿದೆ.. ಇನ್ನೂ ಉಳಿದ ಉಪ ಪಂಗಡಗಳ ಹೆಸರುಗಳು ಕನ್ನಡೇತರವಾಗಿರುವುದನ್ನು ಗುರುತಿಸಬಹುದಾಗಿದೆ. ಸಮುದಾಯದ ಮೂಲ ಭಾಷೆಯಾದ ಮರಾಠಿ, ಭಾಷಾ ರೂಪಗಳಿಂದ ಕೂಡಿದ ಉಪ-ಕುಲ-ಬಳಿಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ. ಮೂಲಭಾಷೆಯಲ್ಲಿನ ಅಂತಹ ರೂಪಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

ಹರಿಪೀರ್

ಶೆವಾನ್‌ಗೋರ್‍ಯಾ

ಗಣಾಚಾರಿ

ಮದುರ್‌ಕೋರ್

ಡೋಕಾರಿ

ಪ್ರಭಳ್‌ಕರ್

ಶಿಂಧೆ

ಕಟ್ಲ್ಯಾಪೀರ್

ಕೋಥವಾಲ್

ಚವ್ಹಾಣ್

ಬಣಗಾರ್

ದನಗರ್

ಪಾವ್‌ಲಿ

ಪುಕ್ಟೇ

ಈ ಮೇಲಿನ ಎಲ್ಲಾ ಉಪಪಂಗಡಗಳ ಹೆಸರುಗಳು ಸಮುದಾಯದಲ್ಲಿನ ವ್ಯಕ್ತಿಗಳ ವೃತ್ತಿಯ ಹಿನ್ನೆಲೆಯಲ್ಲಿ ರೂಪುಗೊಂಡಿರುವುದನ್ನು ಕಾಣಬಹುದಾಗಿದೆ. ಪ್ರತಿಯೊಂದು ಉಪ ಪಂಗಡದ ಹೆಸರು ಒಂದು ವೃತ್ತಿಯ ಹೆಸರಾಗಿರುವುದನ್ನು ಗುರುತಿಸಬಹುದಾಗಿದೆ.

ಹಂಡಿಜೋಗಿಗಳಲ್ಲಿ ವಿವಾಹ ಸಂಬಂಧಗಳು ಒಂದೇ ಕುಲ-ಬಳಿಗಳಲ್ಲಿ ನಿಷಿದ್ಧವಾಗಿರುತ್ತದೆ. ಮೇಲಿನ ಉಪಪಂಗಡಗಳಲ್ಲಿ ಪ್ರಭಳಕರ್, ದಳವಾಯಿ, ಭಂಡಾರಿ ಈ ಮೂರು ಬೆಡಗಿಗೆ ಸೇರಿದವರು ಸಮುದಾಯದಲ್ಲಿ,

ಮುದುರ್‌ಕೋರ್

ಶವಾನ್‌ಗೋರ್‍ಯಾ

ಹರಿಪೀರ್

ಕಟ್ಲ್ಯಾಪೀರ್ ಮತ್ತು

ಗಣಾಚಾರಿ ಬೆಡಗಿನವರಿಗೆ ಪರಸ್ಪರ ನೆಂಟರಾಗುತ್ತಾರೆ.

### ೪.೪. ಸಮುದಾಯದ ಕುಲ-ದೈವಗಳು

ಅಲೆಮಾರಿಗಳಾದ ಹಂಡಿಜೋಗಿಗಳು ನಾಥಪಂಥ ಸಮುದಾಯಕ್ಕೆ ಸೇರಿದವರೆಂದು ವಿದ್ವಾಂಸರು ಹೇಳಿದ್ದಾರೆ. ಇವರು ಕರ್ನಾಟಕದಲ್ಲಿನ ನಾಥಮಠವೊಂದರಿಂದ ಜೋಗಿದೀಕ್ಷೆ ಪಡೆದು ಸಮುದಾಯದ ಪಾರಂಪರಿಕ ವೃತ್ತಿಯಾದ ಹಾಡುಗಾರಿಕೆ ಕಲೆಯ ಪ್ರದರ್ಶನದಲ್ಲಿ ತೊಡಗುತ್ತಾರೆ. ಇವರು ಯಾವತ್ತೂ ನಾಥಮಠದ ಶಿಷ್ಯರಾಗಿದ್ದಾರೆ. ಮಠದ ಅಧಿಪತಿಗಳಾದ ಭಾವಜಿಗಳಿಂದ ದೀಕ್ಷೆ ಪಡೆದು ಪ್ರತೀವರ್ಷ ವಾರ್ಷಿಕ ಜೋಳಿಗೆಗೆ ಒಂದರಂತೆ ಕಾಣಿಕೆ ಸಲ್ಲಿಸುತ್ತಾರೆ. ಮಠಕ್ಕೆ ದೀಕ್ಷಾ ಕಾಣಿಕೆ, ಗುರು ಕಾಣಿಕೆ, ವಿವಾಹ ಕಾಣಿಕೆಯನ್ನು ನೀಡುತ್ತಾರೆ. ವಾಸ್ತವವಾಗಿ ಇವರು ಭೈರವನ ಭಕ್ತರು ಅಥವಾ ಆರಾಧಕರಾಗಿದ್ದಾರೆ. ಭೈರವನ ಸನ್ನಿಧಿಯಲ್ಲಿ ಸಮುದಾಯದ ಪ್ರತಿಯೊಬ್ಬ ಪುರುಷನೂ ದೀಕ್ಷೆ ಪಡೆಯುತ್ತಾನೆ.

ಚಿತ್ರದುರ್ಗ, ಬಳ್ಳಾರಿ ಹಾಗೂ ದಾವಣಗೆರೆ ಪ್ರದೇಶದ ಪ್ರತಿಯೊಂದು ನೆಲೆಗಳಲ್ಲಿ ನೆಲೆಸಿರುವ ಹಂಡಿಜೋಗಿಗಳು ಮೊಳಕಾಲ್ಮೂರಿನ ನುಂಕೆಮಲೆ ಸಿದ್ಧೇಶ್ವರ ಮಠದಲ್ಲಿ ದೀಕ್ಷೆ ಪಡೆಯುತ್ತಾರೆ. ಜೊತೆಗೆ ಈ ಮಠದ ಶಿಷ್ಯರಾಗಿದ್ದಾರೆ. ಇಲ್ಲಿನ ನುಂಕೆಮಲೆ ಸಿದ್ಧೇಶ್ವರನನ್ನು ಭೈರವ, ಕಾಲ ಭೈರವ ಎಂದು ಇವರು ಕರೆಯುತ್ತಾರೆ. 'ಕಾಲ ಭೈರವ' ಇಡೀ ಸಮುದಾಯದ ಆರಾಧ್ಯ ದೈವವಾಗಿದ್ದಾನೆ. ದೀಕ್ಷೆ ಪಡೆದ ಸಮುದಾಯದ ಪ್ರತಿಯೊಬ್ಬ ಪುರುಷನೂ ಸಹ ಪ್ರತಿನಿತ್ಯ ಊಟಕ್ಕೂ ಮೊದಲು ಭೈರವನನ್ನು ಮನದಲ್ಲಿ ನೆನೆದು ಸಿಂಗನಾದವನ್ನು ಊದುವುದು ಈ ಸಮುದಾಯದ ಸಾಂಪ್ರದಾಯಿಕ ಪದ್ಧತಿಯಾಗಿರುತ್ತದೆ. ಹಂಡಿಜೋಗಿಗಳು ತಾವು ನೆಲೆಸಿರುವ ನೆಲೆಯಲ್ಲಿ ಭೈರವನಿಗೆ ಎಲ್ಲೂ ಸಹ ಗುಡಿಗಳನ್ನು (ದೇವಸ್ಥಾನ) ನಿರ್ಮಿಸಿಲ್ಲ. ಬದಲಾಗಿ ತಾವು ನೆಲೆಸಿರುವ ನೆಲೆಯ (ಕಾಲೋನಿಯ) ಮಧ್ಯದಲ್ಲಿ ಒಂದು ದೊಡ್ಡ ಕಲ್ಲಿನ ರಾಶಿ ಹಾಕಿ ಅದರಲ್ಲಿ 'ತ್ರಿಶೂಲವನ್ನಿರಿಸಿ' ಪೂಜಿಸುತ್ತಿರುವುದನ್ನು ಕಾಣಬಹುದಾಗಿದೆ. ಇವರು ಭೈರವನನ್ನು ತ್ರಿಶೂಲ ಸ್ವರೂಪಿಯಾಗಿ ಪ್ರತಿಷ್ಠಾಪಿಸಿ ಪೂಜೆ ಸಲ್ಲಿಸುತ್ತಿರುವುದನ್ನು ಗುರುತಿಸಬಹುದಾಗಿದೆ. ತ್ರಿಶೂಲ ಭೈರವನ ಸಂಕೇತ. ಅದುವೇ ಭೈರವ ಸ್ವರೂಪಿ ಎಂದು ಸಮುದಾಯದಲ್ಲಿ ವಿವರಿಸುತ್ತಾರೆ.

#### ಕಾಲ ಭೈರವ (ತ್ರಿಶೂಲ)

ಕಾಲ ಭೈರವ ಹಂಡಿಜೋಗಿಗಳ ಪ್ರಧಾನ ದೈವವಾಗಿರುತ್ತದೆ. ಇದು ಇಡೀ ಸಮುದಾಯದ ಆರಾಧ್ಯ ದೈವ. ಇದರ ಜೊತೆಗೆ ಇನ್ನೂ ಅನೇಕ ಸ್ಥಳೀಯ ಪ್ರಾದೇಶಿಕ ದೈವಗಳನ್ನು ಹಂಡಿಜೋಗಿಗಳು ಪೂಜಿಸುತ್ತಿರುವುದನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ,

ನುಂಕೆಮಲೆ ಸಿದ್ದೇಶ್ವರ (ಮೊಳಕಾಲ್ಮುರು)

ವದ್ದೀಕೆರೆ ಸಿದ್ದಪ್ಪ (ಹಿರಿಯೂರು)

ಹುಲಿಗಿಯ ಹುಲಿಗೆಮ್ಮ (ಹುಲಿಗಿ)

ಗಾಣಾಗಟ್ಟೆ ಮಾಯಮ್ಮ (ಗಾಣಗಟ್ಟೆ)

ಸವದತ್ತಿ ಯಲ್ಲಮ್ಮ (ಸವದತ್ತಿ)

ಗುಂಡು ಭರಮಪ್ಪ

ಅಂಗಳ ಭರಮಪ್ಪ

ಎಣ್ಣೆ ತಾಯಿ

ಮೂಸಂಡಿಸಿದ್ಧ

ಹುಲಿಮಾನಪ್ಪ

ಕುಪ್ಪಿನಕೇರಿ ಆಂಜನೇಯ

ಮೇಸಾಯಿ

ತುಕ್ಕಾಯಿ

ಇತ್ಯಾದಿ ದೈವಗಳನ್ನು ಹಂಡಿಜೋಗಿಗಳು ತಮ್ಮ ಮನೆ ದೈವಗಳಾಗಿ ಪೂಜಿಸುತ್ತಿರುವುದನ್ನು ಕಾಣಬಹುದಾಗಿದೆ. ಹಂಡಿಜೋಗಿಗಳು ಪೂಜಿಸುವ ಮೇಲಿನ ಎಲ್ಲಾ ದೈವಗಳೂ ಸಹ ಕರ್ನಾಟಕದಲ್ಲಿನ ಇತರೇ ಸಮುದಾಯದವರು ಪೂಜಿಸುವ ದೈವಗಳಾಗಿರುವುದನ್ನು ಗುರುತಿಸಬಹುದಾಗಿದೆ. ಸಮುದಾಯದ ಮೇಲಿನ ಒಂದೊಂದು ದೈವದ ಆಚರಣೆಯನ್ನು ತುಂಬಾ ವಿಶಿಷ್ಟತೆಯಿಂದ ಆಚರಿಸುವುದನ್ನು ಕಾಣಬಹುದಾಗಿದೆ. ಸಮುದಾಯದಲ್ಲಿ ವಿವಾಹ ಸಂದರ್ಭಗಳಲ್ಲಿ ಹೆಚ್ಚು ಮನೆದೈವಗಳ ಆಚರಣೆ ಮಾಡುವುದನ್ನು ಗುರುತಿಸಬಹುದಾಗಿದೆ. ಈ ಆಚರಣೆಗಳ ವಿವರಗಳನ್ನು ವಿವಾಹ ಆಚರಣೆ ಸಂದರ್ಭದಲ್ಲಿ ವಿವರಿಸಲಾಗಿದೆ.

ಮಲೆಸಿದ್ದ

ಕೊಮ್ಮಸಿದ್ದ

ಗುಂಡು ಭರಮಪ್ಪ

ಅಂಗಳ ಭರಮಪ್ಪ

ಯಲ್ಲಮ್ಮನ ಆಚರಣೆ ಈ ಆಚರಣೆಗಳನ್ನು ಗಮನಿಸಬಹುದಾಗಿದೆ. ಜೊತೆಗೆ,

ಹಂಡಿಜೋಗಿಗಳು ನಾವು ಪರಮೇಶ್ವರ ಮಕ್ಕಳು ಅವನಿಂದಲೇ ನಮ್ಮ ಸಮುದಾಯದ ಕುಲ ಸಂಕೇತಗಳನ್ನು ಪಡೆಯಲಾಯಿತು. ಪರಮೇಶ್ವರನೇ ನಮ್ಮ ಸಂಸ್ಕೃತಿಯ ನಾಯಕ ಎಂದು

ಶಿವನನ್ನು ಆರಾಧಿಸುತ್ತಾರೆ. ಶಿವನೇ ಆದಿಜೋಗಿ, ಶಿವನಿಗೂ ಸಹ ಕುಂಡಲ ದೀಕ್ಷೆಯಾಗಿದೆ ಎಂದು ಸಮುದಾಯದ ಹಿರಿಯರು ವಿವರಿಸುತ್ತಾರೆ.

ಹಂಡಿಜೋಗಿಗಳು ನಾಥಪಂಥ ಸಮುದಾಯವಾದ್ದರಿಂದ ನಾಥಪಂಥದ ಪ್ರವರ್ತಕವಾದ ಮಚ್ಚೇಂದ್ರನಾಥ, ಗೋರಖನಾಥ (ಗೋರಖ)ರನ್ನು ಸಹ ಸಮುದಾಯದಲ್ಲಿ ಆರಾಧಿಸಲಾಗುತ್ತದೆ. ಗೋರಖನಾಥನ ಶಿಷ್ಯರೆಂದು ತಮ್ಮನ್ನು ಕರೆದುಕೊಳ್ಳುತ್ತಾರೆ. ಹಂಡಿಜೋಗಿ ಸಮುದಾಯದ ನಾಥಪಂಥ ಎಂಬುದಕ್ಕೆ ಗೋರಖನಾಥ. ಮಚ್ಚೇಂದ್ರನಾಥರ ಆರಾಧನೆಯನ್ನು ಗುರುತಿಸಬಹುದಾಗಿದೆ. ಜೊತೆಗೆ ಸಮುದಾಯದಲ್ಲಿ ನಾಥಪಂಥ ಸನ್ಯಾಸಿಗಳ ಹೆಸರಿಂದ ಅಂತ್ಯವಾಗುವ 'ನಾಥ' ಎಂಬ ವಾರ್ಗಿಕದಿಂದ ಅಂತ್ಯಗೊಳ್ಳುವ ಅನೇಕ ವ್ಯಕ್ತಿನಾಮಗಳನ್ನು ಸಮುದಾಯದಲ್ಲಿ ಕಾಣಬಹುದಾಗಿದೆ. ಅವುಗಳೆಂದರೆ

ಶಂಕರನಾಥ

ಸಾರಂಗನಾಥ

ಪವಾಡನಾಥ

ಸಿದ್ಧೂನಾಥ

ಡೊಂಗರನಾಥ

ಕೇರನಾಥ

ಶಾಂತನಾಥ

ಪ್ರೇಮನಾಥ

ಮಂಜುನಾಥ

ರಘುನಾಥ

ಆನಂದನಾಥ

ವಿಶ್ವನಾಥ

ರಾಮನಾಥ ಎಂದು ಮುಂತಾದ ಹೆಸರುಗಳನ್ನು ಹೆಸರಿಸಬಹುದಾಗಿದೆ.

ಹಂಡಿಜೋಗಿಗಳು ತಮ್ಮ ಸಮುದಾಯದ ಸಾಂಸ್ಕೃತಿಕ ಆಚರಣೆಗಳಲ್ಲಿ ಕಡ್ಡಾಯವಾಗಿ ನಾಥಪಂಥದ ಯೋಗಿ ಮಹಾಸಭಾವಾದ 'ಬಾರಾಹ್ ಪಂಥಗಳು' ಅನುಮತಿ ಪಡೆಯದೇ ಯಾವೊಂದು ಆಚರಣೆ ಮತ್ತು ನ್ಯಾಯ ಪಂಚಾಯಿತಿಗಳನ್ನು ಸಮುದಾಯದಲ್ಲಿ ಮಾಡುವುದಿಲ್ಲ. ಸಮುದಾಯದಲ್ಲಿನ ಅಂತಹ ಒಂದು ಹೇಳಿಕೆಯನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

ಆನ್‌ಮಾನ್ ಗುರುಗ್ಯಾನ್ ಬಾರಾಹ್‌ಪಂಥ ಸಿದ್ದಾಲ್, ಆದೇಶ, ಆದೇಶ್, ಆದೇಶ್ ಎಂದು ವಿವರಿಸುವುದು ಕಂಡುಬರುತ್ತದೆ. ಅಂತಹ ನಾಥಪಂಥದ ಬಾರಾಹ್ ಪಂಥಗಳ ಹೆಸರುಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ಬಾರಾಹ್‌ಪಂಥ್‌ಗಳು

ಸತ್ಯನಾಥಿ

ರಾಮನಾಥಿ

ಧರ್ಮನಾಥಿ

ಪಾವನಾಥಿ

ಪಾಗಲನಾಥಿ

ರಾವಲನಾಥಿ

ಕಪಲಾನಿ

ಗಂಗಾನಾಥಿ

ನಟೇಶ್ವರಿ

ಆಯಿಪಂಥಿ

ಭೈರಾಗಿ

ಮನ್ನಾಥಿ ಎಂಬುವಾಗಿವೆ. ನಾಥಮಠವನ್ನು ಜೋಗಿಗಳು ಸಿದ್ಧರ ಆಶ್ರಮ ಅಥವಾ ನಾಥಪಂಥದ ಯೋಗಿಗಳ ಆಶ್ರಮ ಎಂದು ಕರೆದಿದ್ದಾರೆ. ಸಮುದಾಯದಲ್ಲಿ ನಾಥಪಂಥವನ್ನು ಸಿದ್ಧಮತ, ಸಿದ್ಧವರ್ಗ ಎಂದು ಕರೆದಿದ್ದಾರೆ. ಭೈರವ ತಾಣಗಳಲ್ಲಿ ನಾಥಮಠಗಳನ್ನು ಕಾಣಬಹುದಾಗಿದೆ.

**ನುಂಕೆಮಲೆ ಸಿದ್ದೇಶ್ವರ ಮಠ**

ಇದು ಮೊಳಕಾಲ್ಮುರು ತಾಲೂಕಿನಲ್ಲಿದೆ. ಈ ಮಠವನ್ನು ಸ್ಥಳೀಯರು ನುಂಕಪ್ಪನ ಗುಡ್ಡ, ನುಂಕೆಮಲೆಬೆಟ್ಟ, ಲುಂಕೆಮಲೆ ಎಂದು ಅನೇಕ ಹೆಸರುಗಳಿಂದ ಕರೆಯುತ್ತಾರೆ. ಈ ಮಠವು ಉತ್ತರ ಭಾರತದ ಅಖಿಲ್ ಭಾರತ್ ವರ್ಷಿಯೇ ಅವಧೂತ್‌ಬೇಕ್ ಬಾರಾಹ್ ಪಂಥ್ ಯೋಗಿ ಮಹಾಸಭಾ, ಹರಿದ್ವಾರಕ್ಕೆ ಸೇರಿದ ನಾಥಪಂಥದ ಶಾಖಾಮಠವಾಗಿದೆ. ನಾಥಪಂಥದ ದಾಖಲೆಗಳಲ್ಲಿ ಈ ಮಠವನ್ನು ಲೋಕಿಮಠ, ಕಾಲಭೈರವಮಂದಿರ ಎಂದು ಕರೆದಿದ್ದಾರೆ. ಮಠದಲ್ಲಿನ ಪ್ರಾಚೀನ ದಾಖಲೆಗಳಲ್ಲಿ ಈ ಮಠವನ್ನು ದೇವರಬೆಟ್ಟ, ಹಿರಾರಬೆಟ್ಟ, ದೇವರಗುಡ್ಡ, ತ್ರಿಕೂಟಾಚಲ ಎಂದು ಕರೆದಿದ್ದಾರೆ. ಈ ಮೇಲಿನ ನಾಲ್ಕೂ ಹೆಸರುಗಳು ಸಹ ಮಠದ ಪ್ರಾಕೃತಿಕ ಲಕ್ಷಣವನ್ನು ವಿವರಿಸುವಂತಹವುಗಳೇ ಆಗಿವೆ. ಭೌಗೋಳಿಕವಾಗಿ ಈ ಮಠವು (ನುಂಕೆಮಲೆ) ಮೂರುಕಡೆ ಪ್ರಾಕೃತಿಕವಾಗಿ ದೊಡ್ಡ ದೊಡ್ಡ ಎತ್ತರವಾದ ಬೆಟ್ಟಗಳಿಂದ ಆವೃತವಾಗಿದೆ. ಈ ಕಾರಣದಿಂದಲೇ

ಇದನ್ನು ತ್ರಿಕೂಟಾಚಲ ಎಂದಿದ್ದಾರೆ. ಬೆಟ್ಟದಲ್ಲಿ ನಾಥಪಂಥದ ಪ್ರವರ್ತಕನಾದ ಮಚ್ಚೇಂದ್ರನ ಶಿಲ್ಪವನ್ನು ಕಾಣಬಹುದಾಗಿದೆ. ನಂತರ ನುಂಕೆಮಲೆಬೆಟ್ಟದಲ್ಲಿ ಅನೇಕ ದೈವಗಳಿವೆ. ಪ್ರಧಾನವಾಗಿ ಮೂರು ದೈವಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

೧. ಬೆಟ್ಟದಲ್ಲಿ ಸಿದ್ದಪ್ಪನೆಂದು ಖ್ಯಾತನಾಗಿರುವ ಭೈರವ. ಇದು ಪ್ರತ್ಯೇಕ ಒಂದು ಗುಡಿಯಲ್ಲಿದೆ. ಇದನ್ನು ಬೆಟ್ಟದ ಪಕ್ಕದಲ್ಲಿನ ದೇವರಹಟ್ಟಿಯ ಲಿಂಗಾಯತರು ಪೂಜಿಸುತ್ತಾರೆ.

೨. ಇನ್ನೊಂದು ಗುಡಿಯ ಪಕ್ಕದಲ್ಲಿ ನಾಥಮಠದಲ್ಲಿರುವ ಭೈರವನಗುಡಿ. ಇಲ್ಲಿನ ದೈವ ತ್ರಿಶೂಲರೂಪಿಯಾದ ಕಾಲಭೈರವ. ಇದನ್ನು ನಾಥರು ಪೂಜಿಸುತ್ತಾರೆ. ಹಂಡಿಜೋಗಿಗಳು ಈ ತ್ರಿಶೂಲರೂಪಿ ಕಾಲಭೈರವನ ಭಕ್ತರಾಗಿದ್ದಾರೆ. ಇವರು ತಮ್ಮ ನೆಲೆಗಳಲ್ಲಿ ಭೈರವ ಮಂದಿರವನ್ನು ಇದೇ ಮಾದರಿಯಲ್ಲಿ ಅಂದರೆ ಕಲ್ಲಿನ ರಾಶಿಯ ಮಧ್ಯದಲ್ಲಿ ತ್ರಿಶೂಲವನ್ನಿರಿಸಿ ಪೂಜಿಸುತ್ತಾರೆ.

೩. ಈ ದೈವದ ನಂತರ ಬೆಟ್ಟದಲ್ಲಿ ಕರ್ಪೂರದಮ್ಮ, ತುಪ್ಪದಮ್ಮ, ಹರಳಯ್ಯ ಹಾಗೂ ಮಲ್ಲಿಕಾರ್ಜುನನ ಗುಡಿಗಳಿವೆ.

ಈ ಮಠದ ಭಕ್ತರು ಚಿತ್ರದುರ್ಗ, ಬಳ್ಳಾರಿ, ದಾವಣಗೆರೆ ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ಈ ಮೂರು ಜಿಲ್ಲೆಗಳಲ್ಲಿನ ಎಲ್ಲಾ ಸಮುದಾಯದವರು ಈ ಮಠದ ಭಕ್ತರಾಗಿದ್ದರೂ, ಇಲ್ಲಿನ ಮ್ಯಾಸಬೇಡರು, ಗೊಲ್ಲರು, ಲಿಂಗಾಯತರು, ದಲಿತರು ಹಾಗೂ ಜೋಗಿಗಳು ಈ ಮಠದ ಪ್ರಧಾನ ಭಕ್ತರು ಹಾಗೂ ಮಠದ ಶಿಷ್ಯರಾಗಿದ್ದಾರೆ. ಈ ಮಠಕ್ಕೆ 'ಬಾರಾಹ್‌ಪಂಥ'ದ ಯೋಗಿ ಮಹಾಸಭಾದಿಂದ ಅಧಿಪತಿಗಳನ್ನು ನೇಮಿಸಲಾಗುತ್ತದೆ. ಸ್ಥಳೀಯರು ಇವರನ್ನು ಬಾವಾಜಿಗಳು ಎಂದು ಕರೆಯುತ್ತಾರೆ. ಪ್ರಸ್ತುತ ಮಂಗಲನಾಥರು ಈ ಮಠದ ೧೧ಳನೇ ಅಧಿಪತಿಯಾಗಿ ಕಾರ್ಯನಿರ್ವಹಿಸುತ್ತಿರುವುದನ್ನು ಕಾಣಬಹುದಾಗಿದೆ. ಇಡೀ ಮಠದ ಆಸ್ತಿಗೆ ಇವರೇ ಅಧಿಪತಿಗಳಾಗಿರುತ್ತಾರೆ.

**ಬಾವಾಜಿ**

ನಾಥ ಮಠದ ಅಧಿಪತಿಗಳಾಗಿರುವ ಬಾವಾಜಿಯು ಮಠದ ಆಸ್ತಿಯ ರಕ್ಷಣೆ ಹಾಗೂ ಶ್ರೀಮಠದ ಭಕ್ತರ ಸೇವಾ ಕಾರ್ಯದಲ್ಲಿ ನೆರವಾಗುತ್ತಾರೆ. ಇವರು ತಮ್ಮ ಮಠದ ಭಕ್ತರಿರುವ ಹಳ್ಳಿಗಳಿಗೆ ಸರ್ಕೀಟು ಹೋಗುತ್ತಾರೆ. ಇಂತಹ ಸಂದರ್ಭದಲ್ಲಿ ಮಠದ ಭಕ್ತರ ನ್ಯಾಯ ತೀರ್ಮಾನಗಳಲ್ಲಿ ಪಾಲ್ಗೊಂಡು ವ್ಯಾಜ್ಯಗಳನ್ನು ಬಗೆಹರಿಸುತ್ತಾರೆ. ಜೊತೆಗೆ ತಮ್ಮ ಮಠದ ಶಿಷ್ಯರಾದ (ಭಕ್ತರಾದ) ಕಾಪಾಲಿಕರು, ಮ್ಯಾಸಬೇಡರು ಹಾಗೂ ಹಂಡಿಜೋಗಿಗಳಿಗೆ ದೀಕ್ಷೆ ಕೊಡುತ್ತಾರೆ. ನಂತರ ಮಠದ ೧೨ ಶಾಖಾ ಮಠಗಳಿಗೆ (ಉಪಮಠಗಳಿಗೆ) ಸ್ಥಳೀಯ ಪ್ರದೇಶದಲ್ಲಿನ ಮುಖಂಡರನ್ನು ಆಯ್ಕೆಮಾಡಿ ನೇಮಿಸುವ ಕೆಲಸವನ್ನು ಮಾಡುತ್ತಾರೆ.

ಹಂಡಿಜೋಗಿಗಳು ಪ್ರಧಾನವಾಗಿ ನುಂಕೆಮಲೆ ಮಠದ ಖಾಯಂ ಶಿಷ್ಯರಾಗಿದ್ದಾರೆ. ಇಲ್ಲಿರುವ ಸಿದ್ದಪ್ಪನನ್ನು ಇವರು ಭೈರವ-ಕಾಲಭೈರವ ಎಂದು ಕರೆಯುತ್ತಾರೆ. ಜೊತೆಗೆ ಇವರು ಭೈರವನ

ಸನ್ನಿಧಿಯಲ್ಲಿ ಜೋಗಿದೀಕ್ಷೆಯನ್ನು ಪಡೆಯುತ್ತಾರೆ. ಆ ಮೂಲಕ ಇವರು ಮಠಕ್ಕೆ ಸಮುದಾಯದಲ್ಲಿ ದೀಕ್ಷೆ ಪಡೆದ ಪ್ರತಿಯೊಬ್ಬ ಪುರುಷನ ಜೋಳಿಗೆಗೆ ಒಂದೂವರೆ ರೂಗಳಂತೆ ವಾರ್ಷಿಕ ಕಾಣಿಕೆಯನ್ನು ನೀಡುತ್ತಾರೆ. ಇದರ ಜೊತೆಗೆ ದೀಕ್ಷಾ ಸಂದರ್ಭದಲ್ಲಿ ದೀಕ್ಷೆ ನೀಡಿದ ಬಾವಾಜಿಗೆ ದೀಕ್ಷಾ ಕಾಣಿಕೆಯನ್ನು ನೀಡುತ್ತಾರೆ. ನಂತರ ಇವರು ಸಮುದಾಯದ ಪ್ರಸಿದ್ಧವಾದ ಆಹಾರ ಸಂಬಂಧಿ ಆಚರಣೆಯಾದ ಸಿದ್ಧಭುಕ್ತಿ ಕಾಣಿಕೆಯಾಗಿ ೧೦೧ ರೂ. ಗುರುಕಾಣಿಕೆಯನ್ನು ನೀಡಿ, ೫ ಸೋರೆ ಪಾತ್ರೆ ತುಂಬ ಮಾಂಸಹಾರ ತುಂಬಿಸಿ ಅದನ್ನು ನೀಡಿ ಗುರುಸೇವೆ ಮಾಡುತ್ತಾರೆ. ಸಮುದಾಯದಲ್ಲಿ ಮದುವೆ ಕಾಣಿಕೆಯನ್ನು ಮಠಕ್ಕೆ ನೀಡಲಾಗುತ್ತದೆ. ಹಂಡಿಜೋಗಿಗಳು ಮಠದ ಬಾವಾಜಿಗಳಿಂದ ಜೋಗಿದೀಕ್ಷೆ ಪಡೆದು ದೀಕ್ಷಾ ಕಾಣಿಕೆಯನ್ನು ನೀಡಿದ ನಂತರ ಮಠದ ಬಾವಾಜಿಯಿಂದ ಭಿಕ್ಷಾಟನೆಯ ಪ್ರಮಾಣಪತ್ರವನ್ನು ಪಡೆಯುತ್ತಾರೆ. ಅಂತಹ ಪ್ರಮಾಣ ಪತ್ರದ ಒಂದು ಮಾದರಿಯನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

### ಶ್ರೀ ಸಿದ್ದೇಶ್ವರ ಪ್ರಸನ್ನ

ಮೊಳಕಾಲ್ಮೂರು ತಾಲೂಕು ಹಾನಗಲ್ ಮುಜುರೆ ಶ್ರೀ ಆದಿಲುಂಕೆಮಲೆ ಕಾಲಭೈರವ ಸಿದ್ದೇಶ್ವರ ಮಠದ ಸಿದ್ದಸಿಂಹಾಸನದ..... (ಬಾವಾಜಿ ಹೆಸರು) ಇವರುಗಳ ಸನ್ನಿಧಾನದಿಂದ ಸಮಸ್ತ ಜನಗಳಿಗೆ ಸೂಚನ ಪತ್ರಿಕೆ ಏನೆಂದರೆ! ಸದರಿ ಮಠವು ಶ್ರೀ ಸುವರ್ಣ ಕದಳಿಯೋಗೇಶ್ವರ ಮಠ, ಮಂಗಳೂರು ಮಠಕ್ಕೆ ಒಳಪಟ್ಟಿರುತ್ತೆ, ಸದರಿ ನುಂಕೆಮಲೆ ಸಿದ್ದೇಶ್ವರ ಮಠಕ್ಕೆ ಜೋಗಿಗಳು ಯಾವತ್ತು ಭಿಕ್ಷಾಟನೆಗಾಗಿ ಹಳ್ಳಿಗಳ ಮೇಲೆ ಮತ್ತು ಪಟ್ಟಣಗಳ ಮೇಲೆ ಬರುವರು. ಈ ಹಂಡಿಜೋಗಿಗಳು ಯಾವತ್ತೂ ಪ್ರತೀವರ್ಷ ನಮ್ಮ ಲುಂಕೆಮಠಕ್ಕೆ ಗುರುಕಾಣಿಕೆಯನ್ನು ಒಪ್ಪಿಸುವವರು. ಮತ್ತು ಇವರುಗಳು ಯಾವ ಮಠದವರುಗಳೇ ಆಗಲಿ ಹಳ್ಳಿಗಳಲ್ಲಿ ಯಾರೂ ತಂಟೆ ತಕರಾರು ಮಾಡದಂತೆ ಶಕ್ತಾನುಸಾರ ಭಿಕ್ಷ ವಗೈರೆ ಕೊಟ್ಟು ಕಳುಹಿಸತಕ್ಕದ್ದು.

| | |
|---|---|
| ತಾರೀಖು | ಇಂತಿ ಆಶೀರ್ವಾದ |
| ಮೊಕ್ಕಂ | (ಸಹಿ) |
| ಜೋಗಿಯ ಹೆಸರು | ಮಠಾಧಿಪತಿ ಹೆಸರು |

ಚಿತ್ರದುರ್ಗ, ಬಳ್ಳಾರಿ ಹಾಗೂ ದಾವಣಗೆರೆ ಪ್ರದೇಶಗಳಲ್ಲಿ ನೆಲೆಸಿರುವ ಹಂಡಿಜೋಗಿ ಸಮುದಾಯದವರೆಲ್ಲರೂ ಸಹ ನುಂಕೆಮಲೆ ಮಠದ ಭಕ್ತರಾಗಿದ್ದು, ಇಲ್ಲಿನ ಮಲೆಸಿದ್ದನೇ, ಅಥವಾ ಕಾಲಭೈರವನೇ ಈ ಸಮುದಾಯದ ಆರಾಧ್ಯದೈವವಾಗಿದ್ದಾನೆ. ಸಮುದಾಯದಲ್ಲಿ ಕಳೆದ ಎರಡು-ಮೂರು ದಶಕದಿಂದೀಚೆಗೆ ಆರ್ಥಿಕತೆಯ ಕಾರಣದಿಂದಾಗಿ ದೀಕ್ಷಾ ಕಾರ್ಯಕ್ರಮವನ್ನು ಕುಟುಂಬಗಳಲ್ಲೇ ಮಾಡಿಕೊಳ್ಳುತ್ತಾರೆ. ಆದರೆ ದೀಕ್ಷಾ ಕಾಣಿಕೆಯನ್ನು ಶ್ರೀ ಮಠಕ್ಕೆ ನೀಡಿ ಬಾವಾಜಿಯಿಂದ ಭಿಕ್ಷಾಟನೆಯ ಪ್ರಮಾಣಪತ್ರವನ್ನು ಪಡೆಯುವ ಪದ್ದತಿ ಇಂದಿಗೂ ಸಮುದಾಯದಲ್ಲಿ ರೂಢಿಯಲ್ಲಿದೆ. ಬಾವಾಜಿಯ ಅನುಪಸ್ಥಾನದಲ್ಲಿ ದೀಕ್ಷೆ ಪಡೆಯುವ ಮಗುವಿನ (ಹುಡುಗ) ಅಣ್ಣ (ದಾದಾ) ಅಥವಾ ಚಿಕ್ಕಪ್ಪ

(ಅಪಾ) ಅಥವಾ ತಾತ (ತಾಳ್ದ, ಅಜ್ಜ–ಆಜಾ) ಗುರುವಿನ ಸ್ಥಾನದಲ್ಲಿ ನಿಂತು ದೀಕ್ಷಾ ಕಾರ್ಯವನ್ನು ನೆರವೇರಿಸಿಕೊಡುತ್ತಾನೆ. ನಂತರ ದೀಕ್ಷಾ ಕಾಣಿಕೆಯನ್ನು ತಪ್ಪದೇ ಮಠಕ್ಕೆ ನೀಡುವ ಪದ್ಧತಿ ಇಂದಿಗೂ ಸಮುದಾಯದಲ್ಲಿ ರೂಢಿಯಲ್ಲಿದೆ. ಪ್ರತೀವರ್ಷ ನುಂಕೆಮಲೆ ಜಾತ್ರೆ ನಡೆಯುತ್ತದೆ. ಇದು ಮೂರು ದಿನ ನಡೆಯುತ್ತದೆ. ಈ ಜಾತ್ರೆ ಮೊಳಕಾಲ್ಮುರು ಪರಿಸರದಲ್ಲಿ ನಡೆಯುವ ಪ್ರಸಿದ್ಧವಾದ ಜಾತ್ರೆಯಾಗಿದೆ. ಜಾತ್ರೆಯ ಮೊದಲನೇ ದಿನ ನುಂಕಪ್ಪನ ತೇರು, ಎರಡನೆಯದಿನ ತುಪ್ಪದಮ್ಮನಿಗೆ ಸಿಡಿ ನಡೆಯುತ್ತದೆ. ಮೂರನೇ ದಿನ ಸಿದ್ಧಭುಕ್ತಿ ಆಚರಣೆ ಇರುತ್ತದೆ.

ಇಡೀ ಜಾತ್ರೆಯಲ್ಲಿ ಮಠದ ಬಾವಾಜಿಯು ಭಾಗವಹಿಸಿರುತ್ತಾರೆ. ಸಿದ್ದಭುಕ್ತಿ ಆಚರಣೆ ನಾಥಮಠದಲ್ಲಿನ ತ್ರಿಶೂಲರೂಪಿ ಕಾಲಭೈರವನಿಗೆ ಸಂಬಂಧಿಸಿದ ಆಚರಣೆಯಾಗಿರುತ್ತದೆ.

ನುಂಕೆಮಲೆ ಮಠದ ಪರಿಸರದಲ್ಲಿನ ಅನೇಕ ಸ್ಥಳನಾಮಗಳ ಮೇಲೆ ಈ ಮಠದಲ್ಲಿನ ದೈವವಾದ ಭೈರವನ ಪ್ರಭಾವವಾಗಿರುವುದನ್ನು ಕಾಣಬಹುದಾಗಿದೆ. ಉದಾ. ಭೈರಾಪುರ, ಭೈರನಕಲ್. ಹಾಗೆಯೇ ಇಲ್ಲಿರುವ ಭೈರವವನನ್ನು ಹಂಡಿಜೋಗಿಗಳು 'ದೇವರು' ಎಂದು ಕರೆಯುತ್ತಾರೆ. 'ದೇವರು' ಹೆಸರಿನಿಂದ ಕೂಡಿದ ಅನೇಕ ಸ್ಥಳನಾಮಗಳನ್ನು ನುಂಕೆಮಲೆ ಪರಿಸರದಲ್ಲಿ ಕಾಣಬಹುದಾಗಿದೆ. ಬೆಟ್ಟದ ಪಕ್ಕದಲ್ಲಿಯೇ (ಸಮೀಪದಲ್ಲಿಯೇ) ದೇವರಹಟ್ಟಿ ಇದೆ. ಶ್ರೀಮಠದ ಇನ್ನೊಂದು ಹೆಸರೂ ಸಹ ಇದೇ ಆಗಿದೆ. (ದೇವರಗುಡ್ಡ). ಉದಾ. ದೇವರಹಳ್ಳಿ ಹಂಡಿಜೋಗಿಗಳು ನೆಲೆಸಿರುವ ಕೆಲವು ಹಳ್ಳಿಗಳ ಹೆಸರೂ ಸಹ ದೇವರು ಹೆಸರಿನಿಂದ ಕೂಡಿರುವುದನ್ನು ಗಮನಿಸಬಹುದಾಗಿದೆ. ದೇವರಹಳ್ಳಿ (ನಾಯಕನಹಟ್ಟಿ), ದೇವರಗೊಂಡನಹಳ್ಳಿ (ಹಡಗಲಿ).

ಈ ಮೇಲಿನ ಎರಡೂ ಸ್ಥಳಗಳಲ್ಲಿ ಹಂಡಿಜೋಗಿ ಸಮುದಾಯಗಳ ಸಂಖ್ಯೆ ಅಧಿಕವಾಗಿರುವುದನ್ನು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗುರುತಿಸಬಹುದಾಗಿದೆ.

ಜೊತೆಗೆ ಹಂಡಿಜೋಗಿಗಳು ನುಂಕೆಮಲೆ ಮಠದ ೧೨ ಶಾಖಾ ಮಠಗಳಲ್ಲಿನ ಭೈರನಿಗೂ ಸಹ ಭಕ್ತಿಯಿಂದ ನಡೆದುಕೊಳ್ಳುತ್ತಿರುವುದನ್ನು ಕಾಣಬಹುದಾಗಿದೆ. ಅಂತಹ ಶಾಖಾ ಮಠಗಳು ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ, ತುಮಕೂರು ಹಾಗೂ ಆಂಧ್ರದ ಅನಂತಪುರ ಜಿಲ್ಲೆಗಳಿರುವುದನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ,

ನುಂಕೆಮಲೆ ಮಠದ ೧೨ ಪ್ರಮುಖ ಶಾಖಾಮಠಗಳು ಮತ್ತು ಅವುಗಳ ಕೇಂದ್ರಸ್ಥಾನ.

೧. ಹೇಮಾವತಿ – (ಮಡಕಶಿರಾ)

೨. ಚದುರಗೊಳ – (ರಾಯದುರ್ಗ)

೩. ವೇಣುಕಲ್ಲುಗುಡ್ಡ – (ಹಿರಿಯೂರು)

೪. ಕಾವೇರಿಹಳ್ಳಿ – (ಹಿರಿಯೂರು

೫. ವದ್ದೀಕೆರೆ – (ಹಿರಿಯೂರು)

೬. ಹೊಳಲ್ಕೆರೆ – (ಹೊಳಲ್ಕೆರೆ)

೭. ಹುಲಿಗೊಂದಿ – (ಚಿತ್ರದುರ್ಗ)

೮. ಕಪ್ಪಗೆರೆ – (ಹೊಸದುರ್ಗ)

೯. ಬಾಗೂರು – (ಹೊಸದುರ್ಗ)

೧೦. ಕಣಕುಪ್ಪೆ – (ಜಗಳೂರು)

೧೧. ಕುಮತಿ (ಕುಮ್ತಿ) – (ಕೂಡ್ಲಿಗಿ)

೧೨. ಪಡಗಲಬಂಡೆ – (ಚಳ್ಳಕೆರೆ)

ಇವೆಲ್ಲವೂ ಸಹ ಭೈರವ ಸ್ಥಾನಗಳಾಗಿವೆ. ಇಲ್ಲೆಲ್ಲಾ ಹಂಡಿಜೋಗಿಗಳು ಕಂಡುಬರುತ್ತಾರೆ. ಇಲ್ಲಿರುವ ಭೈರವನನ್ನು ಜೋಗಿಗಳು ಆರಾಧಿಸುತ್ತಾರೆ.

ಇವುಗಳ ಜೊತೆಗೆ ಹಂಡಿಜೋಗಿಗಳು ಇನ್ನೂ ಕೆಲವು ನಾಥ ಮಠಗಳಿಗೆ ನಾವು ಶಿಷ್ಯರಾಗಿ ನಡೆದುಕೊಳ್ಳುತ್ತಿರುವುದನ್ನು ಗುರುತಿಸಬಹುದಾಗಿದೆ. ಅಂತಹ ಕೆಲವು ಪ್ರಧಾನ ಭೈರವ (ನಾಥ) ಮಠಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ. ಅವುಗಳೆಂದರೆ,

೧. ಸಿದ್ಧ ಮಚ್ಚೇಂದ್ರನಾಥ ದಾದಾಕ ಮಠ (ಇದು ಬೆಳಗಾವಿಯ ಖಾನಾಪುರ ತಾಲ್ಲೂಕಿನ ಡೊಂಗರಗಾಂವ್‌ನಲ್ಲಿದೆ)

೨. ಶ್ರೀ ಗುರುಗೋರಕ್ಷನಾಥ ಮಠ (ಕಿರುವಳೆಯಲ್ಲಿದೆ)

೩. ಜೋಗಿನಾಥ ಮಠ (ಸವದತ್ತಿಯ ಎಲ್ಲಮ್ಮನ ಗುಡ್ಡ)

೪. ಹಂಡಿಬಡಗನಾಥಮಠ (ಖಾನಾಪುರ)

೫. ಆದಿಚುಂಚನಗಿರಿ ಮಠ (ಮಂಡ್ಯ)

ಹೀಗೆ ಹಂಡಿಜೋಗಿಗಳು ಕಾಲಭೈರವನ ಆರಾಧಕರಾಗಿದ್ದು, ಕರ್ನಾಟಕದಲ್ಲಿನ ಅನೇಕ ಭೈರವ ತಾಣಗಳಲ್ಲಿನ ಭೈರವನ ಶಿಷ್ಯರಾಗಿರುವುದನ್ನು ಗುರುತಿಸಬಹುದಾಗಿದೆ.

### ೪.೫. ಹಬ್ಬಗಳು

ಸಮುದಾಯದ ಸಾಂಸ್ಕೃತಿಕ ಆಚರಣೆಗಳಲ್ಲಿ ಹಬ್ಬಗಳು ಬಹು ವಿಶಿಷ್ಟತೆಯಿಂದ ಕೂಡಿದ ಪ್ರಮುಖ ಆಚರಣೆಗಳಾಗಿರುವುದನ್ನು ಗುರುತಿಸಬಹುದಾಗಿದೆ. ಹಂಡಿಜೋಗಿಗಳು ಸಮುದಾಯದಲ್ಲಿ ತಮ್ಮ ತಮ್ಮ ಉಪ ಪಂಗಡಗಳಿಗೆ ಸೇರಿದ ಕುಲದೈವಗಳ ಹಬ್ಬಗಳನ್ನು ಆಚರಿಸುವುದು ಕಂಡುಬರುತ್ತದೆ. ಅಂತಹ ಕುಲದೈವಗಳ ಆಚರಣೆಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ಅಂಗಳ ಭರಮಪ್ಪನ ಆಚರಣೆ

ಗುಂಡು ಭರಮಪ್ಪನ ಆಚರಣೆ

ಯಲ್ಲಮ್ಮನ ಆಚರಣೆ

ಹುಲಿಗೆಮ್ಮದೇವಿಯ ಆಚರಣೆ

ಮಾಯಮ್ಮದೇವಿಯ ಆಚರಣೆ

ಕೊಲ್ಲಾರಮ್ಮದೇವಿಯ ಆಚರಣೆ

ಮಲೆಸಿದ್ದಪ್ಪನ ಆಚರಣೆ

ಪಿರಂಗಿ ಯಲ್ಲಮ್ಮನ ಆಚರಣೆ

ಹೀಗೆ ಸಮುದಾಯದಲ್ಲಿನ ಪ್ರತಿಯೊಂದು ಕುಟುಂಬಗಳೂ ಸಹ ತಮ್ಮ ಮನೆತನದ ಕುಲದೈವಗಳ ಹಬ್ಬಗಳನ್ನು ಮಾಡುವುದು ಕಂಡುಬರುತ್ತದೆ. ಮೇಲೆ ಹೆಸರಿಸಿದ ಸಮುದಾಯದ ಹೆಣ್ಣು ದೇವತೆಗಳಿಗೆ ಸಿಹಿ ಊಟದ ನೈವೇದ್ಯ ಮಾಡುವುದು ಕಂಡುಬರುತ್ತದೆ. ಇಡೀ ಸಮುದಾಯದ ಪ್ರಧಾನ ದೈವವಾದ ಮಲೆಸಿದ್ಧನಿಗೆ ಮಾತ್ರ ಮಾಂಸಹಾರದ ನೈವೇದ್ಯ ಇರುವುದು ಕಂಡುಬರುತ್ತದೆ. ಮೇಲಿನ ದೈವಗಳ ಆಚರಣೆಯನ್ನು ಕುಟುಂಬದಲ್ಲಿನ ವಿವಾಹ ಸಂದರ್ಭಗಳಲ್ಲಿ ಆ ದೈವದ ಬೆಳ್ಳಿ ಪ್ರತಿಮೆಯನ್ನು ಪ್ರತಿಷ್ಠಾಪಿಸಿ ಪೂಜೆ ಸಲ್ಲಿಸುವ ಪದ್ದತಿ ರೂಢಿಯಲ್ಲಿರುವುದನ್ನು ಗುರುತಿಸಬಹುದಾಗಿದೆ. ಮೂಲತಃ ಇವರು ಭೈರವನ ಭಕ್ತರಾಗಿದ್ದು, ಭೈರವ ದೈವದ ಜೊತೆಗೆ ಸ್ಥಳೀಯ ಪ್ರದೇಶದಲ್ಲಿನ ಇತರೇ ದೈವಗಳ ಆರಾಧನೆಯನ್ನು ಮಾಡುವುದು ಕಂಡುಬರುತ್ತದೆ. ಸಮುದಾಯದಲ್ಲಿ ವಿಶೇಷವಾಗಿ ಯಲ್ಲಮ್ಮ, ಹುಲಿಗೆಮ್ಮನನ್ನು ಕುಲದೈವವಾಗಿ ಹೊಂದಿದವರು ಹುಣ್ಣಿಮೆಯ ದಿನದಂದು ವಿಶೇಷ ಪೂಜೆ ಸಲ್ಲಿಸುವುದನ್ನು ಗುರುತಿಸಬಹುದಾಗಿದೆ. ಮೇಲಿನ ದೈವಗಳ ಆಚರಣೆಯ ವಿವರಗಳನ್ನು ಸಮುದಾಯದ ಸಾಂಸ್ಕೃತಿಕ ಆಚರಣೆಯಾದ ವಿವಾಹ ಆಚರಣೆಯಲ್ಲಿ ಸಮಗ್ರವಾಗಿ ವಿವರಿಸಲಾಗಿದೆ. ಇದರ ಜೊತೆಗೆ ಹಂಡಿಜೋಗಿಗಳು ಸ್ಥಳೀಯ ಪರಿಸರದಲ್ಲಿನ ಇತರೇ ಸಮುದಾಯದವರು ಆಚರಿಸುವ ಹಬ್ಬಗಳನ್ನು ಆಚರಣೆ ಮಾಡುವುದು ಕಂಡುಬರುತ್ತದೆ. ಅಂತಹ ಸ್ಥಳೀಯ ಪರಿಸರದಲ್ಲಿನ ಹಬ್ಬಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

ನಾಗರಪಂಚಮಿ

ದಸರಾ ಹಬ್ಬ (ಆಯುಧಪೂಜೆ)

ಗಣೇಶ ಚತುರ್ಥಿ (ಗಣೇಶ ಹಬ್ಬ)

ಜೋಕುಮಾರನ ಹಬ್ಬ

ದೀಪಾವಳಿ

ಗೌರಸಮುದ್ರ ಮಾರಮ್ಮನ ಹಬ್ಬ

ಶಿವರಾತ್ರಿ ಹಬ್ಬ

ಕೊಲ್ಲಾರಮ್ಮನ ಹಬ್ಬ

ಯುಗಾದಿ ಹಬ್ಬ

ಕಾರ ಹುಣ್ಣಿಮೆ

ಸಂಕ್ರಾಂತಿ ಹಬ್ಬ

ರಾಮನವಮಿ ಮೊದಲಾದ ಹಬ್ಬಗಳನ್ನು ಇತರೇ ಸ್ಥಳೀಯ ಸಮುದಾಯದವರಂತೆ ಆಚರಿಸುತ್ತಿರುವುದು ಕಂಡುಬರುತ್ತದೆ. ಇವರು ದಸರಾ ಮತ್ತು ಯುಗಾದಿ ಸಮಯದಲ್ಲಿ ತಮ್ಮ ಸಮುದಾಯಕ್ಕೆ ಸೇರಿದ ಹಿರಿಯರಿಗೆ ಅನ್ನ ನೀಡುವ ಹಬ್ಬ ಮತ್ತು ಕಾಲ ಭೈರವನ (ಯುಗಾದಿ) ಹಬ್ಬವನ್ನು ತುಂಬಾ ವಿಶಿಷ್ಟವಾಗಿ ಆಚರಿಸುವುದು ಕಂಡುಬರುತ್ತದೆ. ಜೊತೆಗೆ ಸಮುದಾಯದಲ್ಲಿ ಮೊಹರಂ ಆಚರಣೆಯನ್ನು ಮಾಡುವುದು ಕಂಡುಬರುತ್ತದೆ. ಸಮುದಾಯದಲ್ಲಿ ಮೂರು ವರ್ಷಗಳಿಗೊಮ್ಮೆ ಕೊಲ್ಲಾರಮ್ಮ ದೇವಿಯ ಹಬ್ಬವನ್ನು ಕೆಲವು ನೆಲೆಗಳಲ್ಲಿ (ಭಿಷ್ಣಹಳ್ಳಿ) ಆಚರಿಸುವುದು ಕಂಡುಬರುತ್ತದೆ. ಇದು ಹಂಡಿಜೋಗಿಗಳ ಕುಲದೈವಗಳಲ್ಲೊಂದಾಗಿದ್ದು, ಸಮುದಾಯದ ಎಲ್ಲಾ ಕುಟುಂಬದವರು ಕೂಡಿಕೊಂಡು ಈ ಹಬ್ಬವನ್ನು ಆಚರಿಸುವುದು ಕಂಡುಬರುತ್ತದೆ. ಈ ಹಬ್ಬದಲ್ಲಿ ದೇವಿಯ ಹೆಸರಿನಲ್ಲಿ ಸಮುದಾಯದವರು ಕುರಿ, ಕೋಳಿ, ಮೇಕೆ, ಟಗರು ಮೊದಲಾದ ಪ್ರಾಣಿಗಳನ್ನು ಕಡಿಯುವುದು ಕಂಡುಬರುತ್ತದೆ. ಸಮುದಾಯದಲ್ಲಿನ ಪ್ರಮುಖ ಹಬ್ಬವೆಂದರೆ ಕಾಲಭೈರವನ ಹಬ್ಬ ಮತ್ತು ಹಿರಿಯರ ಹಬ್ಬ. ಈ ಹಬ್ಬಗಳ ಆಚರಣಾ ವಿಧಾನವನ್ನು ಈ ಕೆಳಗಿನಂತೆ ವಿವರಿಸಬಹುದಾಗಿದೆ.

* ಹಿರಿಯರ ಹಬ್ಬ
* ಕಾಲಭೈರವನ ಹಬ್ಬ (ಮಲೆಸಿದ್ದಪ್ಪ)

**ಹಿರಿಯರ ಹಬ್ಬ**

ಸಮುದಾಯದಲ್ಲಿ ಹಬ್ಬಗಳ ಸಂದರ್ಭದಲ್ಲಿ ಇಡೀ ದಿನ ಹಾಗೂ ಇಡೀ ರಾತ್ರಿ ಹಾಡು, ಕತೆ, ನಾಟಕ, ನೃತ್ಯ ಮೊದಲಾದ ಕಾರ್ಯಕ್ರಮಗಳು ನಡೆಯುವುದನ್ನು ಗುರುತಿಸಬಹುದಾಗಿದೆ.

ಹಂಡಿಜೋಗಿ ಸಮುದಾಯದಲ್ಲಿನ ಪ್ರತಿಯೊಂದು ಕುಟುಂಬಗಳಲ್ಲಿಯೂ ಸಹ ತಮ್ಮ ಕುಟುಂಬದ ಹಿರಿಯರಿಗೆ (ಮರಣ ಹೊಂದಿದ ಪುರುಷ ಮತ್ತು ಮಹಿಳೆ) ಪ್ರತೀ ವರ್ಷ ದಸರಾ ಸಂದರ್ಭದಲ್ಲಿ ಪೂಜೆ ಸಲ್ಲಿಸುವ ಪದ್ಧತಿ ರೂಢಿಯಲ್ಲಿರುವುದನ್ನು ಗುರುತಿಸಬಹುದಾಗಿದೆ.

ಸಮುದಾಯದಲ್ಲಿ ಪ್ರತಿಯೊಂದು ಕುಟುಂಬದವರೂ ಸಹ ತಮ್ಮ ತಂದೆ ತಾಯಿ ಮರಣ ಹೊಂದಿದರೆ ಅವರ ಹೆಸರಿನಲ್ಲಿ ಬೆಳ್ಳಿಯಿಂದ (ಅಜ್ಜ-ಅಜ್ಜಿ) ಎರಡು (ಅಜ್ಜ-ಅಜ್ಜಿ) ವೀರತಾಳಿಗಳನ್ನು

ಮಾಡಿಸುವ ಪದ್ಧತಿ ಇದೆ. ಈ ವೀರತಾಳಿಗಳು ಸತ್ತವ್ಯಕ್ತಿಗಳ ಹೆಸರಿನಲ್ಲಿರುವುದರಿಂದ ಇವುಗಳನ್ನು ಪೂಜಿಸುವುದರೊಂದಿಗೆ ತಮ್ಮ ಕುಟುಂಬದ ಹಿರಿಯರಿಗೆ ಪೂಜೆ ಸಲ್ಲಿಸುವ ಪದ್ಧತಿ ಸಮುದಾಯದ ಕುಟುಂಬಗಳಲ್ಲಿ ರೂಢಿಯಲ್ಲಿರುವುದು ಕಂಡುಬರುತ್ತದೆ. ಈ ಪೂಜೆ ದಸರಾ ನವರಾತ್ರಿಯ ಸಂದರ್ಭದಲ್ಲಿ ಆಯುಧ ಪೂಜಾ ದಿನದಂದು ಮಾಡಲಾಗುತ್ತದೆ. ವೀರದಾಳಿಗಳ ಜೊತೆಗೆ ಸತ್ತ ವ್ಯಕ್ತಿಗಳ ಭಾವಚಿತ್ರಗಳನ್ನಿಟ್ಟು ಪೂಜೆ ಸಲ್ಲಿಸುವುದು ಸಹ ಕಂಡುಬರುತ್ತದೆ.

**ಪೂಜಾ ವಿಧಾನ**

ಸಮುದಾಯದಲ್ಲಿನ ಪ್ರತಿಯೊಂದು ಕುಟುಂಬದವರು ತಮ್ಮ ಇಡೀ ಮನೆಯನ್ನು ಸ್ವಚ್ಛಗೊಳಿಸಿ ಮನೆಯ ಅಂಗಳವನ್ನೆಲ್ಲಾ ಸಾರಿಸುತ್ತಾರೆ. ಜೊತೆಗೆ ಮನೆಯಲ್ಲಿನ ಎಲ್ಲಾ ಆಯುಧ ಉಪಕರಣಗಳು ಹಾಗೂ ಗೃಹ ಬಳಕೆಯ ವಸ್ತುಗಳನ್ನು ಸಹ ಸ್ವಚ್ಛಗೊಳಿಸುತ್ತಾರೆ. ಆಯುಧಪೂಜೆಯ ದಿನ ಸಂಜೆಯ ಹೊತ್ತಿಗೆ ಮನೆಯಲ್ಲಿ ಕರಿಕಂಬಳಿಯ ಗದ್ದುಗೆಯನ್ನು ಹಾಸಿ, ಅದರ ಮೇಲೆ ಅಕ್ಕಿಯನ್ನು ಹರಡಿ ಅಕ್ಕಿಯ ಮೇಲೆ ವೀಳ್ಯದೆಲೆಗಳನ್ನು ಇಡಲಾಗುತ್ತದೆ. ಎರಡು ವೀಳ್ಯದೆಲೆಗಳಲ್ಲಿ ಎರಡು ವೀರತಾಳಿಗಳನ್ನು ಇಡಲಾಗುತ್ತದೆ. ಅವುಗಳಿಗೆ ವಿಭೂತಿ, ಕುಂಕುಮದಿಂದ ಪೂಜೆ ಸಲ್ಲಿಸಿ ಹೂ ಮತ್ತು ಹೊಸ ಬಟ್ಟೆಗಳಿಂದ ಅಲಂಕರಿಸಲಾಗುತ್ತದೆ. ಈ ಸಮಯಕ್ಕೆ ಸಮುದಾಯದ ಕುಟುಂಬದಲ್ಲಿ ಒಂದು ಕೋಳಿಯನ್ನು ಬಲಿ ನೀಡಿ ಅದರಿಂದ ಮಾಂಸಾಹಾರವನ್ನು ತಯಾರಿಸಲಾಗುತ್ತದೆ. ಇದರ ಜೊತೆಗೆ ಅನ್ನ, ರೊಟ್ಟಿ, ವಿವಿಧ ಕಾಳು ಮತ್ತು ತರಕಾರಿಗಳಿಂದ ತಯಾರಿಸಿದ ಪಲ್ಯೆಗಳನ್ನು ನೈವೇದ್ಯಕ್ಕಾಗಿ ಸಿದ್ದಪಡಿಸಲಾಗಿರುತ್ತದೆ. ಹಿರಿಯರಿಗೆ ನೈವೇದ್ಯವಾಗಿ ಒಂದು ಕಬ್ಬಿಣದ ಕಟ್ಟಿಗೆಗೆ ಐದು ಕೋಳಿ ಮಾಂಸದ ತುಂಡುಗಳನ್ನು ಸಿಕ್ಕಿಸಿಕೊಂಡು ಗದ್ದುಗೆಯ ಮೇಲೆ ಇರಿಸಲಾಗಿರುತ್ತದೆ. ಸಮುದಾಯದಲ್ಲಿ ಇದನ್ನು 'ಶಿಕಾ' ಎಂದು ಕರೆಯುತ್ತಾರೆ. ಶಿಕಾದ ಜೊತೆಗೆ ಒಂದು ದೊಡ್ಡ ಪಾತ್ರೆ (ಪತ್ತರ್)ಯಲ್ಲಿ ಕೋಳಿಮಾಂಸದ ತುಂಡುಗಳು ಜೊತೆಗೆ, ಅನ್ನ ಹಾಗೂ ವಿವಿಧ ಪಲ್ಯೆಗಳನ್ನು ತುಂಬಿಸಿ ಹಿರಿಯರಿಗೆ ಈ ಆಹಾರದ ನೈವೇದ್ಯ ಮಾಡುವುದರೊಂದಿಗೆ ಪೂಜೆ ಸಲ್ಲಿಸುವ ಪದ್ಧತಿ ಕಂಡುಬರುತ್ತದೆ. ಇವುಗಳ ಜೊತೆಗೆ ಹಿರಿಯರ ಗದ್ದುಗೆಯ ಮೇಲೆ ಅವರು ಬಳಸುತ್ತಿದ್ದ ಕೆಲವು ವಸ್ತುಗಳನ್ನಿರಿಸಿ ಪೂಜೆ ಸಲ್ಲಿಸುವ ಪದ್ಧತಿ ಕಂಡುಬರುತ್ತದೆ. ಅವುಗಳೆಂದರೆ, ಬೀಡಿ, ಸಿಗರೇಟು, ತಂಬಾಕು, ಎಲೆ, ಅಡಿಕೆ, ಭಂಗಿ, ಶೇಂದಿ (ಸಾರಾಯಿ) ಮೊದಲಾದವುಗಳನ್ನಿರಿಸಿ ಸತ್ತ ವ್ಯಕ್ತಿಗಳ ಆತ್ಮಕ್ಕೆ ಶಾಂತಿ ದೊರಕಲಿ ಎಂದು ಬೇಡಿಕೊಳ್ಳುತ್ತಾರೆ. ಇದರ ಜೊತೆಗೆ ಸಮುದಾಯದ ಕುಲ ಸಂಕೇತಗಳಾದ ಕಿನ್ನೂರಿ, ಜೋಳಿಗೆ, ಬೆತ್ತ (ನಾಗ ಬೆತ್ತ), ಸಿಂಗನಾದ, ಹಂಡೆ (ಕಪಾಲಬುಟ್ಟಿ) (ಭಿಕ್ಷಾಪಾತ್ರೆ), ತ್ರಿಶೂಲ, ವೇಷಭೂಷಣಗಳು ಮೊದಲಾದವುಗಳನ್ನಿರಿಸಿ ಅವುಗಳಿಗೆ ಪೂಜೆ ಸಲ್ಲಿಸುವ ಪದ್ಧತಿ ಕಂಡುಬರುತ್ತದೆ. ಈ ಸಂದರ್ಭದಲ್ಲಿ ಗೃಹಬಳಕೆಯ ವಸ್ತುಗಳಾದ ಕೊಡಲಿ, ಒನಕೆ, ಕುಡುಗೋಲು, ಮಚ್ಚು, ಈಳಿಗೆಮಣೆ, ಬಾಚಿ, ಭರ್ಚಿ, ಈಟಿ ಮೊದಲಾದ ಕೆಲವು ಉಪಕರಣಗಳನ್ನಿರಿಸಿ ಅವುಗಳಿಗೆ ಪೂಜೆ ಸಲ್ಲಿಸಲಾಗುತ್ತದೆ. ಇವುಗಳ ಜೊತೆಗೆ ಹಂಡಿಜೋಗಿಗಳು ತಾವು ಕೃಷಿ ಭೂಮಿಯಲ್ಲಿ ಬೆಳೆದಿರುವ ಕೆಲವು ಧಾನ್ಯಗಳ ತೆನೆಗಳನ್ನಿರಿಸಿ ಹಿರಿಯರಿಗೆ ವಿಶೇಷವಾಗಿ ಪೂಜೆ ಸಲ್ಲಿಸುವುದನ್ನು

ಗುರುತಿಸಬಹುದಾಗಿದೆ. ಧಾನ್ಯ ತೆನೆಗಳಾದ ಜೋಳದ ತೆನೆ, ರಾಗಿತೆನೆ, ಸಜ್ಜೆ ತೆನೆ, ಭತ್ತದ ತೆನೆ, ಗೋಧಿ ತೆನೆ, ಮೆಕ್ಕೆಜೋಳದ ತೆನೆ, ಸೂರ್ಯಕಾಂತಿ ತೆನೆ ಹೀಗೆ ಮೊದಲಾದ ಧಾನ್ಯಗಳ ತೆನೆಗಳನ್ನಿರಿಸಿ ಹಿರಿಯರಿಗೆ ಪೂಜೆ ಸಲ್ಲಿಸುವುದು ಕಂಡುಬರುತ್ತದೆ.

**೪.೬. ಸಮುದಾಯದಲ್ಲಿನ ವಿಧಿ-ನಿಷೇಧಗಳು**

ಹಂಡಿಜೋಗಿಗಳಲ್ಲಿ ತಮ್ಮ ಸಮುದಾಯದ ಮೂಲವೃತ್ತಿಯ ಆಚರಣೆಗೆ ಸಂಬಂಧಿಸಿದಂತೆ ಅನೇಕ ನಂಬಿಕೆ ಸಂಪ್ರದಾಯಗಳಿವೆ. ಮುಖ್ಯವಾಗಿ ಸಮುದಾಯದ ಹಿರಿಯರ ಸಮ್ಮುಖದಲ್ಲಿ ತಮ್ಮ ಕುಲಗುರು(ಶಾಖಾಮಠ)ವಿನ ನೇತೃತ್ವದಲ್ಲಿ ದೀಕ್ಷೆಯನ್ನು ಪಡೆದ ಪುರುಷರು ಮಾತ್ರ ವೃತ್ತಿಯ ಆಚರಣೆಯಲ್ಲಿ ತೊಡಗುತ್ತಾರೆ.

* ಹುಡುಗನಿಗೆ ದೀಕ್ಷೆಯ ದಿನದಂದೇ ಸಮುದಾಯದ ವೃತ್ತಿಯ ಆಚರಣೆಯನ್ನು ಕಲಿಸಲಾಗುತ್ತದೆ.
* ಹಂಡಿಜೋಗಿಗಳು ತಮ್ಮ ಸಮುದಾಯದ ಕುಲ ಸಂಕೇತಗಳಾದ ಜೋಳಿಗೆ, ಹಂಡೆ ಹಾಗೂ ಕಿನ್ನರಿಯನ್ನು ಹಿಡಿದು ಸಕಲ ಕುಲಕೋಟಿಯನ್ನು ರಕ್ಷಿಸುವಂತೆ ಶಿವನಲ್ಲಿ ಪ್ರಾರ್ಥನೆಯನ್ನು ಮಾಡಬೇಕು.
* ಜೋಗಿಗಳು ಹಾಡುಗಾರಿಕೆಯ ಸಂದರ್ಭದಲ್ಲಿ ಮಾತ್ರ ಕಿನ್ನರಿ, ಜೋಳಿಗೆ, ಹಂಡೆ ಹಾಗೂ ಜೋಗಿಯ ವೇಷಭೂಷಣಗಳನ್ನು ಧರಿಸುತ್ತಾರೆ. ಉಳಿದಂತೆ ಕಿನ್ನರಿಯನ್ನು ದೇವಸ್ಥಾನ ಅಥವಾ ಮನೆಯಲ್ಲಿರಿಸಿ ಪೂಜಿಸಲಾಗುತ್ತದೆ.
* ದಸರಾ ಹಬ್ಬದ ಸಂದರ್ಭದಲ್ಲಿ ಜೋಗಿಗಳ ಕುಲಸಂಕೇತಗಳಾದ ಕಿನ್ನರಿ, ಹಂಡೆ, ತ್ರಿಶೂಲ ಇವುಗಳಿಗೆ ಕೋಳಿಯನ್ನು ಬಲಿಕೊಟ್ಟು ವಿಶೇಷವಾಗಿ ಪೂಜಿಸಲಾಗುತ್ತದೆ.
* ವೃತ್ತಿಯ ಆಚರಣೆಯ ಸಂದರ್ಭದಲ್ಲಿ ಕಿವಿಯಲ್ಲಿ ಕರ್ಣಕುಂಡಲವನ್ನು ಹಾಗೂ ಕೊರಳಲ್ಲಿ ಸಿಂಗನಾದವನ್ನು ಧರಿಸಬೇಕು.
* ದೀಕ್ಷೆಯನ್ನು ಪಡೆದ ಪ್ರತಿಯೊಬ್ಬ ಪುರುಷನೂ ಸಹ ಪ್ರತಿನಿತ್ಯ ಭೈರವನನ್ನು ಮನದಲ್ಲಿ ನೆನೆದು ಸಿಂಗನಾದವನ್ನು ನುಡಿಸಬೇಕು.
* ಬಹಿಷ್ಠೆಯಾದ (ತಿಂಗಳ ಮುಟ್ಟು) ಹೆಂಗಸರು ಕಿನ್ನರಿಯನ್ನು ಮುಟ್ಟುವಂತಿಲ್ಲ.
* ವೃತ್ತಿಯ ಪ್ರದರ್ಶನದ ಸಂದರ್ಭದಲ್ಲಿ ಪಾದರಕ್ಷೆಗನ್ನು ಧರಿಸುವಂತಿಲ್ಲ.
* ವೃತ್ತಿಯ ಪ್ರದರ್ಶನಕ್ಕೂ ಮುನ್ನ ಊಟಮಾಡಬಾರದು.
* ಹಂಡಿಜೋಗಿಗಳು ಯಾವುದೇ ಸಂದರ್ಭದಲೂ ಸಹ ಕೋಪಗೊಂಡಾಗ ಶಾಪಹಾಕುವುದಿಲ್ಲ. ಜೋಗಿಯೊಬ್ಬ ಶಾಪ ನೀಡಿದರೆ ಸರ್ವನಾಶವಾಗುತ್ತಾರೆ ಎಂಬ ನಂಬಿಕೆ ಸಮುದಾಯದಲ್ಲಿ ರೂಢಿಯಲ್ಲಿದೆ.
* ಹಂಡಿಜೋಗಿಗಳಿಗೆ ಸಿಡಿಲು ಹೊಡೆಯುವುದಿಲ್ಲ. ಕಾರಣ ಅರ್ಜುನನ ಸಂತತಿಯವರಾದ

ಇವರು ಅವನನ್ನು ನೆನೆಯುತ್ತಾರೆ. ಇಂದಿಗೂ ಸಹ ಹಂಡಿಜೋಗಿಗಳಿಗೆ ಸಿಡಿಲು ಹೊಡೆದ ನಿದರ್ಶನಗಳೇ ಇಲ್ಲ.

* ಭಿಕ್ಷೆಗೆ ಹೊರಟ ಹಂಡಿಜೋಗಿಗಳನ್ನು ಎಲ್ಲಿಗೆ ಎಂದು ಕೇಳಬಾರದು. ಕೇಳಿದರೆ ಕೇಡಾಗುತ್ತದೆ ಎಂಬ ನಂಬಿಕೆ ಇದೆ.
* ಸಮುದಾಯದಲ್ಲಿ ಮಕ್ಕಳು, ವಿವಾಹವಾಗದ ಮಹಿಳೆಯರು, ಗರ್ಭಿಣಿ ಮಹಿಳೆಯರು ಹಾಗೂ ಬಾಣಂತಿಯರು ಶವಸಂಸ್ಕಾರದಲ್ಲಿ ಭಾಗವಹಿಸುವಂತಿಲ್ಲ.
* ಮನೆ ಮುಂದೆ ಕಾಗೆಗಳು ಗೋಳಿಟ್ಟರೆ ಸಮುದಾಯದಲ್ಲಿ ಯಾರಾದರೂ ಸಾಯುತ್ತಾರೆ ಎಂಬ ನಂಬಿಕೆ.
* ಮನೆಯ ಒಳಗೆ ಕಾಗೆ ಪ್ರವೇಶಿಸಬಾರದು. ಬಂದರೆ ಕುಟುಂಬಕ್ಕೆ ಕೇಡಾಗುತ್ತದೆ.
* ಮನೆಯ ಹೊಸ್ತಿಲ ಒಳಗೆ ನಿಂತು ಭಿಕ್ಷೆ ನೀಡಿದರೆ ಸ್ವೀಕರಿಸಬಾರದು.
* ಮನೆಯ ಹೊಸ್ತಿಲ ಮೇಲೆ ನಿಲ್ಲಬಾರದು. ಮತ್ತು ಸೀನಬಾರದು.
* ರಾತ್ರಿ ಸಮಯದಲ್ಲಿ ಉಪ್ಪು, ಉಣಿಸೆಹಣ್ಣನ್ನು ಕೊಡಬಾರದು.
* ಮನೆಯ ಮುಂಭಾಗದಲ್ಲಿ ಹಾರೆ, ಗುದ್ದಲಿ, ಸಲಿಕೆ ಮೊದಲಾದವುಗಳನ್ನು ಇರಿಸಬಾರದು.
* ಹಂದಿ ಮನೆಯ ಒಳಗೆ ಪ್ರವೇಶಿಸಬಾರದು.
* ಹಲ್ಲಿ ಮೈ ಮೇಲೆ ಬೀಳಬಾರದು.
* ಒಂಟಿ ಸೀನು ಬಂದರೆ ಅಶುಭ. ಎರಡು ಸೀನು ಬಂದರೆ ಶುಭ.
* ಗೂಬೆ ಮುಟ್ಟಿದರೆ ಕೇಡಾಗುತ್ತದೆ.
* ಭಿಕ್ಷೆಗೆ ಹೊರಟ ಸಂದರ್ಭದಲ್ಲಿ ಕಟ್ಟಿಗೆ ಹೊತ್ತವರು ಎದುರಾಗಬಾರದು. ಎದುರಾದರೆ ಭಿಕ್ಷೆ ಸಿಗುವುದಿಲ್ಲ ಎಂಬ ನಂಬಿಕೆ.
* ಸಮುದಾಯದಲ್ಲಿ ಶಿಕಾರಿಗೆ ಹೊರಟವರನ್ನು ಎಲ್ಲಿಗೆ ಎಂದು ಕೇಳಬಾರದು. ಕೇಳಿದರೆ ಶಿಕಾರಿ ಆಗುವುದಿಲ್ಲ ಎಂಬ ನಂಬಿಕೆ.
* ಸಮುದಾಯದಲ್ಲಿ ಶವಸಂಸ್ಕಾರ ಮುಗಿಸಿ ಮನೆಗೆ ಹಿಂತಿರುಗುವವರನ್ನು ಎದುರುಗೊಳ್ಳಬಾರದು. ಎದುರಾದರೆ ಕೇಡಾಗುತ್ತದೆ ಎಂಬ ನಂಬಿಕೆ.

ಹೀಗೆ ಹಂಡಿಜೋಗಿಗಳು ತಮ್ಮದೇ ಆದ ಕೆಲವು ವಿಧಿ–ನಿಷೇಧ ಹಾಗೂ ಕೆಲವು ರೂಢಿ–ಸಂಪ್ರದಾಯಗಳನ್ನು ಆಚರಿಸಿಕೊಂಡು ಬಂದಿರುವುದನ್ನು ಇಲ್ಲಿ ಗುರುತಿಸಬಹುದಾಗಿದೆ.



## ಅಧ್ಯಾಯ ಐದು

# ಹಂಡಿಜೋಗಿಗಳ ಭಾಷೆ, ಸ್ವರೂಪ ಮತ್ತು ವೈಶಿಷ್ಟ್ಯ

## ಅಧ್ಯಾಯ: ಐದು

# ಹಂಡಿಜೋಗಿ ಸಮುದಾಯದ ಭಾಷೆ, ಭಾಷೆಯ ಸ್ವರೂಪ ಮತ್ತು ವೈಶಿಷ್ಟ್ಯ

ಹಂಡಿಜೋಗಿಗಳು ಸಮುದಾಯದ ಕೌಟುಂಬಿಕ ಮತ್ತು ಸಾಮಾಜಿಕ ಸನ್ನಿವೇಶಗಳಲ್ಲಿ ಸಮುದಾಯದ ಮೂಲಭಾಷೆಯಲ್ಲಿ ವ್ಯವಹರಿಸುವುದು ಕಂಡುಬರುತ್ತದೆ. ಅಂತಹ ಸಮುದಾಯದ ಮೂಲ ಭಾಷಾರೂಪಗಳನ್ನು ಸಾಮಾಜಿಕ ಘಟಕಗಳಾದ ವಯಸ್ಸು, ಲಿಂಗ, ವೃತ್ತಿ, ಶಿಕ್ಷಣ ಮೊದಲಾದ ವಿಷಯಗಳ ಹಿನ್ನೆಲೆಯಲ್ಲಿ ಸಮುದಾಯದ ಭಾಷೆಯನ್ನು ಕುರಿತು ಈ ಅಧ್ಯಾಯದಲ್ಲಿ ವಿವರಿಸಲಾಗುವುದು. ಜೊತೆಗೆ ಹಂಡಿಜೋಗಿ ಸಮುದಾಯದ ಕೌಟುಂಬಿಕ ವಲಯದಲ್ಲಿ ಬಳಕೆಗೊಳ್ಳುವ ಭಾಷಿಕ ಘಟಕಗಳಾದ ಸಂಬಂಧವಾಚಕಗಳು, ಸಂಬೋಧನೆಗಳು, ಗಾದೆಗಳು, ಬೈಗುಳ ಸಂಖ್ಯಾವಾಚಿ ಮೊದಲಾದವುಗಳ ಹಿನ್ನೆಲೆಯಲ್ಲಿ ಸಮುದಾಯದ ಮೂಲಭಾಷೆಯ ಸ್ವರೂಪವನ್ನು ಕುರಿತು ಪ್ರಸ್ತುತ ಅಧ್ಯಾಯದಲ್ಲಿ ವಿವರಿಸಲಾಗುವುದು.

### ೫.೧. ಹಂಡಿಜೋಗಿಗಳಲ್ಲಿ ಬಳಕೆಯಲ್ಲಿರುವ ಸಂಬಂಧವಾಚಕ ಪದಗಳು

ಭಾಷಾವಿಜ್ಞಾನಿಗಳು ಬಂಧುಸೂಚಕಗಳನ್ನು ಭಾಷಿಕ ಘಟಕಗಳು ಎಂದು ಕರೆದಿದ್ದಾರೆ. ಸಾಮಾನ್ಯವಾಗಿ ಬಂಧುತ್ವವು ವಯಸ್ಸು, ಲಿಂಗ, ಜಾತಿ ಹಾಗೂ ಸಾಮಾಜಿಕ ವರ್ಗಗಳನ್ನು ಅವಲಂಬಿಸಿರುತ್ತದೆ. ಭಾಷಾ ಸಮುದಾಯದಲ್ಲಿ (ಕುಟುಂಬದಲ್ಲಿ) ಭಾಷಿಕರು ಹಲವು ಬಗೆಯ ಸಾಮಾಜಿಕ ಸಂಬಂಧಗಳಿಂದ ಹೆಣೆದುಕೊಂಡಿರುತ್ತದೆ. ಕುಟುಂಬದಲ್ಲಿನ ಪ್ರತಿಯೊಬ್ಬರೂ ಸಾಮಾಜಿಕವಾಗಿ ಒಂದೊಂದು ಬಂಧುತ್ವದ ಸ್ಥಾನವನ್ನು ಹೊಂದಿರುವುದನ್ನು ಗುರುತಿಸಬಹುದಾಗಿದೆ. ಕುಟುಂಬವು ತಂದೆ-ತಾಯಿ, ಅಣ್ಣ-ತಂಗಿ, ಅಕ್ಕ-ತಮ್ಮರನ್ನು ಒಳಗೊಂಡಿರುವ ಸಾಮಾಜಿಕ ಘಟಕವಾಗಿರುತ್ತದೆ. ಇಲ್ಲಿನ ಪ್ರತಿಯೊಬ್ಬ ಸದಸ್ಯರೂ ಸಹ ತಮ್ಮ ಕುಟುಂಬದ ಸದಸ್ಯರೊಡನೆ ಒಂದು ವಿಧದ ಸಾಮಾಜಿಕ ಬಂಧುತ್ವವನ್ನು ಹೊಂದಿರುತ್ತಾರೆ. ಮೂಲತಃ ಅಲೆಮಾರಿ ಬುಡಕಟ್ಟು ಸಮುದಾಯಕ್ಕೆ ಸೇರಿದ ಹಂಡಿಜೋಗಿಗಳು ಭಾಷಿಕವಾಗಿ ಕನ್ನಡೇತರ ಮನೆ ಮಾತುಳ್ಳ ಸಮುದಾಯವಾಗಿದೆ. ಈ ಸಮುದಾಯದಲ್ಲಿನ ಬಂಧುಸೂಚಕ ಪದಗಳು ಮರಾಠಿಯ ಭಾಷಾ ರೂಪಗಳಾಗಿರುವುದನ್ನು ಗುರುತಿಬಸಬಹುದಾಗಿದೆ. ಅಲೆಮಾರಿಗಳಾದ ಇವರು ಇಂದು ಕರ್ನಾಟಕದ

ಕನ್ನಡ ಮನೆಮಾತುಳ್ಳ ಭಾಷಿಕರ ಪ್ರದೇಶಗಳಲ್ಲಿ ನೆಲೆಸಿರುವುದರಿಂದ ಇವರು ತಮ್ಮ ಮೂಲಭಾಷೆಯಾದ ಮರಾಠಿಯ ಭಾಷಾರೂಪಗಳ ಜೊತೆಗೆ ಕನ್ನಡ ಭಾಷೆಯ ಬಂಧುಸೂಚಕಗಳನ್ನು ಬಳಸುತ್ತಿರುವುದನ್ನು ಕಾಣಬಹುದಾಗಿದೆ. ಕುಟುಂಬದಲ್ಲಿ ತಂದೆಯನ್ನು ಬಾ ಎಂದು ಮನೆ ಮಾತಿನಲ್ಲಿ ಕರೆದರೆ ಪ್ರಾದೇಶಿಕವಾಗಿ ಅಪ್ಪಾ, ಎಂದು ಕರೆಯುತ್ತಾರೆ. ತಾಯಿಯನ್ನು ಸಮುದಾಯದ ಭಾಷೆಯಲ್ಲಿ ಆಯೀ ಎಂದೂ ಪ್ರಾದೇಶಿಕವಾಗಿ ಅವ್ವಾ, ಅಮ್ಮಾ ಎಂದು ಕರೆಯುತ್ತಾರೆ. ಹೀಗೆ ಕುಟುಂಬದಲ್ಲಿ ಬಳಕೆಗೊಳ್ಳುತ್ತಿರುವ ಸಂಬಂಧವಾಚಕಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

**ಕನ್ನಡ – ಮರಾಠಿ (ಸಮುದಾಯದ ಮೂಲಭಾಷೆಯ ರೂಪಗಳು)**

ತಂದೆ – ಬಾ (ಅಪ್ಪಾ,)

ತಾಯಿ – ಆಯೀ (ಅಮ್ಮಾ, ಅವ್ವಾ)

ಅಣ್ಣ – ದಾದ (ಅಣ್ಣ)

ತಮ್ಮ – ಭಾವೂ (ತಮ್ಮಾ)

ತಂಗಿ – ಬೈನ್ (ತಂಗೀ)

ಅಕ್ಕ – ಆಕಾ (ಅಕ್ಕಾ)

ಮಗ – ನ್ಯೋಕ್ (ಮಗ)

ಮಗಳು – ನೇಕ್ (ಮಗಳು)

ಇವು ಹಂಡಿಜೋಗಿಗಳಲ್ಲಿ ಬಳಕೆಯಲ್ಲಿರುವ ಮೂಲ ಸಂಬಂಧವಾಚಕ ಪದಗಳಾಗಿರುತ್ತವೆ.

ನಂತರ ಕುಟುಂಬದಲ್ಲಿ ತಂದೆ–ತಾಯಿ, ಅಣ್ಣ–ತಮ್ಮ, ಅಕ್ಕ–ತಂಗಿ ಇವರುಗಳ ಮೂಲಕ ಬಂಧುತ್ವವನ್ನು ನಿರ್ಧರಿಸಿದರೆ ಅದನ್ನು ರಕ್ತಸಂಬಂಧಿಗಳ ಗುಂಪು ಎಂದು ಕರೆಯಲಾಗುತ್ತದೆ. ಇಲ್ಲಿ ತಂದೆಯ ಸಹೋದರರು, ಸಹೋದರಿಯರು ಹಾಗೂ ತಾಯಿಯ ಸಹೋದರರು ಮತ್ತು ಸಹೋದರಿಯರು ಒಳಗೊಳ್ಳುತ್ತಾರೆ. ಅಂತಹ ರಕ್ತಸಂಬಂಧದ ಗುಂಪುಗಳಲ್ಲಿ ಬರುವ ಬಂಧುತ್ವವು ವಿಶಾಲತೆಯಿಂದ (ವಿಸ್ತಾರ) ಕೂಡಿದುದಾಗಿರುತ್ತದೆ. ಹಂಡಿಜೋಗಿಗಳ ರಕ್ತಸಂಬಂಧಗಳಲ್ಲಿನ ಬಂಧುತ್ವವನ್ನು ಹೆಸರಿಸಲು ಬಳಕೆಯಲ್ಲಿರುವ ಬಂಧುಸೂಚಕ ಪದಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ಹಂಡಿಜೋಗಿಗಳಲ್ಲಿ ತಂದೆಯ ಅಣ್ಣನನ್ನು ಹಾಗೂ ತಾಯಿಯ ಅಕ್ಕನ ಗಂಡನನ್ನು ತರ್ಲ ಬಾ ಎಂದು ಕರೆಯುತ್ತಾರೆ. ಹೀಗೆಯೇ ತಾಯಿಯ ತಂಗಿಯ ಗಂಡನನ್ನು ಮತ್ತು ತಂದೆಯ ತಮ್ಮನನ್ನು 'ಆಪಾ' ಎಂದು ಕರೆಯುತ್ತಾರೆ.

ತಂದೆಯ ಅಣ್ಣ – ತರ್ಲಬಾ (ದೊಡ್ಡಪ್ಪ)

ತಂದೆಯ ತಮ್ಮ – ಆಪಾ (ಚಿಕ್ಕಪ್ಪ)

ನಂತರ ಸಮುದಾಯದಲ್ಲಿ ತಾಯಿಯ ಅಕ್ಕನನ್ನು ಹಾಗೂ ತಂದೆಯ ಅಣ್ಣನ ಹೆಂಡತಿಯನ್ನು ತರ್ಲಿ ಆಯೀ ಎಂದೂ ಜೊತೆಗೆ ತಾಯಿಯ ತಂಗಿಯನ್ನು ಹಾಗೂ ತಂದೆಯ ತಮ್ಮನ ಹೆಂಡತಿಯನ್ನು ಮಾವ್‌ಸಿ ಎಂದು ಕರೆಯುತ್ತಾರೆ.

ತಂದೆಯ ಅಣ್ಣನ ಹೆಂಡತಿ – ತರ್ಲಿ ಆಯೀ (ದೊಡ್ಡಮ್ಮ)

ತಂದೆಯ ತಮ್ಮನ ಹೆಂಡತಿ – ಮಾವ್‌ಸಿ (ಚಿಕ್ಕಮ್ಮ)

ಸಮುದಾಯದಲ್ಲಿ ಅಣ್ಣನ ಹೆಂಡತಿಯನ್ನು 'ವೋನಿ' (ಅತ್ತಿಗೆ) ಎಂದು ಸಂಬೋಧಿಸುತ್ತಾರೆ. ಹಾಗೆಯೇ ತಮ್ಮನ ಹೆಂಡತಿಯನ್ನು ಸೂನ್ (ಸೊಸೆ) ಎಂದು ಸಂಬೋಧಿಸುತ್ತಾರೆ.

ಒಟ್ಟಾರೆ ಹಂಡಿಜೋಗಿಗಳಲ್ಲಿ ಬಳಕೆಯಲ್ಲಿರುವ ಸಂಬಂಧವಾಚಕಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದಾಗಿದೆ. (ಗುರುತಿಸಬಹುದಾಗಿದೆ)

ತಂದೆ – ಬಾ

ತಾಯಿ – ಆಯೀ

ತಂದೆಯ ಅಣ್ಣ – ತರ್ಲಬಾ (ದೊಡ್ಡಪ್ಪ)

ತಂದೆಯ ತಮ್ಮ – ಆಪಾ (ಚಿಕ್ಕಪ್ಪ, ಸಣ್ಣಪ್ಪ)

ತಂದೆಯ ಅಣ್ಣನ ಹೆಂಡತಿ – ತರ್ಲಿ ಆಯೀ (ದೊಡ್ಡಮ್ಮ, ದೊಡ್ಡವ್ವ)

ತಂದೆಯ ತಮ್ಮನ ಹೆಂಡತಿ – ಮಾವ್‌ಸಿ (ಚಿಕ್ಕಮ್ಮ, ಸಣವ್ವ)

ಅಣ್ಣ – ದಾದಾ (ಅಣ್ಣಾ)

ದೊಡ್ಡ (ಹಿರಿಯ ಅಣ್ಣ) ಅಣ್ಣ – ತರ್ಲ ದಾದಾ (ದೊಡ್ಡ ಅಣ್ಣ)

ಕಿರಿಯ ಅಣ್ಣ – ದಾಕ್ಲ ದಾದಾ (ಸಣ್ಣ ಅಣ್ಣ)

ತಮ್ಮ – ಭಾವೂ (ತಮ್ಮ)

ಹಿರಿಯ ತಮ್ಮ – ತರ್ಲ ಭಾವೂ (ಹಿರಿ ತಮ್ಮ) ದೊಡ್ಡ ತಮ್ಮ

ಕಿರಿಯ ತಮ್ಮ – ದಾಕ್ಲ ಭಾವೂ (ಸಣ್ಣ ತಮ್ಮ)

ಅಕ್ಕ – ಆಕಾ (ಅಕ್ಕ)

ಹಿರಿಯವಳಿಗೆ – ತರ್ಲಿ ಆಕಾ (ದೊಡ್ಡ ಅಕ್ಕ)

ಕಿರಿಯ ಅಕ್ಕಳಿಗೆ – ದಾಕ್ಲಿ ಆಕಾ (ಸಣ್ಣ ಅಕ್ಕ)

ತಂಗಿ – ಭೈನ್ (ತಂಗಿ)

ಹಿರಿಯ ತಂಗಿಗೆ – ತರ್ಲಿ ಭೈನ್ (ದೊಡ್ಡ ತಂಗಿ)

ಕಿರಿಯ ತಂಗಿಗೆ – ದಾಕ್ಲಿ ಭೈನ್ (ಚಿಕ್ಕ ತಂಗಿ, ಸಣ್ಣ ತಂಗಿ)

ಮಗ – ನ್ಯೋಕ್ (ಮಗ)

ಹಿರಿಯ ಮಗ – ತರ್ಲ ನ್ಯೋಕ್ (ದೊಡ್ಮಗ, ಹಿರಿಮಗ)

ಕಿರಿಯ ಮಗ – ದಾಕ್ಲ ನ್ಯೋಕ್ (ಸಣ್ಮಗಾ, ಚಿಕ್ಕಮಗ)

ಮಗಳು – ನೇಕ್ (ಮಗ್ಳು)

ಹಿರಿ ಮಗಳು – ತರ್ಲಿನೇಕ್ (ದೊಡ್ಮಗಳು, ಹಿರಿಮಗಳು)

ಕಿರಿಮಗಳು – ದಾಕ್ಲಿನೇಕ್ (ಚಿಕ್ಕಮಗಳು, ಸಣ್ಮಗಳು)

ಈ ಮೇಲಿನ ಬಂಧುಸೂಚಕ ಪದಗಳನ್ನು ಗಮನಿಸಿದರೆ ಹಂಡಿಜೋಗಿಗಳಲ್ಲಿ ಮರಾಠಿಯ ಹಾಗೂ ಕನ್ನಡ ಬಂಧುಸೂಚಕಗಳೆರಡೂ ಬಳಕೆಯಲ್ಲಿರುವುದು ಕಂಡುಬರುತ್ತದೆ. ಹಂಡಿಜೋಗಿಗಳ ಮೂಲಭಾಷೆ ಮರಾಠಿಯಾಗಿರುವುದರಿಂದ ಸಮುದಾಯದ ಮೂಲಭಾಷಾರೂಪಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ. ನಂತರ ಸ್ಥಳೀಯವಾಗಿ ಕನ್ನಡ ಮನೆಮಾತುಳ್ಳವರೊಡನೆ ಹೊಂದಿರುವ ಸಾಮಾಜಿಕ, ಭಾಷಿಕ ಸಂಬಂಧದಿಂದಾಗಿ ಕನ್ನಡ ಬಂಧುಸೂಚಕಗಳು ಇವರಲ್ಲಿ ಸ್ಥಾನ ಪಡೆದುಕೊಂಡಿರುವುದನ್ನು ಗುರುತಿಸಬಹುದಾಗಿದೆ.

ಸಮುದಾಯದಲ್ಲಿ ಹಿರಿಯ ಪುರುಷರನ್ನು ತರ್ಲ ಎಂದೂ ಕಿರಿಯ ಪುರುಷರನ್ನು ದಾಕ್ಲಾ ಎಂದು ಸಂಬೋಧಿಸುತ್ತಿರುವುದನ್ನು ಗುರುತಿಸಬಹುದಾಗಿದೆ. ಸಮುದಾಯದಲ್ಲಿ ಸಾಮಾಜಿಕವಾಗಿ ಲಿಂಗ, ವಯಸ್ಸುನ್ನು ಸೂಚಿಸಲು ಕೆಲವು ಬಂಧುತ್ವಸೂಚಿ ಪದಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ. ಅವುಗಳೆಂದರೆ, ಲಿಂಗಾಧಾರಿತವಾಗಿ, ಪುರುಷ/ಗಂಡು, ಹುಡುಗ–ಪೋರ್, ಹುಡುಗಿ–ಪೋರಿ, ಗಂಡು–ಗಂಡ್ಗ, ಹೆಣ್ಣು–ಹೆಣ್ಗಿ, ಪುರುಷರನ್ನು (ಹಿರಿಯರಿಗೆ) ತರ್ಲ, ಕಿರಿಯರಿಗೆ ದಾಕ್ಲ ಮೊದಲಾದವು.

ನಂತರ ವಯಸ್ಸನ್ನು ಆಧಾರವಾಗಿಟ್ಟುಕೊಂಡು ಸಮುದಾಯದಲ್ಲಿನ ಪುರುಷರನ್ನು ಸೂಚಿಸಲು ಮಾತ್ರ ಮೇಲಿನ ಭಾಷಾ ರೂಪಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ. ಇವುಗಳು ಸ್ವತಂತ್ರವಾದ ಬಂಧುತ್ವದ ಸ್ಥಾನ ಹೊಂದಿರುವುದಿಲ್ಲ. ಮೂಲ ಬಂಧುತ್ವಸೂಚಕ ಪದದೊಡನೆ ಇವುಗಳ ಬಳಕೆ ಇರುವುದನ್ನು ಗುರುತಿಸಬಹುದಾಗಿದೆ.

ಉದಾ. 'ದಾದಾ' (ಎಂಬುದು ಮೂಲ ಬಂಧುಸೂಚಿ ಪದ) ತರ್ಲದಾದಾ (ದೊಡ್ಡ ಅಣ್ಣ) ಇಲ್ಲಿ ಮೂಲ ಬಂಧುಸೂಚಿ ಪದದ ಜೊತೆಗೆ ಬಳಕೆಯಲ್ಲಿರುವುದನ್ನು ಗುರುತಿಸಬಹುದಾಗಿದೆ. ಹಾಗಾಗಿಯೇ ಇವುಗಳು ಸ್ವತಂತ್ರವಾಗಿ ಬಳಕೆಯಲ್ಲಿಲ್ಲದಿರುವುದು ಕಂಡುಬರುತ್ತದೆ.

ಸಾಮಾಜಿಕವಾಗಿ ಸಮುದಾಯದಲ್ಲಿ ಮಹಿಳೆಯರನ್ನು ವಯಸ್ಸಿಗನುಗುಣವಾಗಿ ಸಂಬೋಧಿಸಲು ತರ್ಲೀ, ದಾಕ್ಲೀ ಎಂಬ ರೂಪಗಳನ್ನು ಬಳಕೆ ಮಾಡುತ್ತಿರುವುದನ್ನು ಕಾಣಬಹುದಾಗಿದೆ. ಇವುಗಳೂ ಸಹ ಸ್ವತಂತ್ರವಾಗಿ ಬಳಕೆಗೊಳ್ಳುವುದಿಲ್ಲ. ಮೂಲಬಂಧುಸೂಚಿ ಪದಗಳ ಜೊತೆಗೆ ಇವುಗಳು ಬಳಕೆಗೊಳ್ಳುತ್ತಿರುವುದನ್ನು ಕಾಣಬಹುದಾಗಿದೆ. ಉದಾ. ತರ್ಲೀ ಆಯೀ (ದೊಡ್ಡ ಅಮ್ಮ) ದಾಕ್ಲನೇಕ್ (ಸಣ್ಣಮಗಳು) ಇತ್ಯಾದಿಗಳು. ಒಟ್ಟಾರೆ ಸಮುದಾಯದಲ್ಲಿ ಮೂಲ ಬಂಧುಸೂಚಿ ಪದಗಳೊಡನೆ ಇವುಗಳ ಬಳಕೆ ಇರುವುದು ಕಂಡುಬರುತ್ತದೆ. ತರ್ಲಬಾ, ತರ್ಲೀ ಆಯೀ, ದಾಕ್ಲ ದಾದಾ, ದಾಕ್ಲನೇಕ್ ಮುಂತಾದ ರೂಪಗಳನ್ನು ಇಲ್ಲಿ ಹೆಸರಿಸಬಹುದಾಗಿದೆ.

ಹಂಡಿಜೋಗಿಗಳಲ್ಲಿ ವಿವಾಹ (ನಗೀನ್) ಸಂಬಂಧದಿಂದುಂಟಾಗುವ ಬಂಧುತ್ವವನ್ನು ಸೂಚಿಸಲು ಕನ್ನಡ ರೂಪಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ. ಎರಡು ಕುಟುಂಬಗಳಿಂದುಂಟಾಗುವ ವೈವಾಹಿಕ ಸಂಬಂಧದ ಬಂಧುತ್ವವನ್ನು ಹೆಸರಿಸಲು ಕನ್ನಡ ರೂಪಗಳನ್ನೇ ಬಳಸುತ್ತಿರುವುದು ಕಂಡುಬರುತ್ತದೆ. ಇವರಲ್ಲಿ ಬೀಗರು (ನೆಂಟರು) ಎಂದು ಪರಸ್ಪರ ವಿವಾಹ ಸಂಬಂಧಗಳಿಂದ ಎರಡೂ ಕುಟುಂಬದವರು ಸಂಬೋಧಿಸಿಕೊಳ್ಳುತ್ತಿರುವುದನ್ನು ಕಾಣಬಹುದಾಗಿದೆ. ಕನ್ನಡದ ಬಂಧುಸೂಚಿಗಳ ಜೊತೆಗೆ ಕೆಲವು ಮೂಲಭಾಷೆಯ ಬಂಧುತ್ವಸೂಚಿಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ. ಅಂತಹ ಬಂಧುತ್ವಸೂಚಿ ಪದಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ಗಂಡ – ದಾಲ್ನ (ಗಂಡ)

ಹೆಂಡತಿ – ಬಾಯಿಲ್ (ಹೆಂಡ್ತಿ)

ಅಳಿಯ – ಜಾವಾಯ್ (ಅಳಿಯ)

ಸೊಸೆ – ಸೂನ್ (ಸೊಸೆ)

ಗಂಡನ ತಂದೆ – ಮಾವ, ಮಾಮ

ಗಂಡನ ತಾಯಿ – ಅತ್ತೆ

ಗಂಡನ ತಮ್ಮ – ಮೈದುನ

ಗಂಡನ ಅಣ್ಣ – ಭಾವ

ಗಂಡನ ಅಕ್ಕ – ಚಿಗವ್ವ, ಸಣವ್ವ

ಗಂಡನ ತಂಗಿ – ನಾದಿನಿ (ನಾದ್ನಿ)

ಹೆಂಡತಿಯ ತಮ್ಮ – ಭಾಮೈದ

ಹೆಂಡತಿಯ ಅಣ್ಣ – ಮಾಮ, ಮಾವ

ಹೆಂಡತಿಯ ತಂಗಿ – ಸೊಸೆ, (ಸೂನ್)

ತಂದೆಯ ತಂದೆ – ಆಜಾ (ಅಜ್ಜ, ಅಜ್ಜಾ)/(ತಾತ)

ತಂದೆಯ ತಾಯಿ – ಆಜಿ (ಅಜ್ಜೀ, ಅಜ್ಜ)

ಮಗನ ಮಗ – ಮೊಮ್ಮಗ

ಮಗನ ಮಗಳು – ಮೊಮ್ಮಗಳು

ಜೊತೆಗೆ ಹಂಡಿಜೋಗಿ ಸಮುದಾಯದಲ್ಲಿ ತಾಯಿಯ ಅಣ್ಣ–ತಮ್ಮ ಹಾಗೂ ತಂದೆಯ – ಅಕ್ಕ–ತಂಗಿಯರ ಬಂಧುತ್ವವನ್ನು ಹೆಸರಿಸಲು ಕನ್ನಡ ಭಾಷಾ ರೂಪಗಳು ಬಳಕೆಗೊಳ್ಳುತ್ತಿರುವುದು ಕಂಡುಬರುತ್ತದೆ.

ತಾಯಿಯ ಅಣ್ಣ–ಮಾಮ, ಸೋದರಮಾವ, ಜೊತೆಗೆ ತಾಯಿಯ ತಮ್ಮನೂ ಸಹ ಸೋದರ್ಮಾವನಾಗುತ್ತಾನೆ. ಸಮುದಾಯದಲ್ಲಿ ತಂದೆಯ ಅಕ್ಕ–ತಂಗಿ ಇವರು ಸೋದರತ್ತೆಯ ಬಂಧುತ್ವವನ್ನು ಹೊಂದಿರುತ್ತಾರೆ.

ತಾಯಿಯ ಅಣ್ಣ/ತಮ್ಮ – ಸೋದರ್ಮಾಮ/ವ, ಮಾವ

ತಂದೆಯ ಅಕ್ಕ, ತಂಗಿ – ಸೋದ್ರತ್ತೆ, ಸೋದರತ್ತೆ, ಅತ್ತೆ

ತಂಗಿಯ/ಅಕ್ಕನ ಮಗಳು – ಸೋದರಸೊಸೆ, ಸೊಸೆ (ಸೂನ್)

ತಂಗಿಯ/ಅಕ್ಕನ ಮಗ – ಸೋದ್ರಳಿಯ, ಸೋದರ ಅಳಿಯ, ಅಳಿಯ (ಜಾವಾಯ್).

ಹೀಗೆ ಹಂಡಿಜೋಗಿ ಸಮುದಾಯದಲ್ಲಿಯೂ ಸಹ ಕನ್ನಡದ ಭಾಷಿಕ ಪರಿಸರದಲ್ಲಿರುವಂತೆ ಇವರಲ್ಲಿಯೂ ಸೋದರತ್ತೆ, ಸೋದರಮಾಮ ರೂಪಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ. ಸಮುದಾಯದಲ್ಲಿನ ಈ ಬಂಧುತ್ವವು ತಂದೆ–ತಾಯಿಯ ಮೂಲ ಬಂಧುತ್ವದಿಂದ ರೂಪುಗೊಂಡಿರುತ್ತದೆ.

ಸೋದ್ರತ್ತೆ – ತಂದೆಯ ಅಕ್ಕ ಅಥವಾ ತಂಗಿಯಾಗಿರುತ್ತಾಳೆ.

ಸೋದರಮಾವ – ತಾಯಿಯ ಅಣ್ಣ ಅಥವಾ ತಮ್ಮನಾಗಿರುತ್ತಾನೆ

ಸೋದರಸೊಸೆ – ಅಕ್ಕನ ಅಥವಾ ತಂಗಿಯ ಮಗಳಾಗಿರುತ್ತಾಳೆ.

ಸೋದರ ಅಳಿಯ – ಅಕ್ಕನ ಅಥವಾ ತಂಗಿಯ ಮಗನಾಗಿರುತ್ತಾನೆ

ಕುಟುಂಬದಲ್ಲಿ ಮೇಲೆ ಹೆಸರಿಸಿದ ಬಂಧುತ್ವಗಳಲ್ಲಿ ವೈವಾಹಿಕ ಸಂಬಂಧಗಳು ನಡೆಯುವುದು ಕಂಡುಬರುತ್ತದೆ.

ಹೀಗೆ ಹಂಡಿಜೋಗಿಗಳಲ್ಲಿ ಸಮುದಾಯದ ಮೂಲ ಭಾಷೆಯಾದ ಮರಾಠಿ ಹಾಗೂ ಪ್ರಾದೇಶಿಕ ಭಾಷೆಯಾದ ಕನ್ನಡದ ಭಾಷಾ ರೂಪಗಳು ಬಳಕೆಗೊಳ್ಳುತ್ತಿರುವುದನ್ನು ಗುರುತಿಸಬಹುದಾಗಿದೆ.

ಕುಟುಂಬದಲ್ಲಿನ ಬಂಧುತ್ವವನ್ನು ಸೂಚಿಸಲು ಕನ್ನಡ ಹಾಗೂ ಮರಾಠಿಯ ಭಾಷಿಕ ರೂಪಗಳು ಇಂದಿಗೂ ಕರ್ನಾಟಕದಲ್ಲಿನ ಎಲ್ಲಾ ಹಂಡಿಜೋಗಿ ಸಮುದಾಯದ ನೆಲೆಗಳಲ್ಲಿ ಬಳಕೆಗೊಳ್ಳುತ್ತಿರುವುದನ್ನು ಗುರುತಿಸಬಹುದಾಗಿದೆ.

**೫.೨. ಸಂಬೋಧನೆಗಳು**

ಸಂಬೋಧನೆಗಳು ಸಮುದಾಯವೊಂದರ ಭಾಷಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ವಿವರಗಳನ್ನು ಅರಿಯಲು ಪ್ರಮುಖ ಪಾತ್ರ ವಹಿಸುತ್ತವೆ. ಜೊತೆಗೆ ಸಂಬೋಧನೆಗಳು ಸಮುದಾಯದ ಭಾಷಿಕರ ಸಾಮಾಜಿಕ ಹಾಗೂ ಕೌಟುಂಬಿಕ ಸಂಬಂಧವನ್ನು ಕುರಿತು ವಿವರಿಸುತ್ತವೆ. ಸಂಬೋಧನೆಗಳು ಭಾಷಾ ಸಮುದಾಯದಲ್ಲಿ ಭಾಷಿಕರ ವಯಸ್ಸು, ವೃತ್ತಿ, ಅಧಿಕಾರ, ಶಿಕ್ಷಣ ಮತ್ತು ಲಿಂಗ ಮೊದಲಾದ ಸಾಮಾಜಿಕ ಅಂಶಗಳ ನೆಲೆಯಲ್ಲಿ ಬಳಕೆಗೊಳ್ಳುವುದನ್ನು ಗುರುತಿಸಬಹುದಾಗಿದೆ. ಹಂಡಿಜೋಗಿಗಳಲ್ಲಿ ಸಂಬೋಧನೆಗಳು ಕೌಟುಂಬಿಕ ಮತ್ತು ಸಾಮಾಜಿಕ ಸನ್ನಿವೇಶಗಳಲ್ಲಿ ಭಾಷಿಕರ ವಯಸ್ಸು ಮತ್ತು ಲಿಂಗ ಹಾಗೂ ಬಂಧುತ್ವದ ನೆಲೆಯಲ್ಲಿ ಬಳಕೆಗೊಳ್ಳುವುದು ಕಂಡುಬರುತ್ತದೆ. ಹಂಡಿಜೋಗಿಗಳಲ್ಲಿ ಬಳಕೆಯಲ್ಲಿರುವ ಕೆಲವು ಸಂಬಂಧವಾಚಕಗಳೇ ಕೌಟುಂಬಿಕ ಮತ್ತು ಸಾಮಾಜಿಕ ಸನ್ನಿವೇಶದಲ್ಲಿ ಸಂಬೋಧನೆಗಳಾಗಿ ಬಳಕೆಗೊಳ್ಳುವುದು ಕಂಡುಬರುತ್ತದೆ. ಸಮುದಾಯದಲ್ಲಿ ಪುರುಷ ಮತ್ತು ಮಹಿಳೆಯರಿಗೆ ಬಳಕೆಗೊಳ್ಳುವ ಸಂಬಂಧವಾಚಿ, ಸಂಬೋಧನೆಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ. ಸಮುದಾಯದ ಕೌಟುಂಬಿಕ ಹಾಗೂ ಸಾಮಾಜಿಕ ಪರಿಸರದಲ್ಲಿ ಕನ್ನಡ ಮತ್ತು ಮರಾಠಿಯ ಸಂಬೋಧನೆಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ. ಕುಟುಂಬದಲ್ಲಿ ಪುರುಷರನ್ನು ಈ ಕೆಳಗಿನ ಸಂಬೋಧನೆಗಳಿಂದ ವ್ಯವಹರಿಸುವುದು ಕಂಡುಬರುತ್ತದೆ.

ಕುಟುಂಬದಲ್ಲಿ ಮಕ್ಕಳು ತಂದೆಯನ್ನು 'ಬಾ', ಅಪ್ಪಾ, ಬಾರಪ್ಪಾ ಎಂದು ಸಂಬೋಧಿಸುತ್ತಾರೆ.

ಚಿಕ್ಕಪ್ಪಾ, (ಆಪಾ) ಸಣಪ್ಪಾ

ದೊಡ್ಡಪ್ಪಾ (ತರ್ಲಬಾ)

ಅಣ್ಣಾ (ದಾದಾ)

ಮಾಮಾ, ಮಾವಾ

ಅಜ್ಜಾ (ಆಜಾ) ತಾತಾ

ಹಂಡಿಜೋಗಿಗಳಲ್ಲಿ ಕುಟುಂಬ ಹಾಗೂ ಸಮುದಾಯದಲ್ಲಿ ಮಹಿಳೆಯರಿಗೆ ಈ ಕೆಳಗಿನ ಸಂಬೋಧನೆಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ.

ತಾಯಿಯನ್ನು ಆಯೀ (ಅವ್ವಾ, ಅಮ್ಮಾ) ಅಮ್ಮಾ ಬಾರಮ್ಮ, ಬಾರವ್ವಾ

ತಾಯಿಯನ್ನು ಅಮ್ಮಾ (ಆಯೀ) ಅವ್ವಾ

ಚಿಕ್ಕಮ್ಮ (ಮಾವ್‌ಸಿ) ಸಣವ್ವಾ

ದೊಡ್ಡಮ್ಮ (ತರ್ಲಿಆಯೀ) ದೊಡ್ಡವ್ವ

ಅತ್ತೆ

ಅಕ್ಕಾ (ಆಕ)

ಅತ್ತಿಗೆ (ವೋನೀ)

ಅಜ್ಜೀ (ಆಜೀ)

ಎಂಬ ಈ ಮೇಲಿನ ಭಾಷಾ ರೂಪಗಳು ಸಮುದಾಯದಲ್ಲಿ ಪುರುಷ ಮತ್ತು ಮಹಿಳೆಯರಿಗೆ ಬಳಕೆಗೊಳ್ಳುವ ಸಂಬೋಧನೆಗಳಾಗಿರುವುದನ್ನು ಗುರುತಿಸಬಹುದಾಗಿದೆ. ಹಂಡಿಜೋಗಿಗಳು ಕುಟುಂಬದಲ್ಲಿ ಪರಸ್ಪರ ಈ ಕೆಳಗಿನಂತೆ ಸಂಬೋಧಿಸುವುದನ್ನು ಗುರುತಿಸಬಹುದಾಗಿದೆ.

ಕುಟುಂಬದಲ್ಲಿ ಮಕ್ಕಳು ತಂದೆ ತಾಯಿ ಹಾಗೂ ಬಂಧುಗಳನ್ನು ಈ ಕೆಳಗಿನಂತೆ ಸಂಬೋಧಿಸುವುದು ಕಂಡುಬರುತ್ತದೆ.

ತಂದೆಗೆ – ಬಾ ಆರೇ (ಅಪ್ಪಾ ಬಾ)

ತಾಯಿಗೆ – ಆಯೀ ಆರೇ (ಅಮ್ಮ ಬಾ)

ದೊಡ್ಡಮ್ಮನಿಗೆ – ಏ ತರ್ಲಿ ಆಯೀಯೇ (ದೊಡ್ಡಮ್ಮ ಇಲ್ಲಿ ಬಾ)

ಚಿಕ್ಕಮ್ಮನಿಗೆ – ಏ ಆಯೀ ಮಾವ್‌ಸಿ (ಚಿಕ್ಕಮ್ಮ ಬಾ)

ಚಿಕ್ಕಪ್ಪನಿಗೆ – ಏ ಆರೇ ಆಪಾ (ಚಿಕ್ಕಪ್ಪಾ ಬಾ)

ದೊಡ್ಡಪ್ಪನಿಗೆ – ಏ ಆರೇ ತರ್ಲಬಾ (ದೊಡ್ಡಪ್ಪಾ ಬಾ)

ಅಣ್ಣನಿಗೆ – ದಾದಾಯೋರೇ (ಅಣ್ಣ ಬಾ)

ತಮ್ಮನಿಗೆ – ಭಾವೂಯೋರೇ (ತಮ್ಮ ಬಾ)

ಅಕ್ಕನಿಗೆ – ಏ ಆಕಾ (ಅಕ್ಕಾ ಬಾ)

ಅತ್ತೆಗೆ – ಏ ಅತ್ತೇ (ಅತ್ತೆ ಬಾ)

ತಂಗಿಗೆ – ಏ ಅಮ್ಮಾ (ಬಾರಮ್ಮಾ)

ಮಾವನಿಗೆ – ಏಮಾಮಾ (ಮಾಮ ಬಾ)

ಗಂಡನಿಗೆ – ಏಮಾಮಾ (ಮಾಮ ಬಾ)

ಹೆಂಡತಿಗೆ – ಏರೀ (ಏರೇ) ಏನೇ, ಬಾರೇ, ಜಾರೇ ಹೋಗೇ

ಮಗನಿಗೆ – ಯೋರೇ (ಬಾರಪ್ಪ)

ಮಗಳಿಗೆ – ಏಅಮ್ಮಾ (ಬಾರಮ್ಮ)

ಅಜ್ಜನಿಗೆ – ಏಆಜಾ (ಅಜ್ಜಾ ಬಾ)

ಅಜ್ಜಿಗೆ – ಏಆಯೀ ಆಜೀ (ಅಜ್ಜೀ ಬಾ)

ಎಂದು ಈ ಮೇಲಿನಂತೆ ಹಂಡಿಜೋಗಿಗಳು ಕೌಟುಂಬಿಕ ವಲಯದಲ್ಲಿ ಬಂಧುಗಳನ್ನು ಸಂಬೋಧಿಸುವುದು ಕಂಡುಬರುತ್ತದೆ. ಕುಟುಂಬದಲ್ಲಿ ಹೆಣ್ಣು ಮಕ್ಕಳನ್ನು ವಾತ್ಸಲ್ಯದಿಂದ ಏ ಅಮ್ಮಾ (ಬಾರಮ್ಮ) ಜಾಅಮ್ಮ (ಹೋಗಮ್ಮ) ಎಂದು ಸಂಬೋಧಿಸುವುದು ಕಂಡುಬರುತ್ತದೆ. ಇದರ ಜೊತೆಗೆ ಸಮುದಾಯದಲ್ಲಿ ಪುರುಷರನ್ನು ಸಮುದಾಯದ ವೃತ್ತಿಗಳ ಮೂಲಕ ಸಂಭೋಧಿಸುವ ಬಗೆಯನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ

ಗೌಡ, (ಗೌಡ್ರೇ), ಪಾಟೀಲ (ಪಟೇಲ್ರೇ), ಗೋಂಚಕಾರಾ (ಗೊಂಚ ಕಾರ್ರೇ), ದಳವಾಯಿ, ಗಣಾಚಾರಿ, ಶಿಂದೇಸೀ, ಡೋಕಾರೀ ಎಂಬ ಮೊದಲಾದ ವೃತ್ತಿವಾಚಿ ವಾರ್ಗಿಕಗಳನ್ನು ಸಂಬೋಧನಾ ರೂಪಗಳಾಗಿ ಸಮುದಾಯದಲ್ಲಿನ ಪುರುಷರಿಗೆ ಮಾತ್ರ ಈ ಬಗೆಯ ಸಂಬೋಧನೆಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ. ಇನ್ನು ಹಂಡಿಜೋಗಿಗಳು ಸಂಚಾರದ ಸಂದರ್ಭದಲ್ಲಿ ಇತರೇ ಸ್ಥಳೀಯ ಪ್ರದೇಶಗಳಿಗೆ ಕಲಾ ಪ್ರದರ್ಶನ ನೀಡಲು ಹೋದ ಸಂದರ್ಭದಲ್ಲಿ ಅಲ್ಲಿನ ಸ್ಥಳೀಯ ಪುರುಷ ಮತ್ತು ಮಹಿಳೆಯರಿಗೆ ಗೌರವಸೂಚಿ ಸಂಬೋಧನೆಗಳನ್ನು ಬಳಸುವುದು ಕಂಡುಬರುತ್ತದೆ.

ಹಂಡಿಜೋಗಿ ಸಮುದಾಯದ ವ್ಯಕ್ತಿ ಕಲಾಪ್ರದರ್ಶನ ಮುಗಿದ ನಂತರ ಸ್ಥಳೀಯ ಪ್ರದೇಶದಲ್ಲಿನ ಪುರುಷ ಹಾಗೂ ಮಹಿಳೆಯರಿಂದ ಹಣ, ಆಹಾರ ಹಾಗೂ ದವಸ ಧಾನ್ಯಗಳನ್ನು ಸ್ವೀಕರಿಸುವ ಸಂದರ್ಭದಲ್ಲಿ ಪುರುಷ ಮತ್ತು ಮಹಿಳೆಯರಿಗೆ ಈ ಕೆಳಗಿನ ಸಂಬೋಧನೆಗಳನ್ನು ಬಳಸುವುದು ಕಂಡುಬರುತ್ತದೆ.

ಮಹಿಳೆಯರಿಗೆ ಅಮ್ಮಾ, ಅವ್ವಾ, ಅಕ್ಕ, ತಾಯೀ, ಯಾರಿದೀರಮ್ಮ ಮನೇಲಿ, ತಾಯೀ ಭಿಕ್ಷಾ ನೀಡಿ ಎಂದು, ತಮಗಿಂತ ಕಿರಿಯ ಹಾಗೂ ಹಿರಿಯ ವಯಸ್ಸಿನ ಮಹಿಳೆಯರಿಗೆ ಒಂದೇ ಬಗೆಯ ಸಂಬೋಧನೆಗಳನ್ನು ಬಳಸುವುದು ಕಂಡುಬರುತ್ತದೆ. ಇನ್ನೂ ಕೆಲವು ಭಾಗಗಳಲ್ಲಿ ಪರಿಚಿತ ಕುಟುಂಬದವರಿಂದ ದವಸಧಾನ್ಯಗಳನ್ನು ಪಡೆಯುವ ಸಂದರ್ಭದಲ್ಲಿ ಈ ಕೆಳಗಿನ ಸಂಬೋಧನೆಗಳನ್ನು ಹಿರಿಯ ಮಹಿಳೆಯರಿಗೆ ಬಳಸುವುದು ಕಂಡುಬರುತ್ತದೆ.

ಏನಮ್ಮಾ ಗೌಡಸಾನಿ, ಗೊಂಚಕಾತಿ, ಭಿಕ್ಷಾ ನೀಡಿ ಅಮ್ಮಾ ಎಂದು ಸಂಬೋಧಿಸುವುದು ಕಂಡುಬರುತ್ತದೆ.

ಪುರುಷರಿಗೆ : ಹಂಡಿಜೋಗಿಗಳು ಇತರೇ ಸಮುದಾಯದ ಪುರುಷರಿಗೆ ಸಂಚಾರದ ಸಂದರ್ಭಗಳಲ್ಲಿ ಈ ಕೆಳಗಿನ ಭಾಷಾರೂಪಗಳ ಮೂಲಕ ಸಂಬೋಧಿಸುವುದು ಕಂಡುಬರುತ್ತದೆ. ಸ್ಥಳೀಯರಿಂದ

ದವಸ ಧಾನ್ಯಗಳನ್ನು ಸ್ವೀಕರಿಸುವ ಸಂದರ್ಭದಲ್ಲಿ ತಮ್ಮ ವಯಸ್ಸಿನ ಹಾಗೂ ತಮಗಿಂತ ಹಿರಿಯ ಪುರುಷರಿಗೆ ಈ ಕೆಳಗಿನ ಸಂಬೋಧನೆಗಳನ್ನು ಬಳಸುವುದು ಕಂಡುಬರುತ್ತದೆ.

ಅಣ್ಣಾ, ಗೌಡ್ರೇ, ಗೊಂಚಕಾರ್ರೇ, ಸ್ವಾಮಿ ಎಂಬ ಸಂಬೋಧನಾರೂಪಗಳನ್ನು ಬಳಕೆ ಮಾಡುವುದು ಕಂಡುಬರುತ್ತದೆ.

ಹೀಗೆ ಹಂಡಿಜೋಗಿ ಸಮುದಾಯದಲ್ಲಿ ಕನ್ನಡ ಹಾಗೂ ಮರಾಠಿ ಭಾಷಾ ರೂಪಗಳನ್ನು ಸಂಬೋಧನೆಯಲ್ಲಿ ಬಳಸುತ್ತಿರುವುದು ಕಂಡುಬರುತ್ತದೆ. ಹಂಡಿಜೋಗಿಗಳು ಸಮುದಾಯದಲ್ಲಿ ಕೌಟುಂಬಿಕ ಸನ್ನಿವೇಶದಲ್ಲಿ ಪರಸ್ಪರರನ್ನು ಸಂಬೋಧಿಸಲು ಸಮುದಾಯದ ಮೂಲ ಭಾಷೆಯಾದ ಮರಾಠಿಯ ಭಾಷಾ ರೂಪಗಳು ಬಳಕೆಯಲ್ಲಿರುವುದನ್ನು ಗುರುತಿಸಬಹುದಾಗಿದೆ. ಪ್ರಾದೇಶಿಕವಾಗಿ ಇತರೇ ಸಮುದಾಯದವರೊಡನೆ ವ್ಯವಹರಿಸುವಾಗ ಕನ್ನಡ ಭಾಷಾ ರೂಪಗಳನ್ನು ಸಂಬೋಧನೆಯಲ್ಲಿ ಬಳಸುವುದು ಕಂಡುಬರುತ್ತದೆ. ಹೀಗೆ ಹಂಡಿಜೋಗಿಗಳಲ್ಲಿ ಕೌಟುಂಬಿಕ, ಸಾಮಾಜಿಕ ಹಾಗೂ ಪ್ರಾದೇಶಿಕ ವಲಯಗಳಲ್ಲಿ ಕನ್ನಡ ಮತ್ತು ಮರಾಠಿ ಸಂಬೋಧನೆಗಳು ಬಳಕೆಯಲ್ಲಿರುವುದನ್ನು ಗುರುತಿಸಬಹುದಾಗಿದೆ.

### ೫.೩. ಸಂಖ್ಯಾವಾಚಿಗಳು

ಭಾಷಾ ವಿಜ್ಞಾನಿಗಳು ಸಂಖ್ಯಾವಾಚಕಗಳನ್ನು ಭಾಷಿಕ ಘಟಕಗಳೆಂದು ಗುರುತಿಸಿದ್ದಾರೆ. ಒಂದು ಭಾಷೆಯ ಭಾಷಿಕ ಅಂಶಗಳನ್ನು ಕುರಿತು ವಿವರಿಸುವಲ್ಲಿ ಸಂಖ್ಯಾವಾಚಿಗಳು ಅಗತ್ಯ ಮಾಹಿತಿಯನ್ನು ಒದಗಿಸುತ್ತವೆ. ಇವು ಭಾಷೆಯಿಂದ ಭಾಷೆಗೆ ಭಿನ್ನತೆಯಿಂದ ಕೂಡಿರುತ್ತವೆ. ಜೊತೆಗೆ ಸಂಖ್ಯಾವಾಚಕಗಳು ಒಂದು ಭಾಷೆಯ ಸಾಮಾಜಿಕ, ಸಾಂಸ್ಕೃತಿಕ ವಿವರಗಳನ್ನು ಅರಿಯಲು ಸಹಾಯಕವಾಗುತ್ತವೆ. ಸಮುದಾಯದಲ್ಲಿ ವ್ಯಕ್ತಿಗಳ ಗುಂಪು, ವಸ್ತುಗಳ ಗುಂಪು, ವಸ್ತುವಿನ ಸ್ಥಾನ ಮೊದಲಾದವುಗಳನ್ನು ಗುರುತಿಸಲು ಸಂಖ್ಯಾವಾಚಿಗಳನ್ನು ಬಳಕೆ ಮಾಡಲಾಗುತ್ತದೆ.

ಹಂಡಿಜೋಗಿ ಸಮುದಾಯದಲ್ಲಿ ಮೂಲ ಭಾಷೆಯ ಸಂಖ್ಯಾವಾಚಕಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ. ಸಮುದಾಯದ ಕೌಟುಂಬಿಕ ಪರಿಸರದಲ್ಲಿ ಒಂದರಿಂದ ಇಪ್ಪತ್ತರವರೆಗಿನ ಸಂಖ್ಯೆಗಳನ್ನು ಮೂಲಭಾಷೆಯಲ್ಲಿ ಹೆಸರಿಸುತ್ತಾರೆ. ನಂತರದ ಸಂಖ್ಯೆಗಳನ್ನು ಸೂಚಿಸಲು ಕನ್ನಡದ ಸಂಖ್ಯಾವಾಚಿಗಳ ಬಳಕೆ ಇರುವುದು ಕಂಡುಬರುತ್ತದೆ.

| **ಕನ್ನಡ** | **ಸಮುದಾಯದ ಭಾಷೆ** |
|---|---|
| ಒಂದು | ಯೋಕ್ |
| ಎರಡು | ದೋನ್ |
| ಮೂರು | ತೀನ್ |
| ನಾಲ್ಕು | ಚಾರ್ |

| | |
|---|---|
| ಐದು | ಪಾಚ್ |
| ಆರು | ಸಾ |
| ಏಳು | ಸತ್ |
| ಎಂಟು | ಆಠ್ |
| ಒಂಭತ್ತು | ನೌ |
| ಹತ್ತು | ದ |
| ಹನ್ನೊಂದು | ಅಕ್ರ |
| ಹನ್ನೆರಡು | ಬಾರಾ |
| ಹದಿಮೂರು | ತೇರಾ |
| ಹದಿನಾಲ್ಕು | ಚೌದಾ |
| ಹದಿನೈದು | ಪಂದ್ರ |
| ಹದಿನಾರು | ಸೋಲಾ |
| ಹದಿನೇಳು | ಸತ್ರ |
| ಹದಿನೆಂಟು | ಅಟ್ರಾ |
| ಹತ್ತೊಂಭತ್ತು | ಇಕ್ಲಿನೇಸ್ |
| ಇಪ್ಪತ್ತು | ಈಸ್ |
| ಇಪ್ಪತ್ತೈದು | ಈಸುನ್ ಪಾಚ್ |
| ಇಪ್ಪತ್ತೊಂಭತ್ತು | ಈಸುನೌ |
| ಮೂವತ್ತು | ದೀಡೀಸ್ |
| ನಲವತ್ತು | ದೋನೀಸ್ |
| ಐವತ್ತು | ಪನ್ನಾಸ್ |
| ಅರವತ್ತು | ತೀನೀಸ್ |
| ಅರವತ್ತೊಂಭತ್ತು | ತೀನೀಸುನೌ (ತೀನೀಸ್ ಉನ್‌ನೌ) |
| ಎಪ್ಪತ್ತು | ತೀನ್‌ಈಸ್‌ಉನ್‌ದಾ |
| ಎಂಭತ್ತು | ಚಾರ್‌ಈಸ್ |
| ತೊಂಭತ್ತು | ಚಾರೀಸ್‌ವುನ್ ದಾ |

| | |
|---|---|
| ನೂರು | ಶಂಬರ್ |
| ಒಂದು ನೂರು | ಯೋಕ್ಶಂಬರ್ |
| ಎರಡು ನೂರು | ದೋನ್ಶಂಬರ್ |
| ಮೂರು ನೂರು | ತೀನ್ಶಂಬರ್ |
| ನಾಲ್ಕುನೂರು | ಚಾರ್ಶಂಬರ್ |
| ಐದುನೂರು | ಪಾಚ್ಶಂಬರ್ |
| ಆರುನೂರು | ಸಾಶಂಬರ್ |
| ಏಳುನೂರು | ಸತ್ಶಂಬರ್ |
| ಎಂಟುನೂರು | ಆಟ್ಶಂಬರ್ |
| ಒಂಭೈನೂರು | ನೌಶಂಬರ್ |
| ಸಾವಿರ | ಹಜಾರ್ |
| ಒಂದು ಸಾವಿರ | ಯೋಕ್ ಹಜಾರ್ |
| ಐದು ಸಾವಿರ | ಪಾಚ್ ಹಜಾರ್ |
| ಹತ್ತು ಸಾವಿರ | ದಾಹಜಾರ್ |
| ಐವತ್ತು ಸಾವಿರ | ಪನ್ನಾಸ್ ಹಜಾರ್ |
| ಒಂದು ಲಕ್ಷ | ಯೋಕ್ ಲಕ್ಸ್ |

**ಕ್ರಮವಾಚಕಗಳು**

ಹಂಡಿಜೋಗಿಗಳು ಸಮುದಾಯದಲ್ಲಿ ವ್ಯಕ್ತಿಗಳು ಹಾಗೂ ವಸ್ತುವಿನ ಸ್ಥಾನವನ್ನು ಸೂಚಿಸಲು ಬಳಸುವ ಕ್ರಮವಾಚಿಗಳು ಸಮುದಾಯದ ಮೂಲಭಾಷೆಯಲ್ಲಿರುವುದು ಕಂಡುಬರುತ್ತದೆ. ಅಂತಹ ಕ್ರಮವಾಚಿಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

| | |
|---|---|
| ಒಂದನೆಯ | ಯೋಕ್ನೇಚ್ |
| ಎರಡನೆ | ದೊನೇಸ್ |
| ಮೂರನೆಯ | ತೀನೇಸ್ |
| ನಾಲ್ಕನೆಯ | ಚಾರ್ನೇಚ್ |
| ಐದನೆಯ | ಪಾಚ್ನೇಸ್ |
| ಆರನೆಯ | ಸಾನೇಚ್ |

| | |
|---|---|
| ಏಳನೆಯ | ಸತ್‌ನೇಸ್ |
| ಎಂಟನೆಯ | ಆಠ್‌ನೇಚ್ |
| ಒಂಭತ್ತನೆಯ | ನೌನೇಚ್ |
| ಹತ್ತನೆಯ | ದಾನೇಚ್ |
| ಮೊದಲನೆಯ | ಅದ್ದೀಸ್ |
| ಮತ್ತೊಂದು | ಅಂಜೋರ್ |
| ಕೊನೆಯ | ಲಾಸ್ಟ್‌ನೇಸ್ |
| ಒಂದು ತಿಂಗಳು | ಯೋಕ್‌ಮ್ಯೆನಾ |
| ಎರಡು ತಿಂಗಳು | ದೋನ್‌ಮ್ಯೆನಾ |
| ಮೂರು ತಿಂಗಳು | ತೀನ್ ಮ್ಯೆನಾ |
| ನಾಲ್ಕು ತಿಂಗಳು | ಚಾರ್ ಮ್ಯೆನಾ |
| ಐದು ತಿಂಗಳು | ಪಾಚ್‌ಮ್ಯೆನಾ |
| ಆರು ತಿಂಗಳು | ಸಾಮ್ಯೆನಾ |
| ಏಳು ತಿಂಗಳು | ಸತ್‌ಮ್ಯೆನಾ |
| ಎಂಟು ತಿಂಗಳು | ಆಟ್‌ಮ್ಯೆನಾ |
| ಒಂಭತ್ತು ತಿಂಗಳು | ನೌಮ್ಯೆನಾ |
| ಹತ್ತು ತಿಂಗಳು | ದಾಮ್ಯೆನಾ |

ಜೊತೆಗೆ ಸಮುದಾಯದಲ್ಲಿ ವ್ಯಕ್ತಿಗಳ ಗುಂಪನ್ನು ಹೆಸರಿಸಲು ಸಮುದಾಯದ ಮೂಲಭಾಷೆಯ ರೂಪಗಳನ್ನು ಬಳಕೆ ಮಾಡುವುದನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

| | |
|---|---|
| ಒಬ್ಬ | ಏಕ್ಲಾ (ಯೋಕ್ಲಾ) |
| ಇಬ್ಬರು | ದೋಗೋ |
| ಮೂವರು | ತೀಗೋ |
| ನಾಲ್ವರು | ಚಾರ್‌ಗೋ |
| ಐವರು | ಪಾಚ್‌ಗೋ |
| ಆರು ಜನ | ಸಾಜನ್ |

| | |
|---|---|
| ಏಳು ಜನ | ಸತ್‌ಜನ್ |
| ಎಂಟು ಜನ | ಆಟ್‌ಜನ್ |
| ಒಂಭತ್ತು ಜನ | ನೌಜನ್ |
| ಹತ್ತು ಜನ | ದಾಜನ್ |

**ಪ್ರಮಾಣಸೂಚಕ ಪದಗಳು**

| | |
|---|---|
| ಕಾಲು | ಪಾವ್ಲಿ |
| ಅರ್ಧ | ಆಠಾಣೆ |
| ಮುಕ್ಕಾಲು | ಬಾರಾಣೆ |
| ಒಂದು ಕಾಲು | ಏಕ್ (ಯೋಕ್) ರೂಪಾಯ್ ಪಾವ್ಲಿ |
| ಒಂದುವರೆ | ದೀಡ್ ರುಪಾಯಿ (ಏಕ್‌ನರ್ದಾ) ಯೋಕನರ್ದೋ |
| ಒಂದು ಮುಕ್ಕಾಲು | ಯೋಕ್‌ರುಪಾಯ್ ಬಾರಾಣೆ |

ಹೀಗೆ ಹಂಡಿಜೋಗಿ ಸಮುದಾಯದಲ್ಲಿ ಸಂಖ್ಯಾವಾಚಿ, ಕ್ರಮವಾಚಿ ಮತ್ತು ಪ್ರಮಾಣಸೂಚಕ ಮೊದಲಾದವುಗಳನ್ನು ಹೆಸರಿಸಲು ಸಮುದಾಯದ ಮೂಲಭಾಷೆಯಾದ ಮರಾಠಿಯ ಭಾಷಾ ರೂಪಗಳು ಬಳಕೆಯಲ್ಲಿರುವುದನ್ನು ಗುರುತಿಸಬಹುದಾಗಿದೆ.

**ಭಾಷಾ ಬಳಕೆ**

ಹಂಡಿಜೋಗಿಗಳು ಕೌಟುಂಬಿಕವಾಗಿ ಮರಾಠಿ ಭಾಷೆಯಲ್ಲಿ ವ್ಯವಹರಿಸುತ್ತಾರೆ. ಇವರು ತಮ್ಮ ಸಮುದಾಯದ ಮೂಲ ವೃತ್ತಿಯ ಜೊತೆಗೆ ಇತರೆ ಉಪ ವೃತ್ತಿಗಳನ್ನು ಅವಲಂಬಿಸಿ ಜೀವಿಸುತ್ತಿರುವುದು ಕಂಡುಬರುತ್ತದೆ. ಇವರು ತಮ್ಮ ಸುತ್ತಮುತ್ತಲಿನ ಪಕ್ಷಿ ಪ್ರಾಣಿಗಳ ಹೆಸರುಗಳನ್ನು ಸಮುದಾಯದ ಭಾಷೆಯಾದ ಮರಾಠಿಯಲ್ಲಿ ಸಂಬೋಧಿಸುತ್ತಾರೆ. ಅಂತಹ ಕೆಲವು ಪ್ರಾಣಿ, ಪಕ್ಷಿ ಹಾಗೂ ಗೃಹೋಪಯೋಗಿ ವಸ್ತುಗಳು ಮೊದಲಾದವುಗಳಿಗೆ ಸಂಬಂಧಿಸಿದ ಮೂಲ ಭಾಷಾ ರೂಪಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

**ಪ್ರಾಣಿಸೂಚಕ ಪದಗಳು**

| | |
|---|---|
| ನರಿ | ಕೋಲಾ |
| ಹದ್ದು | ಘಾರ್ |
| ಕೊಂಬು | ಸಿಂಗ್ |
| ಬಾಲ | ಪೂಸ್ |

| | |
|---|---|
| ರೆಕ್ಕೆ | ರಕ್ಕಾ |
| ಉಡ | ಗೊರ್ಪಡ್ (ಗೊರ್ಪಡ್) |
| ಗೂಬೆ | ಗುಬಡ್ |
| ಕೋಣ | ಕುಳ್ಳಾ |
| ಕತ್ತೆ | ಗಾಡೋವ್ |
| ಆಮೆ | ತುಪ್ಯಾ |
| ಏಡಿ | ಕೇಕ್ಡಾ |
| ಹಾವು | ಸಾಪ್ |
| ನಾಗರಹಾವು | ನಾಗಸಾಪ್ (ನಾಗ್‌ಸಾಪ್) |
| ಕೇರೆಹಾವು | ಕೇರೆಸಾಪ್ (ಕೇರ್‌ಸಾಪ್) |
| ಹಲ್ಲಿ | ಪಾಲ್ |
| ಮಾಂಸ | ದಲ್ಲಿ |
| ಕೋಳಿಮಾಂಸ | ಕೊಮಾಡಸ್‌ದಲ್ಲಿ |
| ಕುರಿಮಾಂಸ | ಬಕರಾಸ್‌ದಲ್ಲಿ |
| ಮೊಲದ ಮಾಂಸ | ಸೊಸಾಸ್‌ದಲ್ಲಿ |
| **ಕನ್ನಡ** | **ಹಂಡಿಜೋಗಿಗಳ ಭಾಷೆ** |
| ಅಳಿಲು | ಕಾರಿ |
| ಆನೆ | ಅತ್ತಿ |
| ಇರುವೆ | ಮುಂಗ್ಯಾ |
| ಇಲಿ | ಉಂದಿರ್ |
| ಎತ್ತು | ಬೈಲ್ |
| ಎಮ್ಮೆ | ಮೈಸ್ |
| ಕರು | ವಾಸ್ರೂ |
| ಗಂಡುಕರು | ಗಂಡ್ಗವಾಸ್ರೂ |
| ಹೆಣ್ಣುಕರು | ಹೆಣ್ಗವಾಸ್ರೂ |

| | |
|---|---|
| ಕಾಗೆ | ಕಾವ್ಳ |
| ಕಾಡುಕೋಣ | ಜಂಗಲ್ ಮ್ಹೈಸ್ |
| ಹಂದಿ | ಡುಕೋರ್ |
| ಕಾಡುಹಂದಿ | ಜಂಗಲ್‌ಡುಕೋರ್ |
| ಕುರಿ | ಬಕ್ರ |
| ಕೋಳಿ | ಕೊಮ್ಡ |
| ಗಿಳಿ | ಸೋಟಿಮಾರ್ |
| ಗುಬ್ಬಚ್ಚಿ | ಪಾಕ್ರು |
| ಚಿರತೆ | ಚಿತಾ |
| ಟಗರು | ಮೇಂಡಾ |
| ತೋಳ | ಮಾಂಡ್ಗ್ಯಾ |
| ದನ | ಬೈಲ್ |
| ನವಿಲು | ಮೋರ್ |
| ನಾಯಿ | ಕುತ್ರೋ |
| ಪರಿವಾಳ | ಕಬೂತರ್ |
| ಬೆಕ್ಕು | ಮಾಂಜರ್ |
| ಮೇಕೆ | ಶೇಳಿ |
| ಮೊಲ | ಸೊಸ |
| ಮುಂಗುಸಿ | ಮುಂಗೋಸ್ |
| ಮೀನು | ಜೋರಿ |
| ಸೀಗಡಿ | ಜೆಂಗಳ |
| ಹಸು | ಗಾಯ್ |
| ಹುಂಜ | ಡಗ್ರೂರ್ಗ |
| ಹುಲಿ | ವಾಘ್ |
| ಹ್ಯಾಟೆ | ಹೆಣ್ಗುಕೊಮ್ಡ |

| ಕನ್ನಡ | ಸಮುದಾಯದ ಮೂಲ ಭಾಷಾರೂಪ |
|---|---|
| ಮನೆ | ಘರ್ |
| ಹೊಲ | ಶೇತ್ |
| ರಸ್ತೆ | ವಾಟ್ |
| ಓಣಿ | ಓಣ್ |
| ಅಂಗಡಿ | ದುಕಾನ್ |
| ಮರ | ಜಾಡ್ |
| ಮಾವಿನಮರ | ಅಂಬೇಸ್‌ಜಾಡ್ |
| ತೆಂಗಿನಮರ | ನಾರೋಳೀಸ್‌ಜಾಡ್ |
| ಹುಣಸೆಮರ | ಚಿಂಚಸ್‌ಜಾಡ್ |
| ಬಾರೆಮರ | ಗೋರೀಸ್‌ಜಾಡ್ |
| ಆಲದಮರ | ಓಡಾಜಾಡ್ |
| ಹಲಸಿನಮರ | ಪನ್ಸಾಸ್‌ಜಾಡ್ |
| ಬೇವಿನಮರ | ನಿಂಬಾಸ್‌ಜಾಡ್ |
| ಹೊಂಗೆಮರ | ಕರೂಂಜೀಸ್‌ಜಾಡ್ |
| ಜಾಲಿಮರ | ಜಾಲೀಸ್‌ಜಾಡ್ |
| ತೋಟ | ಮಳ |
| ಎಲೆತೋಟ | ಪಾನಾಸ್‌ಮಳ (ಪಾನ್‌ಮಳ) |
| ತೆಂಗಿನತೋಟ | ನಾರೋಳೀಸ್‌ಮಳ (ನಾರೋಳ್‌ಮಳ) |
| ಅಡಿಕೆತೋಟ | ಸುಫಾರೀಸ್‌ಮಳ (ಸುಫಾರಿಮಳ) |
| ಹಲಸಿನತೋಟ | ಪನ್ಸಾಸ್‌ಮಳ |
| ಬಾಳೆತೋಟ | ಕೇಳೀಸ್‌ಮಳ |
| ಹೂವಿನತೋಟ | ಪೂವ್ಲಾಸ್‌ಮಳ |
| ಮಾವಿನತೋಟ | ಅಂಬೇಸ್‌ಮಳ |

| | |
|---|---|
| ಹುಣಸೆತೋಟ | ಚಿಂಚೇಸ್‌ಮಳ |
| ಎಲೆ | ಪಾನ್ |
| ಅಡಿಕೆ | ಸುಫಾರಿ |
| ತೆಂಗಿನಕಾಯಿ | ನಾರೋಳ್ |
| ಕಬ್ಬು | ಊಸ್ |
| ಎಳ್ಳು | ತೀಳ್ |
| ಸಜ್ಜೆ | ಸಜ್ಜೂಗರಾ |
| ಹೆಸರುಕಾಳು | ಮುಗಾಸ್‌ಕಾಳ್ |
| ಔಡಲಕಾಳು | ಯರೆಂಡಾಸ್‌ಕಾಳ್ |
| ಔಡಲ | ಎರೆಂಡಾ |
| ಹತ್ತಿ | ಕಾಪೂಸ್ |
| ಶೇಂಗಾ | ಕಾಯ |
| ಹೂವು | ಪೂವ್ಲಾ |
| ಬೇಳೆ | ದಾಲ್ |
| ಅಕ್ಕಿ | ತಾಂದೂಳ್ |
| ಭತ್ತ | ಸಾಳಿ |
| ನವಣೆ | ರಾಳೇ |
| ಜೋಳ | ಜೋನ್ಲೇ |
| ಅನ್ನ | ಬಾತ್ |
| ಮುದ್ದೆ | ಗೋಳಾ |
| ಸಾಂಬಾರು | ಕಾಂಜಿ |
| ದೋಸೆ | ದಿಳ್ಡ್ಯಾ |
| ಬೆಲ್ಲ | ಗುಳ್ಯಾ (ಗುಳ್) |
| ಕರಿಬೇವು | ಕರ್ಪಾ |

| | |
|---|---|
| ಗೋಧಿ | ಗೌ |
| ಹಿಟ್ಟು | ಪೀಟ್ |
| ಜೋಳದ ಹಿಟ್ಟು | ಜೋನ್ಲ್ಯಾಪೀಟ್ |
| ಸಜ್ಜೆಹಿಟ್ಟು | ಸಜ್ಗೂರಾ ಪೀಟ್ |
| ಗೋಧಿಹಿಟ್ಟು | ಗೌವೂಸ್‌ಪೀಟ್ |
| ಅಕ್ಕಿಹಿಟ್ಟು | ತಾಂದೋಳೀಸ್‌ಪೀಟ್ |
| ರೊಟ್ಟಿ | ಭಾಕರ್ |
| ಹೋಳಿಗೆ | ಗೋಳ್ಯಾ |
| ಕರಿಗಡಬು | ಕಾನೋಲೆ |
| ಚಪಾತಿ | ಗೌಲಾಸ್ |
| ಸೊಪ್ಪು | ಬಾಜಿ |
| ಕೊತ್ತಂಬರಿಸೊಪ್ಪು | ಕೊತ್ತಂಬ್ರೀಸ್ ಬಾಜಿ |
| ಹಾಲು | ದೂದ್ |
| ಮೊಸರು | ಧೈ |
| ಬೆಣ್ಣೆ | ನೋನಿ |
| ತುಪ್ಪ | ತೂಪ್ |
| ಮಜ್ಜಿಗೆ | ತಾಕ್ |
| ಚಂಬು | ತಾಂಬ್ಯಾ |
| ತಟ್ಟೆ | ತಾಳ |
| ಪಾತ್ರೆ | ಪತ್ತರ್ (ಡಬರಿ) |
| ಏಳಿಗೆಮಣಿ | ಈಳ್ಗಾ |
| ಎಣ್ಣೆ | ತೇಲ್ |
| ನೀರು | ಪಾನಿ |
| ಒನಕೆ | ಮುಸೋಳ್ |

| | |
|---|---|
| ಒರಳು (ಒಳ್ಳು) | ಊಕಳ್ |
| ಕಟ್ಟಿಗೆ | ನಾಕ್ಡಾ |
| ಮುಳ್ಳು | ಕಾಟಾ |
| ಉಪ್ಪು | ಮೀಟ್ |
| ಬೆಳ್ಳುಳ್ಳಿ | ನಸೂನ್ |
| ಈರುಳ್ಳಿ | ಕಾಂದಾ (ಕಾಂದ್ಯಾ) |
| ಮೆಣಸು | ಮೀರೆ |
| ಮೆಣಸಿನಕಾಯಿ | ಮಿರ್‌ಸಂಗ್ |
| ಬದನೆ | ವಾಂಗಿ |
| ತೊಟ್ಟಿಲು | ಪಾಂಡ್‌ನಾ |
| ಬಾಚಣಿಕೆ | ಪನಿ (ಪನ) |
| ಕನ್ನಡಿ | ವರ್ಸೀ |
| ದಾರ | ದೋರಾ |
| ಹಗ್ಗ | ದೋರಿ |
| ಒಲೆ | ಚೂಲ್ |
| ಬೆಂಕಿ | ಉಸ್ತ್ |
| ಗಾಳಿ | ವಾರೋ |
| ಮಣ್ಣು | ಮಾಟಿ |
| ಕಪ್ಪುಮಣ್ಣು | ಕಾಳೋರ್‌ಮಾಟಿ |
| ಕೆಂಪುಮಣ್ಣು | ತಾಂಬೋರ್‌ಮಾಟಿ |
| ಬಿಳಿಮಣ್ಣು | ಪಾಂಡ್ರೂಸ್‌ಮಾಟಿ |
| ಚೀಲ | ಪೋಕ್ |
| ಅಗೇವು | ಪೇವ್ |
| ತಿಪ್ಪೆ | ಉಕುಳ್ಡಾ |

| | |
|---|---|
| ಕುಡುಗೋಲು | ಇಳ್ಕಾ |
| ಕೊಡಲಿ | ಕುರಾಡ್ |
| ಕಲ್ಲು | ದೋಂಡಾ |
| ಬಲೆ | ಕಂಡಾಳ್ |
| ಗುಡ್ಡ (ಬೆಟ್ಟ) | ಡೊಂಗರ್ |
| ಕೆರೆ | ತಳ |
| ಹಳ್ಳ | ವೋಳ್ |
| ಬಾಗಿಲು | ತಾಟಿ |
| ಹೊಸ್ತಿಲು | ಉಂಬ್ರಾ |
| ಗೋಡೆ | ಬಿಂತ್ |

**ಬಣ್ಣಗಳು**

| | |
|---|---|
| ಕಪ್ಪುಬಣ್ಣ | ಕಾಳೋರ್ |
| ಕೆಂಪು | ತಾಂಬೋರ್ |
| ಬಿಳಿ | ಪಾಂಡ್ರು |
| ಹಳದಿ | ಹಳದ್ |
| ಹಸಿರು | ಇರುವೋ |

**ಹಣ್ಣುಗಳು**

| | |
|---|---|
| ಮಾವಿನಹಣ್ಣು | ಆಂಬೇಸ್‌ಹಣ್ಣು |
| ಬಾರೆಹಣ್ಣು | ಗೋರೀಸಣ್ಣು |
| ಹಲಸಿನಹಣ್ಣು | ಪನ್ಸಾಸ್‌ಹಣ್ಣು |
| ಹುಣಸೇಹಣ್ಣು | ಚಿಂಚಸಣ್ಣು |
| ಆಲದಹಣ್ಣು | ಓಡಾಸಣ್ಣು |
| ಬಾಳೆಹಣ್ಣು | ಕೇಳೀಸಣ್ಣು |
| ಬೇವಿನಹಣ್ಣು | ನಿಂಬಾಸಣ್ಣು |

| | |
|---|---|
| ಮಾವು | ಅಂಬೇಸ್ |
| ಹುಣಸೆ | ಚಿಂಚ್ |
| ಬಾರೆ | ಗೋರೀಸ್ |
| ಹಲಸು | ಪನ್ಸಾಸ್ |
| ಬಾಳೆ | ಕೇಳೀಸ್ |
| ಬೇವು | ನಿಂಬಾಸ್ |

**ಕಾಲಗಳು**

| | |
|---|---|
| ಇವತ್ತು (ಈದಿನ, ಇಂದು) | ಆಜ್ |
| ನಾಳೆ | ಉಂದ್ಯಾ |
| ನಾಡಿದ್ದು | ಉಂದ್ಯಾನಸ್ ಪರೋದಿನ್ |
| ನಿನ್ನೆ | ಕಾಲ್ |
| ಮೊನ್ನೆ | ಕಾಲಾನಸ್ ಪರೋದಿನ್ |
| ಮುಂಜಾನೆ (ಬೆಳಿಗ್ಗೆ) | ಸಕಾಳ್ |
| ಮಧ್ಯಾಹ್ನ | ದುಪಾರ್ |
| ಸಂಜೆ | ಸಾಂಜ್ |
| ರಾತ್ರಿ | ರಾತಿ (ರಾತ್) |
| ಮಧ್ಯರಾತ್ರಿ | ಮಧ್‌ರಾತ್ (ಮಧ್‌ರಾತಿ) |
| ಗಾಳಿ | ವಾರೋ |
| ಚಳಿ | ಥಂಡ್ |
| ಮಳೆ | ಪಾವೂಸ್ |
| ಬಿಸಿಲು | ಉನ್ |
| ಸೂರ್ಯ | ದಿನ್ |
| ಮಳೆಗಾಲ | ಪಾವೂಸ್‌ದಿನ್ |
| ಚಳಿಗಾಲ | ತಂಡೀಸ್‌ದಿನ್ |

| | |
|---|---|
| ಬೇಸಿಗೆಕಾಲ | ಉನ್ನಾಳೀಸ್‌ದಿನ್(ಉನ್ನಾಳ) |
| ಕಳ್ಳ | ಚೊಳ್ಟ |
| ಕಳ್ಳಿ | ಚೊಳ್ಟಿ |
| ಹುಡುಗಿ | ಪಿಲ್ಲ, ಪೋರಿ |
| ಹುಡುಗ | ಪೋರ್ |
| ಗಂಡು ಹುಡುಗ | ಗಂಡ್ಗಪೋರ್ |
| ಹೆಣ್ಣು ಹುಡುಗಿ | ಹೆಣ್ಗಿಪಿಲ್ಲ |
| ಗಂಡು | ಗಂಡ್ಗ |
| ಹೆಣ್ಣು | ಹೆಣ್ಗಿ |
| ತಿಂಗಳು | ಮೈನಾ |
| ಒಂದು ತಿಂಗಳು | ಯೋಕ್‌ಮೈನಾ |
| ಎರಡು ತಿಂಗಳು | ದೋನ್‌ಮೈನಾ |
| ಮೂರು ತಿಂಗಳು | ತೀನ್ ಮೈನಾ |
| ನಾಲ್ಕು ತಿಂಗಳು | ಚಾರ್ ಮೈನಾ |
| ಐದು ತಿಂಗಳು | ಪಾಚ್‌ಮೈನಾ |
| ಆರು ತಿಂಗಳು | ಸಾಮೈನಾ |
| ಏಳು ತಿಂಗಳು | ಸತ್‌ಮೈನಾ |
| ಎಂಟು ತಿಂಗಳು | ಆಟ್‌ಮೈನಾ |
| ಒಂಭತ್ತು ತಿಂಗಳು | ನೌಮೈನಾ |
| ಹತ್ತು ತಿಂಗಳು | ದಾಮೈನಾ |

**ಮಾನವನ ಅಂಗಾಂಗ ಸೂಚಕಪದಗಳು**

| | |
|---|---|
| ತಲೆ | ಮುಂಡೆ |
| ಕರುಳು | ಅಂತ್ರೂಡಿ |
| ಎಲುಬು | ಆಡ್ |

| | |
|---|---|
| ರಕ್ತ | ರಗತ್ |
| ಮಾಂಸ | ದಲ್ಲಿ |
| ಬೆರಳು | ಬೋಟ್ |
| ಕೈಬೆರಳು | ಹಾತ್‌ಬೋಟ್ |
| ಕಾಲುಬೆರಳು | ಪಾಯ್‌ಬೋಟ್ |
| ಉಗುರು | ನಕ್ಕ್ |
| ಕೈ | ಹಾತ್ |
| ಕಾಲು | ಪಾಯ |
| ಚರ್ಮ | ಕಾತ್‌ಡಾ |
| ಕೂದಲು | ಕೇಸ್ |
| ಕುತ್ತಿಗೆ | ಗಚ್ಚಿ |
| ಕೊರಳು | ಲಂಡ |
| ಮುಖ | ತೋಂಡ್ |
| ತುಟಿ | ಓಟ್ |
| ಬಾಯಿ | ತೋಂಡ್ |
| ಹಲ್ಲು | ದಾತ್ |
| ಒಕ್ಕಳು | ಬೋಂಬಿ |
| ಸೊಂಟ | ಕೊಂಬರ್ |
| ರಟ್ಟೆ (ತೋಳು) | ರಟ್ಟ |
| ಭುಜ | ಕಾಂಧಾರೆ |
| ಕಣ್ಣು | ದೋಳಾ |
| ಕಿವಿ | ಕಾನ್ |
| ಮೂಗು | ನಾಕ್ |
| ಮೊಣಕಾಲು | ಗುಡ್ಗಾ |

| | |
|---|---|
| ಅಂಗಾಲು | ತಳಪಾಯ |
| ಹಿಮ್ಮಡಿ | ಹಿಂಬಟ್ |
| ಹೊಟ್ಟೆ | ಪೋಟ್ |
| ಬೆನ್ನು | ಪಾಟ್ |

**ವ್ಯಕ್ತಿಗಳಿಗೆ ಸಂಬಂಧಿಸಿದ ಖಾಯಿಲೆಗಳು**

| | |
|---|---|
| ಕೆಮ್ಮು | ಕೋಕ್‌ಲಾ |
| ನೆಗಡಿ (ಶೀತ) | ಪಡ್ಸ್ |
| ಜ್ವರ | ತಾಪ್ |
| ತಲೆನೋವು | ಮುಂಡೆದುಕ್ತಿ |
| ಮೈನೋವು | ಅಂಗಾಸ್‌ಕನ್ |
| ನೋವು | ಕನ್ (ದುಕ್ತೆ) |
| ಕೈನೋವು | ಹಾತ್‌ದುಕ್ತೆ |
| ಕಾಲುನೋವು | ಪಾಯ್‌ದುಕ್ತೆ |
| ಹೊಟ್ಟೆನೋವು | ಪೋಟ್‌ದುಕ್ತೆ |
| ಬಾಯಿನೋವು | ತೋಂಡ್‌ದುಕ್ತೆ |
| ಸೊಂಟನೋವು | ಕೊಂಬರ್‌ದುಕ್ತೆ |
| ತುಟಿನೋವು | ಓಟ್‌ದುಕ್ತೆ |
| ಹಲ್ಲುನೋವು | ದಾತಾಸ್‌ಕನ್ |
| ಕಣ್ಣುನೋವು | ದೋಳಾಸ್‌ಕನ್ |
| ಕಿವಿನೋವು | ಕಾನಾಸ್‌ಕನ್ |
| ಬೆರಳುನೋವು | ಬೋಟ್‌ದುಕ್ತೆ |
| ಬೆನ್ನುನೋವು | ಪಾಟ್‌ದುಕ್ತೆ |
| ಮೂಗುನೋವು | ನಾಕ್‌ದುಕ್ತೆ |

ಈ ಮೇಲಿನ ಪದಗಳನ್ನು ಗಮನಿಸಿದರೆ ಹಂಡಿಜೋಗಿಗಳು ತಮ್ಮ ಸಮುದಾಯದ ಕೌಟುಂಬಿಕ

ಹಾಗೂ ಸಾಮಾಜಿಕ ಸನ್ನಿವೇಶದಲ್ಲಿ ಸಮುದಾಯದ ಮೂಲಭಾಷೆಯ ಬಳಕೆ ಅಧಿಕವಾಗಿರುವುದು ಕಂಡುಬರುತ್ತದೆ. ಸಮುದಾಯದಲ್ಲಿನ ವ್ಯಕ್ತಿಗಳು ಕೌಟುಂಬಿಕವಾಗಿ ಹಾಗೂ ಸಾಮಾಜಿಕವಾಗಿ ತಮ್ಮ ಸಮುದಾಯದವರೊಡನೆ ಮೂಲಭಾಷೆಯಲ್ಲಿ ವ್ಯವಹರಿಸುವುದು ಕಂಡುಬರುತ್ತದೆ. ಜೊತೆಗೆ ಪ್ರಾದೇಶಿಕವಾಗಿ ಇತರೇ ಸಮುದಾಯ ದವರೊಡನೆ ವ್ಯವಹರಿಸುವಾಗ ಸ್ಥಳೀಯ ಪರಿಸರದ ಭಾಷೆಯಾದ ಕನ್ನಡದಲ್ಲಿ ವ್ಯವಹರಿಸುತ್ತಾರೆ.

**೫.೪. ಗಾದೆಗಳು**

ಗಾದೆಗಳು ವಿಶಿಷ್ಟವಾದ ಭಾಷಿಕ ಘಟಕಗಳಾಗಿವೆ. ಭಾಷಾ ಸಮುದಾಯದಲ್ಲಿ ಹೆಚ್ಚು ಕ್ರಿಯಾಶೀಲವಾಗಿ ಬಳಕೆಯಲ್ಲಿರುವ ಭಾಷಾ ರೂಪಗಳೆಂದರೆ ಗಾದೆಗಳು. ವಿದ್ವಾಂಸರು ಗಾದೆಯ ಅರ್ಥವನ್ನು ಈ ರೀತಿ ವಿವರಿಸಿದ್ದಾರೆ. ಗಾದೆ ಜನವಾಣಿ ಇದ್ದಂತೆ. ಅನುಭವ ಜನ್ಯವಾದ ಮಾತು, ನಾಣ್ಣುಡಿ (ನಾಡಿನ ನುಡಿ) ಲೋಕೋಕ್ತಿ (ಲೋಕದಲ್ಲಿನ ಮಾತು) ಲೋಕ ರೂಢಿಗಳು ಎಂದು ಕರೆದಿದ್ದಾರೆ. ಗಾದೆಗಳನ್ನು ಭಾಷಾ ಸಮುದಾಯದಲ್ಲಿ ಯಾರೂ ಕೂಡ ಓದಿ ಅಥವಾ ಕಲಿತು ಬಳಸುವುದಿಲ್ಲ. ಗಾದೆಗಳು ಸಿದ್ದರೂಪಗಳಾಗಿದ್ದು ಪ್ರತೀ ಸಮುದಾಯದಲ್ಲೂ ಸಂದರ್ಭಾನುಸಾರವಾಗಿ ಬಳಕೆಗೊಳ್ಳುವುದು ಕಂಡುಬರುತ್ತದೆ. ಗಾದೆಗಳ ಬಳಕೆ ಇಲ್ಲದ ಭಾಷಾ ಸಮುದಾಯವನ್ನು ಕಲ್ಪಿಸಿಕೊಳ್ಳಲು ಅಸಾಧ್ಯ. ಅಷ್ಟು ಅವುಗಳ ಬಳಕೆ ಇರುವುದನ್ನು ಭಾಷಾ ಸಮುದಾಯದಲ್ಲಿ ಗುರುತಿಸಬಹುದಾಗಿದೆ. ಸಮುದಾಯದಲ್ಲಿನ ಎಲ್ಲಾ ವ್ಯಕ್ತಿಗಳು ಮಾತಿಗೊಂದು ಗಾದೆ ಬಳಸುವುದನ್ನು ಗುರುತಿಸಬಹುದಾಗಿದೆ. ಗಾದೆಗಳು ಮಾತಿನ ಒಂದು ಕ್ರಮವಾಗಿರುವುದು ಕಂಡುಬರುತ್ತದೆ. ಗಾದೆಗಳು ಒಳಗೊಳ್ಳದ ವಿಷಯವೇ ಇಲ್ಲ. ಗಾದೆಗಳ ಸ್ವರೂಪವನ್ನು ಗಮನಿಸಿದರೆ ನಮಗೆ ಅನೇಕ ಅಂಶಗಳು ದೊರಕುತ್ತವೆ. ಗಾದೆಗಳು ವ್ಯಕ್ತಿಯ ಗುಣಸ್ವಭಾವಗಳನ್ನು ಕುರಿತು ವರ್ಣಿಸುವಂತಹವುಗಳಾಗಿವೆ. ಇವುಗಳ ಜೊತೆಗೆ ಗಾದೆಗಳು ಪುರುಷ ಮತ್ತು ಮಹಿಳೆಯರ ಸ್ವಭಾವಕ್ಕೆ ಸಂಬಂಧಿಸಿದ ವಿವರಗಳನ್ನು ಒಳಗೊಂಡಿರುತ್ತದೆ.

ಗಾದೆಗಳು ಪ್ರಮುಖವಾಗಿ ಪ್ರದೇಶವಾಚಿಯಾಗಿ, ಸಮುದಾಯವಾಚಿಯಾಗಿ, ಜಾತಿವಾಚಿಯಾಗಿ, ಲಿಂಗಸಂಬಂಧಿಯಾಗಿ (ಪುರುಷ, ಮಹಿಳೆಯರು), ವಯೋ ಸಂಬಂಧಿಯಾಗಿ (ಮಕ್ಕಳು, ಯುವಕ ಯುವತಿಯರು, ವೃದ್ಧರು), ವೃತ್ತಿ ಸಂಬಂಧಿಯಾಗಿ, ಮನೋವಿಚಾರಗಳಿಗೆ ಸಂಬಂಧಿಸಿದಂತೆ, ಪ್ರಾಣಿ ಸಂಬಂಧಿಯಾಗಿ, ಪಕ್ಷಿ ಸಂಬಂಧಿಯಾಗಿ, ಪ್ರಾಕೃತಿಕ ಲಕ್ಷಣಗಳಿಗೆ ಸಂಬಂಧಿಸಿದಂತೆ ಚರಿತ್ರೆ, ಪುರಾಣ ಕತೆ ಹಾಗೂ ಪುರಾಣ ಪುರುಷರು, ಘಟನಾಸಂಬಂಧಿಯಾಗಿ, ಸನ್ನಿವೇಶ ಸಂಬಂಧಿಯಾಗಿ ಹೀಗೆ ಅನೇಕ ವಿಷಯ ವಸ್ತುಗಳ ಕುರಿತಾಗಿ ಗಾದೆಗಳು ವರ್ಣಿಸುವುದನ್ನು ಗುರುತಿಸಬಹುದಾಗಿದೆ. ಕೌಟುಂಬಿಕ ಸಂಬಂಧಗಳ ಕುರಿತಾಗಿ ಗಾದೆಗಳು ನೀತಿವಾಕ್ಯಗಳಂತೆ ಬಳಕೆಯಲ್ಲಿರುವುದು ಕಂಡುಬರುತ್ತದೆ. ಜೊತೆಗೆ ಮಾನವ ಕೌಟುಂಬಿಕ ಸಂಬಂಧಗಳ ಕುರಿತು ಪ್ರತಿಯೊಂದು ಸನ್ನಿವೇಶವನ್ನು ವರ್ಣಿಸುವುದು ಕಂಡುಬರುತ್ತದೆ. ನಂತರ ಇವುಗಳು ಕೌಟುಂಬಿಕ ಸಂಬಂಧಗಳಾದ ಗಂಡ–ಹೆಂಡತಿ, ಅತ್ತೆ–ಸೊಸೆ,

ಮಾವ–ಸೊಸೆ, ಅತ್ತೆ–ಅಳಿಯ, ಅಕ್ಕ–ಭಾವ, ಅಣ್ಣ–ತಮ್ಮ, ಅಕ್ಕ–ತಮ್ಮ, ಅಕ್ಕ–ತಂಗಿ, ಅಣ್ಣ–ತಂಗಿ, ತಂದೆ–ಮಗ (ಮಕ್ಕಳು), ಅಜ್ಜ–ಅಜ್ಜಿ, ಅಣ್ಣ–ಅತ್ತಿಗೆ, ಮಾವ–ಅತ್ತೆ, ಮಾವ–ಅಳಿಯ ಹೀಗೆ ಪ್ರತಿಯೊಂದು ಬಂಧುತ್ವವನ್ನು ಕುರಿತು ವಿವರಿಸುವ ಗಾದೆಗಳು ಸಮುದಾಯಗಳಲ್ಲಿ ಬಳಕೆಯಲ್ಲಿರುವುದನ್ನು ಗುರುತಿಸಬಹುದಾಗಿದೆ.

ಭಾರತೀಯ ಸಮಾಜದಲ್ಲಿನ ಪ್ರತಿಯೊಂದು ಜಾತಿಗೆ ಸಂಬಂಧಿಸಿದಂತೆ ಕೆಲವು ಗಾದೆಗಳಿರುವುದು ಕಂಡುಬರುತ್ತದೆ. ಇವು ಸಮುದಾಯವೊಂದರ ಪರಂಪರೆ, ವೃತ್ತಿ, ಜೀವನಕ್ರಮ ಹೀಗೆ ಅನೇಕ ವಿವರಗಳನ್ನು ಕುರಿತು ವಿವರಿಸುತ್ತಿರುವುದನ್ನು ಗುರುತಿಸಬಹುದಾಗಿದೆ. ಇಲ್ಲಿ ಅಧ್ಯಯನಕ್ಕೆ ಕೇವಲ ಹಂಡಿಜೋಗಿ ಸಮುದಾಯ ಸಂಬಂಧಿಯಾದ ಗಾದೆಗಳ ಕುರಿತು ವಿವರಿಸುವುದು ಪ್ರಮುಖ ಉದ್ದೇಶವಾಗಿರುತ್ತದೆ. ಜೊತೆಗೆ ಹಂಡಿಜೋಗಿ ಸಮುದಾಯದಲ್ಲಿ ಬಳಕೆಯಲ್ಲಿರುವ ಕೆಲವು ಗಾದೆಗಳನ್ನು ಗುರುತಿಸಿ ವಿವರಿಸುವ ಪ್ರಯತ್ನ ಮಾಡಲಾಗುವುದು. ಹಂಡಿಜೋಗಿಗಳು ಭಾಷಿಕವಾಗಿ ಮರಾಠಿ ಮತ್ತು ಕನ್ನಡ ಭಾಷೆಗಳನ್ನು ಕಲಿತು ವ್ಯವಹರಿಸುತ್ತಿರುವುದು ಕಂಡುಬರುತ್ತದೆ. ಹಂಡಿಜೋಗಿ ಸಮುದಾಯ ಕುರಿತು ಸ್ಥಳೀಯ ಇತರೇ ಸಮುದಾಯದಲ್ಲಿ ಬಳಕೆಯಲ್ಲಿರುವ ಕೆಲವು ಗಾದೆಗಳನ್ನು ಸಹ ಇಲ್ಲಿ ಹೆಸರಿಸಲಾಗಿದೆ. ಹಂಡಿಜೋಗಿಗಳಲ್ಲಿ ಕನ್ನಡ ಭಾಷೆಯ ಗಾದೆಗಳು ಹೆಚ್ಚು ಬಳಕೆಯಲ್ಲಿರುವುದು ಕಂಡುಬರುತ್ತದೆ.

ಅಂತಹ ಸಮುದಾಯ ಸಂಬಂಧಿಯಾದ ಕೆಲವು ಪ್ರಮುಖ ಗಾದೆಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ. ಅವುಗಳೆಂದರೆ,

ಕೋಣನ ಮುಂದೆ ಕಿನ್ನೂರಿ ಬಾರಿಸಿದಂಗ

ಕತ್ತೆಗೇನು ಗೊತ್ತು ಕಸ್ತೂರಿ ವಾಸನೆ (ಪರಿಮಳ)

ಜೋಗಿ ಇದ್ದಲ್ಲಿ ಜೋಳಿಗೆ

ಎದ್ದೇನ ಜೋಗಿ ಹೆಗಲಮೇಲೆ ಜೋಳಿಗೆ

ಇದ್ದ ಊರಲ್ಲಿ ಇರಲೊಲ್ಲ, ಬಿದ್ದಗೋಡೆ ಕಟ್ಟೋನಲ್ಲ

ಇದ್ದರೆ ಈ ಊರು, ಹೋದರೆ ಮುಂದಲೂರು

(ಬಿದ್ರೆ ಈ ಊರು, ಎದ್ರೆ ಮುಂದ್ಲೂರು)

ತಿರಿದುಂಬೋ ಜೋಗಿಗೆ ಯಾವೂರಾದ್ರೇನು?

ಜೋಗಿಗೆ ಜೋಗಿ ತಾಕಿದ್ರೆ ಬೂದಿ

ಯೋಗಿ ಪಡೆದದ್ದು ಯೋಗಿಗೆ, ಜೋಗಿ ಪಡೆದದ್ದು ಜೋಗಿಗೆ.

ಮೇಲಿನ ಎಲ್ಲಾ ಗಾದೆಗಳನ್ನು ಗಮನಿಸಿದರೆ ಅನೇಕ ವಿಚಾರಗಳು ದೊರಕುತ್ತವೆ. ಅವು

ಪ್ರಮುಖವಾಗಿ ಹಂಡಿಜೋಗಿ ಸಮುದಾಯದ ಕುಲಸಂಕೇತಗಳಿಗೆ (ಕಿನ್ನೂರಿ, ಜೋಳಿಗೆ) ಸಂಬಂಧಿಸಿದ ವಿವರಗಳನ್ನು ಒಳಗೊಂಡಿರುವುದು ಕಂಡುಬರುತ್ತದೆ. ಜೊತೆಗೆ ಕಿನ್ನೂರಿ ವಾದ್ಯದ ನಾದ (ಸಂಗೀತ)ದ ಮಹತ್ವವನ್ನು ಕುರಿತು ವಿವರಿಸುತ್ತದೆ. ಸಂಗೀತ, ನೃತ್ಯ ಹಾಗೂ ಸಾಹಿತ್ಯದ ಅರಿವು ಇಲ್ಲದವರ ಮುಂದೆ ಕಿನ್ನೂರಿ ವಾದ್ಯ ಹಿಡಿದು ಹಾಡಿದರೆ ಅಂತಹವರಿಗೆ ಆ ಸಾಹಿತ್ಯದ ಪರಿವೇ ಇರುವುದಿಲ್ಲ ಎಂಬುದನ್ನು ವಿವರಿಸುತ್ತದೆ. ಜೊತೆಗೆ ಜೋಗಿಯ ಪರಿಕರವಾದ ಜೋಳಿಗೆಯನ್ನು ಕುರಿತು ಮತ್ತೊಂದು ಗಾದೆ ವಿವರಿಸುವುದು ಕಂಡುಬರುತ್ತದೆ. ಸಂಚಾರದ ಸಂದರ್ಭದಲ್ಲಿ ಜೋಗಿಯು ತನ್ನ ಆಹಾರ ಹಾಗೂ ದವಸ-ಧಾನ್ಯಗಳನ್ನು ಸಂಗ್ರಹಿಸಿಟ್ಟುಕೊಳ್ಳಲು ಅವಶ್ಯಕವಾಗಿ ಬೇಕಾದ ಪರಿಕರವೆಂದರೆ ಜೋಳಿಗೆ. ಜೋಳಿಗೆ ಇಲ್ಲದೆ ಜೋಗಿ ಇರಲು ಸಾಧ್ಯವಿಲ್ಲ. ಜೋಗಿಯೊಬ್ಬ ಊರಾಡಲು ಅಥವಾ ಕಲಾಪ್ರದರ್ಶನ ನೀಡಲು ಹೊರಟನೆಂದರೆ ಅವನ ಜೊತೆಗೆ ಇರಬೇಕಾದ ಅಗತ್ಯ ಪರಿಕರಗಳೆಂದರೆ ಒಂದು ಕಿನ್ನೂರಿವಾದ್ಯ ಮತ್ತೊಂದು ಜೋಳಿಗೆ. ಸಮುದಾಯದಲ್ಲಿ ಜೋಳಿಗೆಯ ಬಗ್ಗೆ ಪೂಜ್ಯನೀಯ ಭಾವನೆ ಇರುವುದು ಕಂಡುಬರುತ್ತದೆ. ಸಮುದಾಯದ ಕುಲ-ಸಂಕೇತವಾದ ಈ ಜೋಳಿಗೆಯನ್ನು ಸಮುದಾಯದ ಸಾಂಸ್ಕೃತಿಕ ಆಚರಣೆಯಾದ ಕುಂಡಲದೀಕ್ಷೆ (ಜೋಗಿದೀಕ್ಷೆ)ಯ ದಿನದಂದು ಮೊದಲು ಧರಿಸುತ್ತಾರೆ. ಅಲ್ಲಿಂದ ಅದು ಸದಾ ಅವರ ಜೊತೆಗೆ ಇರುತ್ತದೆ. ಸತ್ತ ನಂತರವೂ ಸಹ ಸತ್ತ ವ್ಯಕ್ತಿಯ ಹೆಗಲಿಗೆ ಜೋಳಿಗೆಯಿರಿಸಿ ಶವಸಂಸ್ಕಾರ ಮಾಡುವ ಪದ್ಧತಿ ಸಮುದಾಯದಲ್ಲಿರುವುದು ಇಂದಿಗೂ ಕಂಡುಬರುತ್ತದೆ.

ಜೋಗಿಗಳ ಮೂಲವೃತ್ತಿ ಊರಾಡುವುದು, ಹಾಡು ಹೇಳುವುದಾಗಿರುವುದರಿಂದ ಪ್ರತಿನಿತ್ಯ ಅವರು ಬೇರೆ ಬೇರೆ ಊರುಗಳಿಗೆ ಸಂಚಾರ ಹೋಗುವುದು ಸಹಜವಾಗಿರುತ್ತದೆ. ಹಾಗಾಗಿ ಎದ್ದಕೂಡಲೇ ಜೋಳಿಗೆಯನ್ನು ಹೆಗಲಿಗೇರಿಸಿಕೊಂಡು ಹೊರಡುತ್ತಾರೆ. ಅಲೆಮಾರಿಗಳಾದ ಇವರು ಸದಾ ಸಂಚಾರಗಳಾಗಿರುವುದನ್ನು ಗುರುತಿಸಬಹುದಾಗಿದೆ. ಅವರ ಅಲೆಮಾರಿ ಜೀವನಕ್ರಮದ ಮೇಲೆಯೇ ಜನಪದರು ಒಂದು ಗಾದೆ ಕಟ್ಟಿರುವುದು ಕಂಡುಬರುತ್ತದೆ.

ಇದ್ದ ಊರಲ್ಲಿ ಇರಲೊಲ್ಲ,

ಬಿದ್ದಗೋಡೆ ಕಟ್ಟೋನಲ್ಲ.

ಜೋಗಿಯು ಎಂದೂ ಶಾಶ್ವತವಾಗಿ ಒಂದು ನೆಲೆಯಲ್ಲಿ (ಊರಿನಲ್ಲಿ) ನೆಲೆಸುವವನಲ್ಲ ಎಂಬುದನ್ನು ಮೇಲಿನ ಗಾದೆ ವಿವರಿಸುತ್ತದೆ. ಬಿದ್ದಗೋಡೆ ಕಟ್ಟೋನಲ್ಲ ಎಂಬುದು ಜೋಗಿಯ ಸಂಚಾರ ಜೀವನ ಕ್ರಮವನ್ನು ವಿವರಿಸುತ್ತದೆ. ಸ್ಥಳೀಯರು ಇವರ ಜೀವನ ಕ್ರಮ ಕುರಿತು ಈ ಕೆಳಗಿನಂತೆ ವಿವರಿಸುವುದು ಕಂಡುಬರುತ್ತದೆ.

ಒಮ್ಮೆ ಜೋಗಿಗಳೆಲ್ಲರೂ ಸಂಚಾರದಲ್ಲಿದ್ದಾಗ ಯಾವುದೋ ಒಂದು ಊರಿನ ಆಳು ದೇಗುಲದಲ್ಲಿ ಅಂದಿನ ರಾತ್ರಿ ಕಳೆಯಬೇಕಾಯಿತು. ಅದು ಮಳೆಗಾಲದ ಸಮಯವಾದ್ದರಿಂದ ಮೊದಲೇ ಆಳುದೇಗುಲವಾದ್ದರಿಂದ ಇಡೀ ದೇವಾಲಯದ ಮಂಟಪವೆಲ್ಲಾ ಮಳೆಗೆ ಸೋರುತ್ತಿತ್ತು. ಆಗ ಅಲ್ಲಿ

ನೆಲೆಸಿದ ಜೋಗಿಗಳೆಲ್ಲರೂ ನಾಳೆ ಮುಂಜಾನೆ ಎಲ್ಲಾರೂ ಜೋಳಿಗೆಯಿಂದ ಮಣ್ಣು ತಂದು, ಅದನ್ನು ಮುಚ್ಚಿ ಸೋರುವುದನ್ನು ನಿಲ್ಲಿಸಬೇಕೆಂದು ರಾತ್ರಿಯಲ್ಲಾ ಮಾತನಾಡುತ್ತಿದ್ದರು. ಮುಂಜಾನೆ ಬೆಳಗಾದ ಕೂಡಲೇ ತಮ್ಮ ತಮ್ಮ ಜೋಳಿಗೆಗಳನ್ನು ಹೆಗಲಿಗೆ ಹಾಕಿಕೊಂಡು ಮತ್ತೊಂದು ಊರಿಗೆ ಹೊರಟುಹೋದರು. ಹಾಗಾಗಿಯೇ ಸ್ಥಳೀಯರು ಯಾವಾಗಲೂ ಒಂದು ಗಾದೆಯನ್ನು ಬಳಸುತ್ತಾರೆ. ಇದು ಜೋಗೇರಾಟ ಆಯ್ತು. ಅಂದರೆ ಹೇಳಿದ್ದನ್ನು (ಅಂದುಕೊಂಡದ್ದನ್ನು) ಮಾಡದಿರುವುದು. ವಾಸ್ತವವಾಗಿ ಜೋಗಿಗಳು ತಮ್ಮ ಜೀವನ ನಿರ್ವಹಣೆಗಾಗಿ ಊರು ಊರು ಸಂಚರಿಸಬೇಕಾದುದರಿಂದ ಅವರಿಗೆ ಅದು ಸಾಧ್ಯವಾಗಲಿಲ್ಲ. ಹಾಗೆ ಮಾಡಲು ಮುಂದಾದರೆ ಊರು ಊರಲ್ಲಿರುವ ದೇವಾಲಯಗಳನ್ನೆಲ್ಲಾ ದುರಸ್ಥಿಗೊಳಿಸುತ್ತ ಹೊರಡಬೇಕಾಗುತ್ತಿತ್ತು ಎಂಬುದು ಮೇಲಿನ ಗಾದೆಯ ಅರ್ಥ.

ಸಂಚಾರದಲ್ಲಿ ಮನೆ ಮನೆಗೆ ತೆರಳಿ ಹಾಡು ಹೇಳುತ್ತಾ ಆಹಾರ ಹಾಗೂ ದವಸ ಧಾನ್ಯ ಪಡೆಯುವ ಸಂದರ್ಭದಲ್ಲಿ ಸ್ಥಳೀಯರು ಜೋಗಿಯನ್ನು ನಿಮ್ಮ ಊರು ಯಾವುದು? ಎಂದು ಕೇಳಿದರೆ ಅವರ ಉತ್ತರ ಈ ಮಾದರಿಯದಾಗಿರುತ್ತಿತ್ತು. ಅದೇನೆಂದರೆ ಇದ್ರೆ ಈ ಊರು, ಹೋದ್ರೆ ಮುಂದ್ಲೂರು ಎಂದು ತಮ್ಮ ಸಮುದಾಯದ ಅಲೆಮಾರಿ ಜೀವನ ಕ್ರಮವನ್ನು ಕುರಿತು ವಿವರಿಸುತ್ತಿರುವುದು ಕಂಡುಬರುತ್ತದೆ. ಇನ್ನೊಂದು ಗಾದೆ ಬಿದ್ರೆ ಈ ಊರು, ಎದ್ರೆ ಮುಂದ್ಲೂರು. ಇದು ಸಹ ಅಲೆಮಾರಿತನವನ್ನು ಕುರಿತು ವಿವರಿಸುತ್ತದೆ. ಬಿದ್ರೆ ಅಂದರೆ ವಾಸವಿದ್ರೆ (ಮಲಗಿದ್ರೆ) ಈ ಊರು, ಎದ್ರೆ ಅಂದರೆ ಎದ್ದು ಮುಂದಿನ ಊರಿಗೆ ಹೋದರೆ ಅದುವೇ ನಮ್ಮೂರು ಎಂಬುದನ್ನು ವಿವರಿಸುತ್ತದೆ.

ಹಾಡುಗಾರಿಕೆಯ ಸಂದರ್ಭದಲ್ಲಿ ಜೋಗಿಯೇ ತಮ್ಮ ಜೀವನಕ್ರಮವನ್ನು ಕುರಿತು ಈ ಗಾದೆಯನ್ನು ಬಳಸುವುದು ಕಂಡುಬರುತ್ತದೆ.

ತಿರಿದುಂಬೋ ಜೋಗಿಗೆ ಯಾವೂರಾದ್ರೇನು?

ಹಾಡು ಹೇಳಿ ಸ್ಥಳೀಯರಿಂದ ಆಹಾರ ಹಾಗೂ ದವಸ ಧಾನ್ಯಗಳನ್ನು ಪಡೆಯುವುದಕ್ಕೆ ಇಲ್ಲಿ ತಿರಿದು ಉಣ್ಣುವುದು ಎಂದು ವಿವರಿಸಿರುವುದು ಕಂಡುಬರುತ್ತದೆ. ವಾಸ್ತವವಾಗಿ ಹಾಡು ಕತೆಗಳನ್ನು ಹೇಳಿ ಸ್ಥಳೀಯರಿಂದ ಆಹಾರ ಹಾಗೂ ದವಸ ಧಾನ್ಯಗಳನ್ನು ಪಡೆಯುತ್ತಿದ್ದ ಕ್ರಮ ಸಮುದಾಯದಲ್ಲಿ ರೂಢಿಯಲ್ಲಿತ್ತು. ಹಾಗಾಗಿ ಮೇಲಿನ ಗಾದೆ ಬಳಕೆಯಾಗಿರುವುದು ಕಂಡುಬರುತ್ತದೆ.

ಹೀಗೆ ಮೇಲಿನ ಎಲ್ಲಾ ಗಾದೆಗಳು ಹಂಡಿಜೋಗಿ ಸಮುದಾಯದ ಸಾಂಸ್ಕೃತಿಕ ಆಚರಣೆಗಳು, ವೃತ್ತಿ, ಜೀವನಕ್ರಮಕ್ಕೆ ಸಂಬಂಧಿಸಿದ ವಿವರಗಳನ್ನು ಅರಿಯಲು ಸಹಕಾರಿಯಾಗಿರುವುದನ್ನು ಗುರುತಿಸಬಹುದಾಗಿದೆ. ಮರಾಠಿ ಭಾಷಿಕರಾದ ಜೋಗಿಗಳು ಸಮುದಾಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕನ್ನಡದ ಗಾದೆಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ. ಅಂತಹ ಗಾದೆಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ. ಸಮುದಾಯದ ಕೌಟುಂಬಿಕ ಹಾಗೂ ಸಾಮಾಜಿಕ ಸನ್ನಿವೇಶಗಳಲ್ಲಿ ಕನ್ನಡದ

ಅನೇಕ ಗಾದೆಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ. ಅಂತಹ ಕೆಲವು ಪ್ರಮುಖ ಗಾದೆಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

ನಾಯಿ ಬೊಗಳಿದ್ರೆ ದೇವಲೋಕ ಹಾಳಾಗುತ್ತಾ?

ಪಾಪಿ ಸಮುದ್ರ ಹೊಕ್ಕರೂ ಮೊಳಕಾಲುದ್ದ ನೀರು.

ಅತಿ ಆಸೆ ಗತಿಗೇಡು

ಬೆಕ್ಕಿಗೆ ಚೆಲ್ಲಾಟ ಇಲಿಗೆ ಪ್ರಾಣ ಸಂಕಟ

ಕೊಟ್ಟೋನು ಕೋಡಂಗಿ, ಇಸ್ಕಂಡೋನು ಈರಭದ್ರ

ಮಾಡೋದೆಲ್ಲ ಅನಾಚಾರ, ಮನೆ ಮುಂದೆ ಬೃಂದಾವನ

ಅಡ್ಡಗೋಡೆ ಮೇಲೆ ದೀಪ ಇಟ್ಟ ಹಾಗೆ

ಆರಕ್ಕೇರಲಿಲ್ಲ, ಮೂರಕ್ಕೆ ಇಳೀಲಿಲ್ಲ

ಎಣ್ಣೆ ಬಂದಾಗ ಕಣ್ಣು ಮುಚ್ಕಂಡ್ರಂತೆ

ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ

ಜಲಶೋಧಿಸಿ ನೀರು ತರ್ಬೇಕು, ಕುಲಶೋಧಿಸಿ ಹೆಣ್ಣು ತರ್ಬೇಕು

ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ

ತಾಯಿಯಂತೆ ಮಗಳು, ನೂಲಿನಂತೆ ಸೀರೆ

ತಂದೆಯಂತೆ ಮಗ

ದೇವರು ಕೊಟ್ಟರೂ ಪೂಜಾರಿ ಕೊಡಲಿಲ್ಲ

ಹುಟ್ಟು ಹುಟ್ಟುತ್ತ ಅಣ್ಣತಮ್ಮಂದಿರು, ಬೆಳೆ ಬೆಳೆಯುತ್ತ ದಾಯಾದಿಗಳು

ಉಂಡ ಮನೆಗೆ ದ್ರೋಹ ಬಗೆಯಬಾರದು.

ಅಲ್ಪನಿಗೆ ಐಶ್ವರ್ಯ ಬಂದ್ರೆ ಅರ್ಧರಾತ್ರೀಲಿ ಕೊಡೆ ಇಡ್ಸ್ನಂತೆ

ಅಂಬ್ಲಿ ಕುಡಿಯೋನಿಗೆ, ಮೀಸೆ ಇಡಿಯೋನೊಬ್ಬ

ಹಾಡ್ತಾ ಹಾಡ್ತಾ ರಾಗ, ಉಗುಳ್ತಾ ಉಗುಳ್ತಾ ರೋಗ

ಗಂಡ ಹೆಂಡತಿ ಜಗಳದಲ್ಲಿ ಕೂಸು ಬಡವಾಯ್ತು

ಗಂಡ ಹೆಂಡತಿ ಜಗಳ ಉಂಡು ಮಲಗುವ ತನಕ

ಕೋತಿ ತಾನು ತಿಂದು, ಮೇಕೆ ಮೂತಿಗೆ ಒರೆಸಿತ್ತಂತೆ

ಮನೆಗೆ ಮಾರಿ, ಪರರಿಗೆ ಉಪಕಾರಿ

ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು

ಅಟ್ಟ ಮೇಲೆ ಒಲೆ ಉರಿಯಿತು, ಕೆಟ್ಟ ಮೇಲೆ ಬುದ್ಧಿಬಂತು

ಹೆಣ್ಣಿಗೆ ಹೆಣ್ಣೇ ಶತ್ರು

ಹೆತ್ತವರಿಗೆ ಹೆಗ್ಗಣ ಮುದ್ದು

ಹೆಣ್ಣಿಗೆ ಹಠ ಇರಬಾರದು, ಗಂಡಿಗೆ ಚಟ ಇರಬಾರದು

ಎತ್ತಿಗೆ ಜ್ವರ ಬಂದ್ರೆ, ಎಮ್ಮೆಗೆ ಬರೆ ಎಳೆದ್ರಂತೆ

ಉಗುರೀಲೋಗೋದಕ್ಕೆ ಕೊಡ್ಲಿ ತಗೊಂಡ್ರಂತೆ

ಉಪ್ಪು ತಿಂದೋನು ನೀರು ಕುಡಿಯಲೇಬೇಕು

ಮಾತು ಬಲ್ಲವನಿಗೆ ಜಗಳವಿಲ್ಲ, ಊಟ ಬಲ್ಲವನಿಗೆ ರೋಗವಿಲ್ಲ

ಹೋದ್ಯಾ ಪಿಶಾಚಿ ಅಂದ್ರೆ, ಬಂದೇ ಗವಾಕ್ಷಿ ಅಂದ್ರಂತೆ.

ಮಾಡಿದ್ದುಣ್ಣೋ ಮಹಾರಾಯ

ಅಕ್ಕ ಸತ್ತರೆ ಅಮವಾಸೆ ನಿಲ್ಲೋದಿಲ್ಲ

ಅಳಿಯ ಮನೆ ತೊಳಿಯ

ಕರ್ರು ಹೆಣ್ಣು ಕೊಟ್ರೆ, ಅಳಿಯನಿಗೆ ಮನೋರೋಗ

ಯಾರದ್ದೋ ದುಡ್ಡು ಯಲ್ಲಮ್ಮನ ಜಾತ್ರೆ

ಇಟ್ಕಂಡೋಳು ಇರೋತನಕ, ಕಟ್ಕೊಂಡೋಳು ಕೊನೆತನಕ

ಆಟಕ್ಕುಂಟು ಲೆಕ್ಕಕ್ಕಿಲ್ಲ

ಅಡಿಕೆಗೆ ಹೋದ ಮಾನ, ಆನೆ ಕೊಟ್ರೂ ಬರಲ್ಲ.

ಮೀಸೆ ಬಂದೋನಿಗೆ ದೇಶ ಕಾಣಲ್ಲ

ಎತ್ತು ಏರಿಗೆಳದ್ರೆ, ಕೋಣ ಕೆರೆಗೆಳಿತಂತೆ

ಬಾಯಲ್ಲಿ ಆಡಿದ್ದು, ಬೆನ್ನಿಗೆ ಮೂಲ

ಮಾಡಿದವರ ಪಾಪ, ಆಡುವವರ ಬಾಯಲ್ಲಿ

ಹತ್ತು ಕಟ್ಟೋ ಕಡೆ ಒಂದು ಮುತ್ತು ಕಟ್ಟು

ಚಿಂತೆ ಇಲ್ಲದವನಿಗೆ ಸಂತೇಲಿ ನಿದ್ದೆ ಬಂತಂತೆ

ಹಾವು ಸಾಯಬಾರ್ದು, ಕೋಲು ಮುರಿಬಾರ್ದು

ಬೆಳ್ಳಗಿರೋದೆಲ್ಲ ಹಾಲಲ್ಲ

ಹಲ್ಲು ಇದ್ದಾಗ ಕಡ್ಲೆ ತಿನ್ಬೇಕು

ಗಾಳಿ ಬಂದಾಗ ತೂರ್ಕೋಬೇಕು

ಮಾಡಬಾರದ್ದು ಮಾಡಿದರೆ, ಆಗಬಾರದ್ದು ಆಗುತ್ತೆ

ಹಾವಾಡಿಗನಿಗೆ ಹಾವಿನಿಂದ್ಲೇ ಮರಣ

ಅಕ್ಕಿ ಮೇಲೆ ಆಸೆ, ನೆಂಟರ ಮೇಲೆ ಜೀವ

ಇದ್ದದ್ದು ಇದ್ದಂಗೆ ಹೇಳಿದ್ರೆ ಸಿದ್ದಪ್ಪನಿಗೆ ಸಿಟ್ಟು ಬಂತಂತೆ

ಕೋಳಿ ಕೇಳಿ ಸಾಂಬಾರ ಅರೆಯಕ್ಕಾಗುತ್ತಾ?

ಮೂರು ವರುಷದ ಬುದ್ಧಿ ನೂರು ವರುಷದ ತನಕ

ಮಲಗೋಕೆ ಹೋಗಿ ಮಗ ಕೆಟ್ಟನಂತೆ, ಕುಟ್ಟೋಕೆ ಹೋಗಿ ಸೊಸೆ ಕೆಟ್ಟಳಂತೆ

ಕೂತು ಗಂಡು ಕೆಟ್ನಂತೆ, ತಿರಿಗಿ ಹೆಣ್ಣು ಕೆಟ್ಲಂತೆ

ಚಾಡಿಕೋರನಿಗೆ ಊರೆಲ್ಲಾ ನೆಂಟರು.

ಹೀಗೆ ಕನ್ನಡದ ಅನೇಕ ಪ್ರಸಿದ್ಧ ಗಾದೆಗಳು ಹಂಡಿಜೋಗಿ ಸಮುದಾಯದ ಕೌಟುಂಬಿಕ ಮತ್ತು ಸಾಮಾಜಿಕ ಸನ್ನಿವೇಶದಲ್ಲಿ ಬಳಕೆಯಲ್ಲಿರುವುದನ್ನು ಗುರುತಿಸಬಹುದಾಗಿದೆ. ಸಮುದಾಯದಲ್ಲಿನ ಪುರುಷ ಮತ್ತು ಮಹಿಳೆಯರು ಸಂದರ್ಭಕ್ಕೆ ತಕ್ಕಂತೆ ಮೇಲಿನ ಗಾದೆಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ.

**೫.೫. ವ್ಯಕ್ತಿನಾಮಗಳು**

ವ್ಯಕ್ತಿನಾಮಗಳನ್ನು ಭಾಷಿಕ ಘಟಕಗಳೆಂದು ಭಾಷಾವಿಜ್ಞಾನಿಗಳು ಗುರುತಿಸಿದ್ದಾರೆ. ವ್ಯಕ್ತಿನಾಮಗಳು ಸಮುದಾಯವೊಂದರ ಸಾಂಸ್ಕೃತಿಕ ವಿವರ ಅರಿಯಲು ಅಗತ್ಯವಾದ ಆಕರಗಳಾಗಿವೆ. ಒಂದು ಸಂಸ್ಕೃತಿಯ ಚರಿತ್ರೆಗೆ ಸಂಬಂಧಿಸಿದ ಮಹತ್ವದ ಅಂಶಗಳನ್ನು ವ್ಯಕ್ತಿನಾಮಗಳು ವಿವರಿಸುತ್ತವೆ. ವ್ಯಕ್ತಿನಾಮಗಳ ರಾಚನಿಕ ವಿಶ್ಲೇಷಣೆಯ ಮೂಲಕ ಒಂದು ಕಾಲದ ಒಂದು ಸಮುದಾಯದ ಭಾಷೆಯಲ್ಲಾದ ವ್ಯತ್ಯಾಸಗಳನ್ನು ಅರಿಯಬಹುದಾಗಿದೆ. ಸಮುದಾಯವೊಂದರ ಭಾಷಿಕ ಚಹರೆಗಳನ್ನು ಅರಿಯಲು ವ್ಯಕ್ತಿನಾಮಗಳು ಅಗತ್ಯವಾದ ವಿವರಗಳನ್ನು ಒದಗಿಸುತ್ತವೆ. ಸಮುದಾಯವೊಂದರ

ಸಾಂಸ್ಕೃತಿಕ ಆಚರಣೆಗಳಿಗೆ ಸಂಬಂಧಿಸಿದ ಅನೇಕ ಮಹತ್ವದ ಅಂಶಗಳನ್ನು ವ್ಯಕ್ತಿನಾಮಗಳ ಮೂಲಕ ಗುರುತಿಸಿಕೊಳ್ಳಬಹುದಾಗಿದೆ. ಭಾಷಾ ಅಧ್ಯಯನದಲ್ಲಿ ಆಕೃತಿಗಳ ಪರಿಧಿಯಲ್ಲಿ ವ್ಯಕ್ತಿನಾಮಗಳನ್ನು ಅಭ್ಯಸಿಸಲಾಗುತ್ತದೆ. ನಾಮಪದಗಳ ಕಕ್ಷೆಯಲ್ಲಿ ವ್ಯಕ್ತಿನಾಮಗಳನ್ನು ಅಭ್ಯಸಿಸಲಾಗುತ್ತದೆ. ಹೆಸರಿನ ರಚನೆಯ ಸ್ವರೂಪ, ವ್ಯಕ್ತಿನಾಮಗಳ ಪೂರ್ವಪದ, ವಾರ್ಗಿಕ ಘಟಕಗಳನ್ನು ಒಳಗೊಂಡಿರುತ್ತದೆ. ವ್ಯಕ್ತಿನಾಮದ ಪೂರ್ವಪದದಿಂದ ಒಂದು ಸಂಸ್ಕೃತಿ, ಸಮುದಾಯದ ದೈವ, ಆಚರಣೆ, ನಂಬಿಕೆ ಹಾಗೂ ಭಾಷಿಕ ಚಹರೆಗೆ ಸಂಬಂಧಿಸಿದ ಅನೇಕ ವಿವರಗಳನ್ನು ತಿಳಿಯಬಹುದಾಗಿದೆ.

ವ್ಯಕ್ತಿನಾಮಗಳ ರಾಚನಿಕ ವಿಶ್ಲೇಷಣೆಯನ್ನು ಕುರಿತು ಭಾಷಾವಿಜ್ಞಾನಿಗಳು ಹೆಸರಿನಲ್ಲಿರುವ ಘಟಕಗಳನ್ನು ವಿಭಾಗಿಸಿಕೊಂಡು ಅಧ್ಯಯನ ಮಾಡಲು ಪ್ರಯತ್ನಿಸಿದ್ದಾರೆ. ಒಂದು ಹೆಸರು ಒಂದೇ ಘಟಕ ಅಥವಾ ಮೂರು, ನಾಲ್ಕು ಘಟಕಗಳನ್ನು ಒಳಗೊಂಡು ಸಹ ರಚನೆಯಾಗಿರುತ್ತದೆ. ಹಾಗಾಗಿ ವಿದ್ವಾಂಸರು ವ್ಯಕ್ತಿಯ ನಿಜನಾಮವನ್ನು ನಿರ್ದಿಷ್ಟವೆಂತಲೂ ಅದರ ಸಾಮಾನ್ಯ ಘಟಕವಾದ ಅಪ್ಪ, ಅಣ್ಣ, ಅಯ್ಯ, ಗೌಡ, ಪಟೇಲ ಇವುಗಳಿಗೆ ವಾರ್ಗಿಕ ಘಟಕವೆಂತಲೂ ಕರೆದಿದ್ದಾರೆ. ವ್ಯಕ್ತಿನಾಮದ ನಿರ್ಧಿಷ್ಟ ಭಾಗವು ದೈವಸಂಬಧಿ ಇಲ್ಲವೇ ಆಚರಣೆ ಹಾಗೂ ಸಂಸ್ಕೃತಿ ಸಂಬಂಧಿಯಾದ ವಿವರಗಳನ್ನು ಒಳಗೊಂಡಿರುತ್ತದೆ. ಅದುವೇ ಆ ವ್ಯಕ್ತಿಯ ನಿಜನಾಮವಾಗಿರುತ್ತದೆ. ಅಂತಹ ವಾರ್ಗಿಕ ಹಾಗೂ ನಿರ್ದಿಷ್ಟ ಘಟಕಗಳ ನೆಲೆಯಲ್ಲಿ ಹಂಡಿಜೋಗಿ ಸಮುದಾಯದ ವ್ಯಕ್ತಿನಾಮಗಳನ್ನು ಈ ಕೆಳಗಿನಂತೆ ಚರ್ಚಿಸಬಹುದಾಗಿದೆ.

### ವ್ಯಕ್ತಿನಾಮಗಳ ರಾಚನಿಕತೆ

ವ್ಯಕ್ತಿನಾಮಗಳ ರಾಚನಿಕ ಅಧ್ಯಯನದ ಮೂಲಕ ಆಯಾ ಕಾಲದ ಭಾಷಿಕ ಚಹರೆಗಳನ್ನು ಗುರುತಿಸಬಹುದಾಗಿದೆ. ರಾಚನಿಕವಾಗಿ ವ್ಯಕ್ತಿನಾಮಗಳು ನಿರ್ಧಿಷ್ಟ ಮತ್ತು ವಾರ್ಗಿಕ ಘಟಕಗಳಿಂದ ಕೂಡಿರುತ್ತವೆ. ವ್ಯಕ್ತಿನಾಮದಲ್ಲಿ ನಿರ್ಧಿಷ್ಟ ಘಟಕವೇ ಪ್ರಧಾನ ಅಂಗವಾಗಿರುತ್ತದೆ. ಜೊತೆಗೆ ಅದುವೇ ವ್ಯಕ್ತಿಯ ನಿಜನಾಮವಾಗಿರುತ್ತದೆ. ಅಲ್ಲದೆ ವ್ಯಕ್ತಿಯ ಪೂರ್ಣ ಹೆಸರು ಸಹ ಆಗಿರುತ್ತದೆ. ವ್ಯಕ್ತಿನಾಮದ ನಿರ್ಧಿಷ್ಟವು ಮನೆತನದ ಧರ್ಮ, ಹೆಸರಿಟ್ಟವರ ಆಶಯ, ಜೊತೆಗೆ ಸಮುದಾಯದ ಸಂಸ್ಕೃತಿಯನ್ನು ಗುರುತಿಸುತ್ತದೆ. ಸಮುದಾಯವನ್ನು ಇತರೇ ವ್ಯಕ್ತಿಗಳಿಂದ ಪ್ರತ್ಯೇಕಿಸಿ ವ್ಯಕ್ತಿಯನ್ನು ಗುರುತಿಸಲು ಸಂಬೋಧನೆಯಲ್ಲಿ ನಿರ್ಧಿಷ್ಟವು ಸಹಕಾರಿಯಾಗುತ್ತದೆ. ವ್ಯಕ್ತಿನಾಮದ ಈ ನಿರ್ಧಿಷ್ಟ ಭಾಗದಿಂದ ಸಮುದಾಯದ ಸಂಸ್ಕೃತಿ, ದೈವ, ಆಚರಣೆ, ಸಂಪ್ರದಾಯ, ನಂಬಿಕೆ ಮತ್ತು ಭಾಷೆಗೆ ಸಂಬಂಧಿಸಿದ ವಿವರಗಳನ್ನು ಅರಿಯಲು ಸಹಕಾರಿಯಾಗುತ್ತದೆ. ವ್ಯಕ್ತಿನಾಮಗಳು ಭಾಷಿಕ ಘಟಕಗಳಾಗಿರುವಂತೆ ಸಮುದಾಯದ ಸಂಸ್ಕೃತಿಯ ಸಾಧನಗಳಾಗಿರುತ್ತವೆ. ಸಮುದಾಯದ ಸಾಂಸ್ಕೃತಿಕ ಹಾಗೂ ಬಾಷಿಕ ವಿವರಗಳನ್ನು ಒಳಗೊಂಡಿರುವ ವ್ಯಕ್ತಿನಾಮಗಳನ್ನು ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಚನಿಕವಾಗಿ ಈ ಕೆಳಗಿನಂತೆ ವಿಶ್ಲೇಷಿಸಬಹುದಾಗಿದೆ.

ಹಂಡಿಜೋಗಿ ಸಮುದಾಯದ ವ್ಯಕ್ತಿನಾಮಗಳನ್ನು ವಯೋಮಾನದ ಆಧಾರದ ಮೇಲೆ

ಮೂರು ತಲೆಮಾರುಗಳಲ್ಲಿ ಗುರುತಿಸಿಕೊಂಡು, ಆಯಾ ತಲೆಮಾರುಗಳ ಹೆಸರಿನಲ್ಲಾದ ಬದಲಾವಣೆಯನ್ನು ವಾರ್ಗಿಕ ಮತ್ತು ನಿರ್ದಿಷ್ಟಗಳ ಹಿನ್ನೆಲೆಯಲ್ಲಿ ಗುರುತಿಸಲಾಗಿದೆ.

ಸಮುದಾಯದಲ್ಲಿ ಕಂಡುಬರುವ ಮೂರು ತಲೆಮಾರುಗಳಲ್ಲಿನ ಪ್ರಮುಖ ಕೆಲವು ಹೆಸರುಗಳನ್ನು ಮಾದರಿಗಾಗಿ ತೆಗೆದುಕೊಂಡು ಆ ಮೂಲಕ ಸಮುದಾಯದ ಸಂಸ್ಕೃತಿಯ ನಿರ್ವಚನವನ್ನು ಮಾಡಲಾಗುವುದು. ಜೊತೆಗೆ ಸಮುದಾಯದಲ್ಲಿ ಚಾರಿತ್ರಿಕ ವ್ಯಕ್ತಿಗಳಿಗೆ ಸಂಬಂಧಿಸಿದ ಹೆಸರುಗಳು, ದೈವಗಳಿಗೆ ಸಂಬಂಧಿಸಿದ ಹೆಸರುಗಳು, ಸಮುದಾಯದ ಮೂಲ ಪುರುಷರಿಗೆ ಸಂಬಂಧಿಸಿದ ಹೆಸರುಗಳು ಹೇಗೆ ಸ್ಥಾನ ಪಡೆದುಕೊಂಡಿವೆ ಎಂಬುದನ್ನು ಈ ಭಾಗದಲ್ಲಿ ವಿವರಿಸಲಾಗಿದೆ. ಪ್ರಧಾನವಾಗಿ ಮೂರು ತಲೆಮಾರುಗಳ ಪುರುಷ ಮತ್ತು ಮಹಿಳೆಯರ ಹೆಸರುಗಳ ಮಾದರಿಗಳನ್ನು ಆಯ್ದುಕೊಂಡು ಆ ಮೂಲಕ ಸಮುದಾಯದ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಯಾಮಗಳನ್ನು ಗುರುತಿಸಲಾಗುವುದು.

ಸಮುದಾಯದ ಹೆಸರುಗಳಲ್ಲಿ ಕಾಲಾನಂತರದಲ್ಲಿ ವ್ಯಕ್ತಿನಾಮಗಳ ಬಳಕೆಯಲ್ಲಾಗಿರುವ ಬದಲಾವಣೆಗಳನ್ನು ಗುರುತಿಸುವ ಉದ್ದೇಶದಿಂದ ಈ ಕೆಳಗಿನಂತೆ ವಯಸ್ಸಿನ ಆಧಾರದ ಮೇಲೆ ಮೂರು ತಲೆಮಾರುಗಳಲ್ಲಿ ಗುರುತಿಸಿಕೊಳ್ಳಲಾಗಿದೆ.

೧. ಮೊದಲನೇ ತಲೆಮಾರು – ೫೦ ರಿಂದ ೮೦ ವಯಸ್ಸಿನ ಮೇಲ್ಪಟ್ಟವರು)

೨. ಎರಡನೇ ತಲೆಮಾರು (೨೦ ರಿಂದ ೫೦ ವಯಸ್ಸಿನವರು)

೩. ಮೂರನೇ ತಲೆಮಾರು (೫ ರಿಂದ ೨೦ ವಯಸ್ಸಿನವರು)

ಆರಂಭದಲ್ಲಿ ಮೂರು ತಲೆಮಾರುಗಳಲ್ಲಿ ಬಳಕೆಯಲ್ಲಿರುವ ಸಮುದಾಯದ ಪುರುಷ ಮತ್ತು ಮಹಿಳೆಯರ ಹೆಸರುಗಳನ್ನು ಈ ಕೆಳಗಿನಂತೆ ಗುರುತಿಸಿಕೊಳ್ಳಲಾಗಿದೆ.

**ಹಂಡಿಜೋಗಿ ಸಮುದಾಯದ ಮೊದಲನೇ ತಲೆಮಾರಿನ ಪುರುಷರ ಹೆಸರುಗಳು**

ಮಲೆಸಿದ್ದಪ್ಪ

ಜೋಗೇರ ಕೊಳ್ಳಪ್ಪ

ಜೋಗೇರ ಯಲ್ಲಪ್ಪ

ಭೈರಪ್ಪ

ದೊಡ್ಡ ಭೈರಪ್ಪ

ಸಣ್ಣ ಸಿದ್ದಪ್ಪ

ದಳವಾಯಿ ಭರಮಪ್ಪ

ದಳವಾಯಿ ಕೋದಂಡ ರಾಮಪ್ಪ

ದಳವಾಯಿ ರಾಮಸಿದ್ದಪ್ಪ

ಗಣಾಚಾರಿ ಸಿದ್ದಪ್ಪ

ಭಂಡಾರಿ ಸಿದ್ದಪ್ಪ

ಗಣಾಚಾರಿ ಕೊಳ್ಳಪ್ಪ

ಜೋಗೇರ ಪ್ರೇಮನಾಥ

ಅಂಗಡಿ ಶಂಕರನಾಥ

ಗೌಡ್ರು ಯಲ್ಲಪ್ಪ

ದೊಡ್ಡ ಯಲ್ಲಪ್ಪ

ಗೌಡ್ರು ಕೊಳ್ಳಪ್ಪ

ಭಂಗಿ ಸಿದ್ದಪ್ಪ

ಜೋಗೇರ ಗೋಣೆಪ್ಪ

ಬಣಗಾರ ಹನುಮಂತಪ್ಪ

ದಳವಾಯಿ ಅಮೃತಪ್ಪ

ಜೋಗೇರ ಪವಾಡಪ್ಪ

ಜೋಗೇರ ತುಳಸಪ್ಪ

ಸಣ್ಣ ಯಲ್ಲಪ್ಪ

ದಳವಾಯಿ ರತ್ನಪ್ಪ

ಜೋಗೇರ ರೇವಣಸಿದ್ದಪ್ಪ

ಜೋಗೇರ ರಾಮಚಂದ್ರಪ್ಪ

ದಳವಾಯಿ ಕೋದಂಡರಾಮಪ್ಪ

ಶಿವಾಜಿ ದಳವಾಯಿ

ದಳವಾಯಿ ಅರ್ಜುನಪ್ಪ

ಗಣಾಚಾರಿ ಸಿದ್ದಪ್ಪ

ಮೇಲಿನ ವ್ಯಕ್ತಿನಾಮಗಳು ಹಂಡಿಜೋಗಿ ಸಮುದಾಯದ ಮೊದಲನೇ ತಲೆಮಾರಿನ ಪುರುಷರ ಹೆಸರುಗಳಾಗಿವೆ. ಸಮುದಾಯದಲ್ಲಿ ಮೊದಲನೇ ತಲೆಮಾರಿನ ಹೆಸರುಗಳಲ್ಲಿ ಜಾತಿವಾಚಿ ಮತ್ತು ವೃತ್ತಿವಾಚಿ ವಾರ್ಗಿಕಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ.

**ಮಹಿಳೆಯರಲ್ಲಿ (ಮೊದಲನೇ ತಲೆಮಾರು)**

ಜೋಗೇರ ಯಲ್ಲಮ್ಮ

ಕಂಶಿ ದೇವಕ್ಕ

ಜೋಗೇರ ಹುಲಿಗೆಮ್ಮ

ಜೋಗೇರ ಪಕ್ಕೀರಮ್ಮ

ದಳವಾಯಿ ಯಲ್ಲಮ್ಮ

ಜೋಗೇರ ಗಂಗಮ್ಮ

ಜೋಗೇರ ಭೀಮಕ್ಕ

ದಳವಾಯಿ ಹೇಮಕ್ಕ

ಜೋಗೇರ ದ್ಯಾಮಕ್ಕ

ಜೋಗೇರ ಹಿರಿಯಮ್ಮ (ಹಿರಿಯಕ್ಕ)

ಜೋಗೇರ ಮೇಸಮ್ಮ

ಜೋಗೇರ ತುಕ್ಕಮ್ಮ

ಜೋಗೇರ ಗೌರಮ್ಮ

ಜೋಗೇರ ರತ್ನಮ್ಮ

ಜೋಗೇರ ನಾಗಮ್ಮ

ಜೋಗೇರ ಭಗವಂತಮ್ಮ

ಜೋಗೇರ ಸಾಕಮ್ಮ

ಜೋಗೇರ ಬಂಗಾರಜ್ಜಿ

ಜೋಗೇರ ಶಾಂತಬಾಯಿ

ಜೋಗೇರ ರೇಣುಕಮ್ಮ

ಜೋಗೇರ ಜಯಮ್ಮ

ಜೋಗೇರ ತಿಪ್ಪಮ್ಮ

ಹೀಗೆ ಸಮುದಾಯದಲ್ಲಿ ಮಹಿಳೆಯರ ಹೆಸರುಗಳ ಜೊತೆಗೆ ಕೆಲವು ನೆಲೆಗಳಲ್ಲಿ ಜಾತಿವಾಚಿ ಮತ್ತು ವೃತ್ತಿವಾಚಿ ವಾರ್ಗಿಕಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ,

ಮೇಸಾಯಿ

ತುಕ್ಕಯಿ

ತುಳುಸಮ್ಮ

ಫಕ್ಕೀರಮ್ಮ ಹೆಸರುಗಳನ್ನು ಹೊರತುಪಡಿಸಿ ಉಳಿದ ಹೆಸರುಗಳೆಲ್ಲವು ಸಹ ಕನ್ನಡದ ಹೆಸರುಗಳಾಗಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ ವೃತ್ತಿವಾಚಿಯೊಂದಿಗೆ ಮಹಿಳೆಯರ ಹೆಸರುಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ. ಇತರೇ ಸ್ಥಳೀಯ ಸಮುದಾಯದವರು ಜಾತಿವಾಚಿ ವಾರ್ಗಿಕ ಬಳಸಿ ಸಮುದಾಯದ ಪುರುಷ ಮತ್ತು ಮಹಿಳೆಯರ ಹೆಸರುಗಳ ಬಳಕೆ ಮಾಡುತ್ತಿರುವುದು ಕಂಡುಬರುತ್ತದೆ.

**ಹಂಡಿಜೋಗಿ ಸಮುದಾಯದ ಎರಡನೇ ತಲೆಮಾರಿನ ಪುರುಷ ಮತ್ತು ಮಹಿಳೆಯರ ಹೆಸರುಗಳು.**

**ಪುರುಷರ ಹೆಸರುಗಳು**

ರೇವಣ ಸಿದ್ದಪ್ಪ

ಚಂದ್ರಪ್ಪ

ಜನಮೇಜಯ

ಗುರುಮೂರ್ತಿ

ರಾಮಮೂರ್ತಿ

ರಾಮಸ್ವಾಮಿ

ಶಂಕರಪ್ಪ

ಸಾಂಭಶಿವ

ಅಂಜಿನಪ್ಪ

ಹನುಮಂತಪ್ಪ

ರಾಮಕೃಷ್ಣ

ಶಿವಮೂರ್ತಿ

ಪರಮೇಶ

ವಿಜಯೇಂದ್ರ

ಇಂಧೂಧರ

ಸೋಮಶೇಖರ

ಶ್ರೀಧರ

ಪ್ರಭುದೇವ

ತಿಪ್ಪೇಸ್ವಾಮಿ

ಕೊಟ್ರೇಶಪ್ಪ

ನಾಗೇಶ

ಮಹಾದೇವ

ರೇಣುಕಪ್ಪ

ರಾಮಚಂದ್ರ

ದೇವೇಂದ್ರಪ್ಪ

ಅರ್ಜುನಪ್ಪ

ಶಿವಾಜಿ

ಶಿವಶಂಕರ

ನಾಗೇಂದ್ರಪ್ಪ

ಭಕ್ತಪ್ರಹ್ಲಾದ

ರಘುಪತಿ

ರಘುನಾಥ

ಶ್ರೀನಿವಾಸ

ಚಂದ್ರಶೇಖರ

ಈ ಮೇಲಿನ ಪುರುಷರ ಹೆಸರುಗಳಲ್ಲಿ ಕೆಲವು ಹೆಸರುಗಳಿಗೆ ಬಳಕೆಯ ನೆಲೆಯಲ್ಲಿ ವೃತ್ತಿವಾಚಿ,

ಜಾತಿವಾಚಿ, ವಾರ್ಗಿಕಗಳು ಬಳಕೆಯಲ್ಲಿರುವುದನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ,

ಸಾಂಭಶಿವ ದಳವಾಯಿ

ದಳವಾಯಿ ಅಂಜಿನಪ್ಪ

ದಳವಾಯಿ ರಾಮಕೃಷ್ಣ

ದಳವಾಯಿ ರಾಮಮೂರ್ತಿ

ದಳವಾಯಿ ಗುರುಮೂರ್ತಿ

ದಳವಾಯಿ ರಾಮಚಂದ್ರ

ದಳವಾಯಿ ಹನುಮಂತಪ್ಪ

ದಳವಾಯಿ ಶಿವಾಜಿ ಮೊದಲಾದ ಹೆಸರುಗಳನ್ನು ಗುರುತಿಸಬಹುದಾಗಿದೆ.

**ಹಂಡಿಜೋಗಿ ಸಮುದಾಯದ ಎರಡನೇ ತಲೆಮಾರಿನ ಮಹಿಳೆಯರ ಹೆಸರುಗಳು**

ಸಮುದಾಯದಲ್ಲಿನ ಎರಡನೇ ತಲೆಮಾರಿನ ಮಹಿಳೆಯರ ಹೆಸರುಗಳು ಕನ್ನಡ ಪರಿಸರದಲ್ಲಿನ ಮಹಿಳೆಯರ ಹೆಸರುಗಳಾಗಿರುವುದು ಕಂಡುಬರುತ್ತದೆ. ಸಮುದಾಯದ ಮಹಿಳೆಯ ಹೆಸರುಗಳ ಮೇಲೆ ಪ್ರಾದೇಶಿಕ ದೈವಗಳ ಪ್ರಭಾವವಾಗಿರುವುದನ್ನು ಗುರುತಿಸಬಹುದಾಗಿದೆ. ಈ ಕೆಳಗೆ ಹೆಸರಿಸಿದ ಮಹಿಳೆಯರ ಹೆಸರುಗಳ ಪೂರ್ವದಲ್ಲಿ ಸಮುದಾಯದ ಹೆಸರಿನೊಂದಿಗೆ (ಜೋಗೇರು) ಇತರೇ ಸಮುದಾಯದವರು ಬಳಕೆ ಮಾಡುವುದು ಕಂಡುಬರುತ್ತದೆ. ಹಂಡಿಜೋಗಿ ಸಮುದಾಯದಲ್ಲಿ ಕೇವಲ ಹೆಸರಿನೊಂದಿಗೆ ಸಂಬೋಧಿಸುವುದನ್ನು ಗುರುತಿಸಬಹುದಾಗಿದೆ.

ಮಂಜುಳ

ಪವಿತ್ರ

ಶಾರದಮ್ಮ

ಸರೋಜ

ಸಾವಿತ್ರಮ್ಮ

ಶಕುಂತಲ

ಗೀತಾ

ಭವಾನಿ

ಸರಸ್ವತಿ

ಕಮಲಮ್ಮ

ಕವಿತ

ಯಶೋಧಮ್ಮ

ಲಕ್ಷ್ಮೀ

ಗೌರಮ್ಮ

ಭದ್ರಮ್ಮ

ಜಯಮ್ಮ

ಸುಮಂಗಳ

ಅಂಜಿನಮ್ಮ

ಸವಿತ

ಹೇಮಾವತಿ

ವಾಣಿ

ಕೊಟ್ರಮ್ಮ

ಮಮತ

ಸೋಮಕ್ಕ

ಅಶ್ವಿನಿ

ವಿಮಲಾಕ್ಷಿ

ಕುಸುಮ

ಸಾಕಮ್ಮ

ಮಾಲಾಶ್ರೀ

**ಹಂಡಿಜೋಗಿ ಸಮುದಾಯದ ಮೂರನೇ ತಲೆಮಾರಿನ ಪುರುಷ ಮತ್ತು ಮಹಿಳೆಯರ ಹೆಸರುಗಳು**

ಹಂಡಿಜೋಗಿ ಸಮುದಾಯದ ಮೂರನೇ ತಲೆಮಾರಿನ ಪುರುಷ ಮತ್ತು ಮಹಿಳೆಯರ ಹೆಸರುಗಳ ಮೇಲೆ ಆಧುನಿಕತೆಯ ಪ್ರಭಾವವಾಗಿರುವುದನ್ನು ಗುರುತಿಸಬಹುದಾಗಿದೆ. ಜೊತೆಗೆ ಸಮುದಾಯದ ಪುರುಷ ಮತ್ತು ಮಹಿಳೆಯರ ಹೆಸರುಗಳ ಅಂತ್ಯದಲ್ಲಿ ವೃತ್ತಿವಾಚಿ ಹಾಗೂ ಜಾತಿವಾಚಿ ವಾರ್ಗಿಕಗಳ ಬಳಕೆ ಮೂರನೇ ತಲೆಮಾರಿನಲ್ಲಿಯೂ ಮುಂದುವರೆದಿರುವುದನ್ನು ಗುರುತಿಸಬಹುದಾಗಿದೆ.

ರಾಖೇಶ್ ದಳವಾಯಿ

ಶಶಿ ದಳವಾಯಿ

ಪೃಥ್ವಿ ದಳವಾಯಿ

ನಾಗರಾಜ ದಳವಾಯಿ

ಪ್ರದೀಪ್ ದಳವಾಯಿ

ಸಂಧ್ಯಾ ಮದುರ್‌ಕೋರ್

ಬಸವರಾಜ ಗಣಾಚಾರಿ

ವೀರೇಶ್ ಪಾಟೀಲ್

ದೀಪಾ ದಳವಾಯಿ

ವಿದ್ಯಾಧರ ಪಾಟೀಲ್

ಉತ್ಸವ್ ದಳವಾಯಿ

ಪಲ್ಲವಿ ಪ್ರಭಳ್ಕರ್

ಸೌಮ್ಯ ಪ್ರಭಳ್ಕರ್

ಲಕ್ಷ್ಮೀ ಪ್ರಭಳ್ಕರ್

ವರುಣ್ ದಳವಾಯಿ

ಕಾವೇರಿ ದಳವಾಯಿ

ಹರೀಶ್ ದಳವಾಯಿ

ಮೌನೇಶ್ ಬಣಗಾರ್

ಪ್ರಶಾಂತ್ ದಳವಾಯಿ

ಮಲ್ಲೇಶ ದಳವಾಯಿ

ಕಿರಣ್ ದಳವಾಯಿ

ಸುರೇಶ್ ದಳವಾಯಿ

ಆಶಾಲತಾ ದಳವಾಯಿ

ಕೊಟ್ರೇಶ ದಳವಾಯಿ

ಮಮತಾ ದಳವಾಯಿ

ಶ್ರೀಧರ ದಳವಾಯಿ

ರಾಜೇಶ್ ಭಂಡಾರಿ

ವಿಶ್ವನಾಥ ಭಂಡಾರಿ

ಪ್ರಜ್ವಲ್ ದಳವಾಯಿ ಮೊದಲಾದ ಹೆಸರುಗಳನ್ನು ಗುರುತಿಸಬಹುದಾಗಿದೆ.

### ೫.೫.೧. ವ್ಯಕ್ತಿನಾಮಗಳ ವರ್ಗೀಕರಣ

ಹಂಡಿಜೋಗಿ ಸಮುದಾಯದ ವ್ಯಕ್ತಿನಾಮಗಳನ್ನು ಅವುಗಳಲ್ಲಿರುವ ನಿರ್ದಿಷ್ಟ ಮತ್ತು ವಾರ್ಗಿಕ ಘಟಕಗಳ ಸ್ವರೂಪದ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ವರ್ಗೀಕರಣ ಮಾಡಿಕೊಳ್ಳಲಾಗಿದೆ. ಹಂಡಿಜೋಗಿ ಸಮುದಾಯದ ವ್ಯಕ್ತಿನಾಮಗಳು ಸಮುದಾಯದ ಸಾಂಸ್ಕೃತಿಕ ಆಚರಣೆಗಳು, ಮತ ಧರ್ಮ, ದೈವಗಳಿಗೆ ಸಂಬಂಧಿಸಿದಂತೆ ಅನೇಕ ಮಾಹಿತಿಗಳನ್ನು ವಿವರಿಸುವ ಪ್ರಧಾನ ಆಕರಗಳಾಗಿವೆ. ವ್ಯಕ್ತಿನಾಮಗಳ ವಾರ್ಗಿಕಗಳನ್ನು ಗಮನಿಸಿ ಈ ಕೆಳಗಿಂತೆ ವರ್ಗೀಕರಿಸಿಕೊಳ್ಳಲಾಗಿದೆ.

೧. ಸಂಬಂಧವಾಚಿ

೨. ಜಾತಿವಾಚಿ

೩. ವೃತ್ತಿವಾಚಿ

೪. ದೈವವಾಚಿ

ಎಂದು ಪ್ರಮುಖವಾಗಿ ೪ ವಿಧದಲ್ಲಿ ವರ್ಗೀಕರಿಸಿಕೊಂಡು ಸಮುದಾಯದಲ್ಲಿನ ವ್ಯಕ್ತಿನಾಮಗಳ ಸಾಮಾಜಿಕ ಹಾಗೂ ಸಾಂಸ್ಕೃತಿಕ ಆಯಾಮಗಳನ್ನು ವಿವರಿಸಲಾಗುವುದು. ಸಾಮಾಜಿಕ ಸ್ತರ ಘಟಕಗಳಾದ ಲಿಂಗ, ವಯಸ್ಸು, ವೃತ್ತಿ (ಸಾಮಾಜಿಕ ಸ್ಥಾನಮಾನ), ಹುದ್ದೆ ಇವುಗಳ ಹಿನ್ನೆಲೆಯಲ್ಲಿ ವ್ಯಕ್ತಿನಾಮಗಳ ಸಾಮಾಜಿಕ ಆಯಾಮಗಳನ್ನು ಕುರಿತು ವಿವರಿಸಲಾಗುವುದು. ಹಂಡಿಜೋಗಿಗಳು ಕನ್ನಡೇತರ ಸಮುದಾಯವಾದರೂ ಇವರಲ್ಲಿ ಕನ್ನಡದ ಹೆಸರುಗಳು ಪುರುಷ ಮತ್ತು ಮಹಿಳೆಯರಲ್ಲಿ ಸ್ಥಾನ ಪಡೆದುಕೊಂಡಿರುವುದು ಕಂಡುಬರುತ್ತದೆ. ಉದಾ: ಸಿದ್ಧಪ್ಪ, ಭರಮಪ್ಪ, ಯಲ್ಲಪ್ಪ, ಅಂಜಿನಪ್ಪ ಮೊದಲಾದವು.

**ಸಂಬಂಧವಾಚಿ**

ಹಂಡಿಜೋಗಿ ಸಮುದಾಯದ ವ್ಯಕ್ತಿನಾಮಗಳು ಕನ್ನಡದ ಹೆಸರುಗಳಾಗಿರುವುದು ಕಂಡುಬರುತ್ತದೆ. ಸಮುದಾಯದ ಪ್ರತಿಯೊಂದು ಹೆಸರುಗಳಲ್ಲಿ ಬಂಧುಸೂಚಿ ವಾರ್ಗಿಕಗಳನ್ನು ಗುರುತಿಸಬಹುದಾಗಿದೆ. ಕನ್ನಡದ ಬಂಧುಸೂಚಿಗಳಾದ ಅಪ್ಪ, ಅಯ್ಯ, ಅಣ್ಣ, ಅವ್ವ, ಅಮ್ಮ, ಅಕ್ಕ, ಅಜ್ಜಿ, ಅಜ್ಜ ರೂಪಗಳು ವ್ಯಕ್ತಿನಾಮಗಳಲ್ಲಿ ಸ್ಥಾನ ಪಡೆದುಕೊಂಡಿರುವುದನ್ನು ಗುರುತಿಸಬಹುದಾಗಿದೆ. ಮೇಲಿನ ಸಂಬಂಧವಾಚಿ ವಾರ್ಗಿಕಗಳಿಂದ ಕೂಡಿದ ಸಮುದಾಯದ ವ್ಯಕ್ತಿನಾಮಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

**೧. ನಿರ್ದಿಷ್ಟ + ಬಂಧುವಾಚಿ = ವ್ಯಕ್ತಿನಾಮ**

ಸಿದ್ದ + ಅಪ್ಪ = ಸಿದ್ದಪ್ಪ

ಭೈರ + ಅಪ್ಪ = ಭೈರಪ್ಪ

ಸಿದ್ದ + ಅಯ್ಯ = ಸಿದ್ದಯ್ಯ

ರಾಮು + ಅಣ್ಣ = ರಾಮಣ್ಣ

ರಾಮು + ಅಪ್ಪ = ರಾಮಪ್ಪ

ಕೊಳ್ಳ + ಅಪ್ಪ = ಕೊಳ್ಳಪ್ಪ

ಯಲ್ಲ + ಅಪ್ಪ = ಯಲ್ಲಪ್ಪ

ಗೋಣಿ + ಅಪ್ಪ = ಗೋಣೆಪ್ಪ

ಹುಲುಗ + ಅಪ್ಪ = ಹುಲುಗಪ್ಪ

ರೇಣುಕ + ಅಪ್ಪ = ರೇಣುಕಪ್ಪ

ಪವಾಡ + ಅಪ್ಪ = ಪವಾಡಪ್ಪ

ಅಂಜಿನಿ + ಅಪ್ಪ = ಅಂಜಿನಪ್ಪ

ದೇವೇಂದ್ರ + ಅಪ್ಪ = ದೇವೇಂದ್ರಪ್ಪ

ನಾಗೇಂದ್ರ + ಅಪ್ಪ = ನಾಗೇಂದ್ರಪ್ಪ

ಚಂದ್ರ + ಅಪ್ಪ = ಚಂದ್ರಪ್ಪ

ಭೈರ + ಅಣ್ಣ = ಭೈರಣ್ಣ

ಸಿದ್ದ + ಅಣ್ಣ = ಸಿದ್ದಣ್ಣ

ಅಮೃತ + ಅಪ್ಪ = ಅಮೃತಪ್ಪ

ಉಡುಚ + ಅಪ್ಪ = ಉಡುಚಪ್ಪ

ಶಂಕರ + ಅಪ್ಪ = ಶಂಕರಪ್ಪ

ಅರ್ಜುನ + ಅಪ್ಪ = ಅರ್ಜುನಪ್ಪ

ಹನುಮಂತ + ಅಪ್ಪ = ಹನುಮಂತಪ್ಪ

ಬಂಗಾರ + ಅಜ್ಜ = ಬಂಗಾರಜ್ಜ

ತುಳುಜ + ಅಪ್ಪ = ತುಳುಜಪ್ಪ

ರತ್ನ + ಅಪ್ಪ = ರತ್ನಪ್ಪ

ಇದೇ ರೀತಿ ಸಮುದಾಯದ ಮಹಿಳೆಯರ ಹೆಸರುಗಳಲ್ಲಿ ಕಂಡುಬರುವ ಸಂಬಂಧವಾಚಿ ವಾರ್ಗಿಕಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ಹೇಮ + ಅಕ್ಕ = ಹೇಮಕ್ಕ

ಭೀಮ + ಅಕ್ಕ = ಭೀಮಕ್ಕ

ಯಲ್ಲ + ಅಮ್ಮ = ಯಲ್ಲಮ್ಮ

ಸಿದ್ದ + ಅಮ್ಮ = ಸಿದ್ದಮ್ಮ

ಗಂಗ + ಅಮ್ಮ = ಗಂಗಮ್ಮ

ಹುಲಿಗಿ + ಅಮ್ಮ = ಹುಲಿಗೆಮ್ಮ

ಫಕ್ಕೀರ + ಅಮ್ಮ = ಫಕ್ಕೀರಮ್ಮ

ಮೇಸ + ಅಮ್ಮ = ಮೇಸಮ್ಮ

ತುಕ್ಕ + ಅಮ್ಮ = ತುಕ್ಕಮ್ಮ

ಶಾಂತ + ಬಾಯಿ = ಶಾಂತಬಾಯಿ

ಗೌರಿ + ಅಮ್ಮ = ಗೌರಮ್ಮ

ಯಲ್ಲ + ಅವ್ವ = ಯಲ್ಲವ್ವ

ಧ್ಯಾಮ + ಅಕ್ಕ = ದ್ಯಾಮಕ್ಕ

ಭೀಮ + ಅಜ್ಜಿ = ಭೀಮಜ್ಜಿ

ರತ್ನ + ಅಮ್ಮ = ರತ್ನಮ್ಮ

ನಾಗ + ಅಮ್ಮ = ನಾಗಮ್ಮ

ಬಂಗಾರ + ಅಮ್ಮ = ಬಂಗಾರಮ್ಮ

ಭಗವಂತ + ಅಮ್ಮ = ಭಗವಂತಮ್ಮ

ತಿಪ್ಪ + ಅಮ್ಮ = ತಿಪ್ಪಮ್ಮ

ಜಯ + ಅಮ್ಮ = ಜಯಮ್ಮ

ಮಂಗಳ + ಅಮ್ಮ = ಮಂಗಳಮ್ಮ

ಶಿವ + ಅಮ್ಮ = ಶಿವಮ್ಮ

ಕಮಲ + ಅಮ್ಮ = ಕಮಲಮ್ಮ

ದೇವಿ + ಅಕ್ಕ = ದೇವಕ್ಕ

ದೇವಿ + ಅಮ್ಮ = ದೇವಮ್ಮ

ರೇಣುಕ + ಅಮ್ಮ = ರೇಣುಕಮ್ಮ

ಹಿರಿಯ + ಅಕ್ಕ = ಹಿರಿಯಕ್ಕ

ಬಸವ + ಅಮ್ಮ = ಬಸಮ್ಮ

ಭಾಗ್ಯ + ಅಮ್ಮ = ಭಾಗ್ಯಮ್ಮ

ಶಾಂತ + ಅಮ್ಮ = ಶಾಂತಮ್ಮ

ದುರುಗ + ಅಮ್ಮ = ದುರುಗಮ್ಮ

ಚಂದ್ರ + ಅಮ್ಮ = ಚಂದ್ರಮ್ಮ

ಬಂಗಾರ + ಅಜ್ಜಿ = ಬಂಗಾರಜ್ಜಿ

ಈ ಮೇಲಿನ ಹೆಸರುಗಳನ್ನು ಗಮನಿಸಿದರೆ ಅನೇಕ ಅಂಶಗಳು ಗೋಚರಿಸುತ್ತವೆ. ಮೇಲಿನ ಪುರುಷ ಮತ್ತು ಮಹಿಳೆಯ ಹೆಸರುಗಳು ಸಮುದಾಯದ ಮೊದಲನೇ ಮತ್ತು ಎರಡನೇ ತಲೆಮಾರಿನ ಪುರುಷ ಹಾಗೂ ಮಹಿಳೆಯರ ಹೆಸರುಗಳಾಗಿರುತ್ತವೆ. ಮೇಲಿನ ಬಹುತೇಕ ಹೆಸರುಗಳು ಕನ್ನಡದವೇ ಆಗಿದೆ. ಇವುಗಳಲ್ಲಿ ಕೆಲವು ಹೆಸರುಗಳು ಮಾತ್ರ ಕನ್ನಡದ ಬಂಧುಸೂಚಿ ಹಾಗೂ ಸಮುದಾಯದ ಮೂಲ ಭಾಷಿಕ ಘಟಕವನ್ನು ನಿರ್ದಿಷ್ಟದಲ್ಲಿ ಹೊಂದಿ ರಚನೆಗೊಂಡಿರುವುದನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ,

**ಮಹಿಳೆಯರಲ್ಲಿ**

ಮೇಸ + ಅಮ್ಮ

ತುಕ್ಕ + ಅಮ್ಮ

ತುಳಜ + ಅಮ್ಮ ಎಂಬವುಗಳಾಗಿವೆ.

**ಪುರುಷರಲ್ಲಿ**

ತುಳುಸ + ಅಪ್ಪ

ರತ್ನ + ಅಪ್ಪ

ಸಮುದಾಯದಲ್ಲಿ ಬಂಧುಸೂಚಿ ವಾರ್ಗಿಕಗಳ ಬಳಕೆ ಸಮುದಾಯದಲ್ಲಿ ಮೊದಲನೇ ಮತ್ತು ಎರಡನೇ ತಲೆಮಾರುಗಳಲ್ಲಿ ಮಾತ್ರ ಕಂಡುಬರುತ್ತದೆ. ಮೂರನೇ ತಲೆಮಾರಿನ ಪುರುಷ ಮತ್ತು ಮಹಿಳೆಯರ ಹೆಸರುಗಳಲ್ಲಿ ಸಂಬಂಧವಾಚಿ ವಾರ್ಗಿಕಗಳು ಬಳಕೆ ಇಲ್ಲದಿರುವುದು ಕಂಡುಬರುತ್ತದೆ. ಮೂರನೇ ತಲೆಮಾರಿನ ಹೆಸರು ಸಂಪೂರ್ಣವಾಗಿ ಆಧುನೀಕರಣ ಗೊಂಡಿರುವುದನ್ನು ಗುರುತಿಸಬಹುದಾಗಿದೆ.

ಜೊತೆಗೆ ಸಮುದಾಯದಲ್ಲಿ ಮೂಲಭಾಷೆಯ ಒಂದೇ ನಿರ್ದಿಷ್ಟದಿಂದ ಕೂಡಿದ ವ್ಯಕ್ತಿನಾಮಗಳಿರುವುದು ಕಂಡುಬರುತ್ತದೆ. ಅವುಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

ಶಿವಾಜಿ

ರತ್ನಾಜಿ

ರತ್ನಜ

ಮೇಸಾಯಿ

ತುಕ್ಕಾಯಿ

ಬ್ರಹ್ಮೋಜಿ

ಸಿದ್ದೋಜಿ

ಹಂಡಿಜೋಗಿ ಸಮುದಾಯದ ಎರಡನೇ ತಲೆಮಾರಿನ ಪುರುಷರ ಹೆಸರುಗಳು ಎರಡೆರಡು ನಿರ್ದಿಷ್ಟಗಳಿಂದ ಕೂಡಿರುವುದು ಕಂಡುಬರುತ್ತದೆ. ಸಮುದಾಯದಲ್ಲಿನ ಈ ಮಾದರಿಯ ಅಧಿಕ ಹೆಸರುಗಳು ಶೈವ ಮತ ಪ್ರಧಾನವಾಗಿರುವುದು ಕಂಡುಬರುತ್ತದೆ. ಅಂತಹ ಎರಡು ನಿರ್ದಿಷ್ಟಗಳಿಂದ ಕೂಡಿದ ವ್ಯಕ್ತಿನಾಮಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

**ನಿರ್ಧಿಷ್ಟ + ನಿರ್ದಿಷ್ಟ = ವ್ಯಕ್ತಿನಾಮ**

ಸಾಂಭ + ಶಿವ = ಸಾಂಭಶಿವ

ರಾಮ + ಸ್ವಾಮಿ = ರಾಮಸ್ವಾಮಿ

ರಾಮ + ಮೂರ್ತಿ = ರಾಮಮೂರ್ತಿ

ಗುರು + ಮೂರ್ತಿ = ಗುರುಮೂರ್ತಿ

ರಾಮ + ಕೃಷ್ಣ = ರಾಮಕೃಷ್ಣ

ಕೋದಂಡ + ರಾಮ = ಕೋದಂಡರಾಮ

ಚಂದ್ರ + ಶೇಖರ = ಚಂದ್ರಶೇಖರ

ಶಿವ + ಶಂಕರ = ಶಿವಶಂಕರ

ರಾಮ + ಚಂದ್ರ = ರಾಮಚಂದ್ರ

ಪ್ರಭು + ದೇವ = ಪ್ರಭುದೇವ

ರಘು + ಪತಿ = ರಘುಪತಿ

ಶಿವ + ಮೂರ್ತಿ = ಶಿವಮೂರ್ತಿ

ನಾಗ + ಇಂದ್ರ = ನಾಗೇಂದ್ರ

ದೇವ + ಇಂದ್ರ = ದೇವೇಂದ್ರ

ತಿಪ್ಪೇ + ರುದ್ರ = ತಿಪ್ಪೇರುದ್ರ

ಇಂದೂ + ಧರ = ಇಂದೂಧರ

ಸೋಮ + ಶೇಖರ = ಸೋಮಶೇಖರ

ಪರಮ + ಈಶ = ಪರಮೇಶ

ಜಗತ್ + ಈಶ = ಜಗದೀಶ

ವಿಜಯ + ಇಂದ್ರ = ವಿಜಯೇಂದ್ರ

ಈ ಮೇಲಿನ ಹೆಸರುಗಳನ್ನು ಗಮನಿಸಿದರೆ ಕೆಲವು ಅಂಶಗಳು ಗೋಚರಿಸುತ್ತವೆ. ಹೆಸರಿನ ಎರಡೂ ಭಾಗದಲ್ಲಿರುವ ನಿರ್ಧಿಷ್ಟಗಳಲ್ಲಿ ಹೆಚ್ಚಿನವುಗಳು ದೈವ ಸಂಬಂಧಿಯಾದವುಗಳಾಗಿವೆ. ಮೇಲಿನ ಹೆಸರುಗಳಲ್ಲಿ ಹೆಚ್ಚಿನವು 'ಶಿವ'ನಿಗೆ ಸಂಬಂಧಿಸಿದವುಗಳಾಗಿವೆ. ಒಟ್ಟಾರೆ ಎರಡೂ ನಿರ್ಧಿಷ್ಟಗಳು ದೈವಪ್ರಧಾನವಾದ ಘಟಕಗಳನ್ನು ಒಳಗೊಂಡಿರುವುದು ಕಂಡುಬರುತ್ತದೆ. ಈ ಮಾದರಿಯ ವ್ಯಕ್ತಿನಾಮಗಳನ್ನು ಎರಡನೇ ತಲೆಮಾರಿನ ಪುರುಷರ ಹೆಸರುಗಳಲ್ಲಿ ನೋಡಬಹುದಾಗಿದೆ.

**ದೈವವಾಚಿ**

ಹಂಡಿಜೋಗಿ ಸಮುದಾಯದ ಪುರುಷರ ಹೆಸರುಗಳೆಲ್ಲವೂ ಸಹ ಸಮುದಾಯದ ಕುಲ-ದೈವಗಳ ಹೆಸರುಗಳಾಗಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ ಜನಿಸಿದ ಪ್ರತಿಯೊಬ್ಬ ಗಂಡುಮಕ್ಕಳಿಗೆ ತಮ್ಮ ಸಮುದಾಯದ ಕುಲದೈವಗಳ ಹೆಸರುಗಳನ್ನು ನಾಮಕರಣ ಮಾಡುವ ಪದ್ದತಿ ಸಮುದಾಯದಲ್ಲಿ ರೂಢಿಯಲ್ಲಿರುವುದನ್ನು ಕಾಣಬಹುದಾಗಿದೆ. ಈ ಪರಂಪರೆ ಸಮುದಾಯದ ಮೊದಲನೆ ಮತ್ತು ಎರಡನೇ ತಲೆಮಾರಿನವರಲ್ಲಿ ಕಂಡುಬರುತ್ತದೆ. ಹಂಡಿಜೋಗಿಗಳು ತಮ್ಮ ಸಮುದಾಯದ ಕುಲ ದೈವವಾದ ಭೈರವನ ಹೆಸರನ್ನು ಸಮುದಾಯದಲ್ಲಿ ಜನಿಸುವ ಪ್ರತಿಯೊಬ್ಬ ಗಂಡು ಮಕ್ಕಳಿಗೂ ನಾಮಕರಣ ಮಾಡಲಾಗುತ್ತದೆ. ನುಂಕೆಮಲೆ ಸಿದ್ದೇಶ್ವರನ ಆರಾಧಕರಾದ ಇವರು ಕುಟುಂಬದಲ್ಲಿ ಜನಿಸಿದ ಪ್ರತಿಯೊಂದು ಗಂಡುಮಕ್ಕಳಿಗೆ ಸಿದ್ದ, ಸಿದ್ದಪ್ಪ, ಸಿದ್ದೇಶ ಎಂದು ನಾಮಕರಣ ಮಾಡುವ ಪದ್ಧತಿ ಇಂದಿಗೂ ಕಂಡುಬರುತ್ತದೆ. ಸಮುದಾಯದಲ್ಲಿ ಭಾನುವಾರ ಜನಿಸಿದ ಮಕ್ಕಳಿಗೆ ಸಿದ್ದಪ್ಪ, ಸಿದ್ದಮ್ಮ ಎಂದು ನಾಮಕರಣ ಮಾಡುತ್ತಾರೆ. ಭಾನುವಾರ ಇದು ಭೈರವನ ವಾರವಾಗಿರುತ್ತದೆ. ಸಮುದಾಯದಲ್ಲಿ ಮಂಗಳವಾರ ಹಾಗೂ ಶುಕ್ರವಾರ ಹೆಣ್ಣು ಮಗಳು ಹುಟ್ಟಿದರೆ ಅವರಿಗೆ ಯಲ್ಲಮ್ಮ, ಲಕ್ಷ್ಮೀ, ಹುಲಿಗೆಮ್ಮ, ರೇಣುಕಮ್ಮ ಎಂದು ನಾಮಕರಣ ಮಾಡುವ ಪದ್ದತಿ ರೂಢಿಯಲ್ಲಿದೆ. ನಂತರ ಹಂಡಿಜೋಗಿಗಳು ನಾಥಪಂಥೀಯ ಅನುಯಾಯಿ

(ಶಿಷ್ಯರು)ಗಳಾಗಿರುವುದು ಸಮುದಾಯದಲ್ಲಿ ನಾಥಪಂಥದ ಪ್ರವರ್ತಕರಾದ ಗೋರಖನಾಥ ಮತ್ತು ಮಚ್ಚೇಂದ್ರನಾಥನ ಹೆಸರುಗಳನ್ನು ನಾಮಕರಣ ಮಾಡುವ ಪದ್ಧತಿಯು ಕಂಡುಬರುತ್ತದೆ. ಪ್ರಮುಖವಾಗಿ ಹಂಡಿಜೋಗಿಗಳು ತಮ್ಮ ಸಮುದಾಯದಲ್ಲಿಯೇ ಒಳಪಂಗಡಗಳಿಗೆ ಸಂಬಂಧಿಸಿದಂತೆ ಒಂದೊಂದು ಕುಲದೈವಗಳ ಆರಾಧನೆಯನ್ನು ಮಾಡುವ ಪದ್ಧತಿ ರೂಢಿಯಲ್ಲಿರುವುದು ಕಂಡುಬರುತ್ತದೆ. ಪ್ರತ್ಯೇಕ ಒಳಪಂಗಡದವರು ತಮ್ಮ ತಮ್ಮ ಮನೆದೈವಗಳ ಹೆಸರುಗಳನ್ನು ತಪ್ಪದೇ ತಮ್ಮ ಮಕ್ಕಳುಗಳಿಗೆ ನಾಮಕರಣ ಮಾಡುವ ಕ್ರಮ ರೂಢಿಯಲ್ಲಿದೆ. ಈ ಪದ್ಧತಿಯು ಸಮುದಾಯದ ಮೊದಲನೇ ಮತ್ತು ಎರಡನೇ ತಲೆಮಾರಿನವರಲ್ಲಿ ಅಧಿಕವಾಗಿ ಕಂಡುಬರುತ್ತದೆ. ಅಂತಹ ಉಪಪಂಗಡಗಳು ಮತ್ತು ಅವುಗಳ ಕುಲದೈವಗಳನ್ನು (ಮನೆದೇವರು) ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ನುಂಕೆಮಲೆ ಸಿದ್ದೇಶ್ವರ ಹಾಗೂ ನಾಥಪಂಥದ ಪ್ರವರ್ತಕರಾದ ಗುರು ಗೋರಖನಾಥ ಮತ್ತು ಮಚ್ಚೇಂದ್ರನಾಥರು ಇಡೀ ಸಮುದಾಯದ ಆರಾಧ್ಯ ದೈವವಾಗಿದ್ದಾರೆ. ಸಮುದಾಯದ ಪ್ರತಿಯೊಂದು ಉಪ-ಕುಲ-ಬಳಿಗಳವರೂ ಸಹ ಮೇಲಿನ ಮೂರು ದೈವಗಳ ಭಕ್ತರಾಗಿದ್ದಾರೆ. ಉಪಪಂಗಡಕ್ಕೆ ಸಂಬಂಧಿಸಿದ ದೈವಗಳ ವಿವರಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

**ದಳವಾಯಿ ಮನೆತನ–** ಮಲೆಸಿದ್ದ, ಸವದತ್ತಿ ಯಲ್ಲಮ್ಮ, ಗುಂಡುಕಲ್ಲು ಭರಮ

**ಹರಪೀರ (ಪಾಟೀಲ)** (ಕುಲಗೌಡ) – ಸವದತ್ತಿ ಯಲ್ಲಮ್ಮ, ಹುಲಿಮಾನಪ್ಪ

**ಪ್ರಭಾಳ್ಕರ್ ಪಂಗಡ** – ಮೇಸಾಯಿ, ತುಕ್ಕಾಯಿ

**ಮದುರ್‌ಕೋರ್ ಪಂಗಡ** – ಮೂಸಂಡಿಸಿದ್ದ, ಹುಲಿಗಿಯ ಹುಲಿಗೆಮ್ಮ, ಭರಮಪ್ಪ, ಕುಪ್ಪನಕೇರಿ ಆಂಜನೇಯ

**ಭಂಡಾರಿ ಮನೆತನದವರು** – ಯಲ್ಲಮ್ಮ, ನುಂಕೆಮಲೆಸಿದ್ದ, ಅಂಗಳ ಭರಮ, ವದ್ದೀಕೆರೆ ಸಿದ್ದಪ್ಪ.

**ಶೆವಾನ್‌ಗೋರ್‍ಯಾ (ಗುಣಾಚಾರಿ)** – ಗಂಗಮ್ಮ, ಯಲ್ಲಮ್ಮ, ಕಾಲಭೈರವ.

ಹೀಗೆ ಸಮುದಾಯದಲ್ಲಿ ತಮ್ಮ ತಮ್ಮ ಉಪಪಂಗಡಗಳಿಗೆ ಸಂಬಂಧಿಸಿದಂತೆ ತಮ್ಮ ಮನೆತನದ ಕುಲದೈವಗಳ ಆರಾಧನೆಯನ್ನು ಮಾಡುವ ಪದ್ಧತಿ ರೂಢಿಯಲ್ಲಿದೆ. ಮೇಲಿನ ದೈವಗಳಲ್ಲಿ ಪ್ರತಿಯೊಂದು ಪಂಗಡದವರೂ ಸಹ ಸಿದ್ದಪ್ಪನ (ಭೈರವನ) ಆರಾಧನೆ ಮಾಡುತ್ತಿರುವುದು ಕಂಡುಬರುತ್ತದೆ. ಹಂಡಿಜೋಗಿ ಸಮುದಾಯದ ಎಲ್ಲಾ ಪುರುಷ ಮತ್ತು ಮಹಿಳೆಯರ ಹೆಸರುಗಳು ಮೇಲಿನ ದೈವಗಳ ಹೆಸರುಗಳಾಗಿರುವುದು ಕಂಡುಬರುತ್ತದೆ. ಇದರ ಜೊತೆಗೆ ಹಂಡಿಜೋಗಿಗಳು ತಮ್ಮ ಸಮುದಾಯದ ಸಂಸ್ಕೃತಿಯ ಮೂಲಪುರುಷರಾದ ಅರ್ಜುನ, ಶಿವ (ಪರಮೇಶ್ವರ) ಇವರ ಹೆಸರುಗಳನ್ನು ನಾಮಕರಣ ಮಾಡಿರುವ ಪದ್ಧತಿಯನ್ನು ಗುರುತಿಸಬಹುದಾಗಿದೆ. ಅಂತಹ ಸಮುದಾಯದ ದೈವಸಂಬಂಧಿ ಹೆಸರುಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

**ದೇವವಾಚಿ ಹೆಸರುಗಳು ಪುರುಷರಲ್ಲಿ**

ಸಿದ್ದಪ್ಪ

ಮಲೆಸಿದ್ದಪ್ಪ

ಭೈರಪ್ಪ

ಭರಮಪ್ಪ

ಯಲ್ಲಪ್ಪ

ಅರ್ಜುನಪ್ಪ

ಪರಮೇಶಪ್ಪ

ಹುಲಿಗೆಮ್ಮ

ಅಂಜಿನಪ್ಪ

ರಾಮಸಿದ್ದಪ್ಪ

ರೇವಣಸಿದ್ದಪ್ಪ

ರೇಣುಕಪ್ಪ

ಶಂಕರಪ್ಪ

ಕೊಳ್ಳಪ್ಪ

ಮೇಲಿನ ಹೆಸರುಗಳನ್ನು ಗಮನಿಸಿದರೆ ಹೆಸರಿನ ನಿರ್ಧಿಷ್ಟ ಭಾಗದಲ್ಲಿ ದೈವಗಳ ಹೆಸರು ಸ್ಥಾನ ಪಡೆದಿರುವುದನ್ನು ಪ್ರತಿಯೊಬ್ಬರ ಹೆಸರಿನಲ್ಲೂ ಗುರುತಿಸಬಹುದಾಗಿದೆ. ಮೇಲಿನ ಹೆಸರಿನಲ್ಲಿರುವ ಸಿದ್ದ, ಭೈರ, ಯಲ್ಲ, ಹುಲಗ, ರೇಣುಕ, ಶಂಕರ ಇವೆಲ್ಲವೂ ಸಮುದಾಯದ ದೈವದ ಹೆಸರುಗಳಾಗಿರುವುದು ಕಂಡುಬರುತ್ತದೆ. ಈ ಮೇಲಿನ ಹೆಸರಿನ ಒಬ್ಬ ವ್ಯಕ್ತಿ ಸಮುದಾಯದ ಪ್ರತಿಯೊಂದು ಕುಟುಂಬಗಳಲ್ಲಿ ಇರುವುದನ್ನು ಗುರುತಿಸಬಹುದಾಗಿದೆ. ಸಮುದಾಯದಲ್ಲಿ ದೈವಗಳ ಹೆಸರುಗಳನ್ನು ನಾಮಕರಣ ಮಾಡುವ ಪದ್ದತಿ ಮೂರನೇ ತಲೆಮಾರಿಗೆ ನಿಂತು ಹೋಗಿರುವುದನ್ನು ಗುರುತಿಸಬಹುದಾಗಿದೆ.

**ಮಹಿಳೆಯರಲ್ಲಿ**

ಯಲ್ಲಮ್ಮ

ಸಿದ್ದಮ್ಮ

ಗಂಗಮ್ಮ

ಗೌರಮ್ಮ

ಹುಲಿಗೆಮ್ಮ

ಮೇಸಮ್ಮ

ತುಕ್ಕಮ್ಮ

ರೇಣುಕಮ್ಮ

ತಿಪ್ಪಮ್ಮ

ಶಿವಮ್ಮ

ರತ್ನಮ್ಮ

ದೇವಮ್ಮ

ಸಮುದಾಯದಲ್ಲಿನ ಮಹಿಳೆಯ ಹೆಸರುಗಳಲ್ಲೂ ಸಹ ದೈವಗಳ ಹೆಸರುಗಳನ್ನು ಗುರುತಿಸಬಹುದಾಗಿದೆ. ಜೊತೆಗೆ ಮಹಿಳೆಯ ಹೆಸರುಗಳಲ್ಲಿ

ಮೇಸ + ಅಮ್ಮ = ಮೇಸಮ್ಮ

ತುಕ್ಕ + ಅಮ್ಮ = ತುಕ್ಕಮ್ಮ

ತುಳುಸ + ಅಮ್ಮ = ತುಳಸಮ್ಮ ಎಂಬ ಹೆಸರುಗಳು ಸಮುದಾಯದ ಮೂಲ ಭಾಷಿಕ ನೆಲೆಯಲ್ಲಿ ಸ್ಥಾನ ಪಡೆದುಕೊಂಡಿರುವುದನ್ನು ಗುರುತಿಸಬಹುದಾಗಿದೆ. ಮುಸ್ಲಿಂನ ನಿರ್ಧಿಷ್ಟ ಭಾಗದಿಂದ ಸಮುದಾಯದ ಪುರುಷ ಮತ್ತು ಮಹಿಳೆಯರ ಹೆಸರು ರಚನೆಗೊಂಡಿರುವುದನ್ನು ಕಾಣಬಹುದಾಗಿದೆ. ಇದು ಸಮುದಾಯದಲ್ಲಿನ ಮೊಹರಂ ಆಚರಣೆಯ ಭಾಗವಾಗಿ ಸ್ಥಾನ ಪಡೆದಿರುವುದನ್ನು ಸಮುದಾಯದಲ್ಲಿನ ವಕ್ತೃಗಳು ವಿವರಿಸುವುದನ್ನು ಕಾಣಬಹುದಾಗಿದೆ.

ಪಕ್ಕೀರ + ಅಮ್ಮ

ಫಕ್ಕೀರ + ಅಪ್ಪ ಮುಂತಾದವು

ಹೀಗೆ ಹಂಡಿಜೋಗಿ ಸಮುದಾಯದ ಪ್ರತಿಯೊಂದು ನೆಲೆಗಳಲ್ಲೂ ಸಹ ಈ ಮಾದರಿಯ ಹೆಸರುಗಳನ್ನು ಪುರುಷ ಹಾಗೂ ಮಹಿಳೆಯರಲ್ಲಿ ಗುರುತಿಸಬಹುದಾಗಿದೆ. ನಂತರ ಸಮುದಾಯದಲ್ಲಿ ಮಹಿಳೆಯರ ಹೆಸರುಗಳಲ್ಲಿ 'ಸಿದ್ದಮ್ಮ' (ಸಿದ್ದ+ಅಮ್ಮ) ತುಂಬಾ ವಿರಳವಾಗಿರುವುದು ಕಂಡುಬರುತ್ತದೆ. ಮಹಿಳೆಯರ ಹೆಸರುಗಳೆಲ್ಲವೂ ಸಹ ಕನ್ನಡದ ಹೆಸರುಗಳಾಗಿರುವುದನ್ನು ಗುರುತಿಸಬಹುದಾಗಿದೆ.

**ವೃತ್ತಿವಾಚಿ**

ಹಂಡಿಜೋಗಿ ಸಮುದಾಯದಲ್ಲಿ ವೃತ್ತಿವಾಚಿಯೊಂದಿಗೆ ಕೂಡಿದ ಅನೇಕ ಹೆಸರುಗಳನ್ನು ಗುರುತಿಸಬಹುದಾಗಿದೆ. ಸಮುದಾಯಲ್ಲಿನ ವ್ಯಕ್ತಿಗಳು ಮಾಡುವ ವೃತ್ತಿಯ ಹಿನ್ನೆಲೆಯಲ್ಲಿ ಇವುಗಳು ಸ್ಥಾನ ಪಡೆದಿರುವುದನ್ನು ಗುರುತಿಸಬಹುದಾಗಿದೆ. ಇವುಗಳಲ್ಲಿ ಕೆಲವು ಕನ್ನಡದ ವೃತ್ತಿವಾರ್ಗಿಕ

ಗಳಾಗಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ ಪ್ರತಿಯೊಂದು ಕುಟುಂಬವು ಸಹ ಸಾಂಸ್ಕೃತಿಕವಾಗಿ ಒಂದೊಂದು ವೃತ್ತಿಯನ್ನು ಮಾಡುತ್ತಿರುವುದು ಕಂಡುಬರುತ್ತದೆ. ಆ ವೃತ್ತಿಯ ನೆಲೆಯಲ್ಲಿ ಅವರನ್ನು ಸಮುದಾಯದಲ್ಲಿ ಗುರುತಿಸಲಾಗುತ್ತದೆ.

ಹಂಡಿಜೋಗಿಗಳಲ್ಲಿ ಗೌಡ, ಪಾಟೀಲ, ದಳವಾಯಿ, ಗಣಚಾರಿ, ಭಂಡಾರಿ ಹಾಗೂ ಪೂಜಾರಿ ಮುಂತಾದ ವೃತ್ತಿವಾಚಿ ವಾರ್ಗಿಕಗಳಿಂದ ಕೂಡಿದ ಹೆಸರುಗಳು ಕಂಡುಬರುತ್ತವೆ. ಸಮುದಾಯದ ಮೊದಲನೇ ತಲೆಮಾರಿನ ಪುರುಷ ಹಾಗೂ ಮಹಿಳೆಯರ ಹೆಸರುಗಳಲ್ಲಿ ವೃತ್ತಿವಾಚಿ ವಾರ್ಗಿಕಗಳು ಬಳಕೆಯಲ್ಲಿರುವುದನ್ನು ಗುರುತಿಸಬಹುದಾಗಿದೆ. ಸಮುದಾಯದಲ್ಲಿ ಈ ಪರಂಪರೆ ತಲೆಮಾರಿನಿಂದ ತಲೆಮಾರಿಗೆ ಕೆಲವು ವ್ಯತ್ಯಾಸಗಳೊಂದಿಗೆ ಇಂದಿಗೂ ಸಮುದಾಯದಲ್ಲಿ ಬಳಕೆಯಲ್ಲಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ ಕುಟುಂಬಗಳು ಮಾಡುತ್ತಿರುವ ವೃತ್ತಿ ಅವರ ಮನೆತನದ ಹೆಸರಾಗುವುದರ ಜೊತೆಗೆ ಆ ವೃತ್ತಿಗಳನ್ನು ಮಾಡುವವರ ಎಲ್ಲಾ ಪುರುಷ ಮಹಿಳೆಯರ ಹೆಸರಿನಲ್ಲಿಯೂ ವೃತ್ತಿವಾಚಿ ವಾರ್ಗಿಕ ಸ್ಥಾನ ಪಡೆದುಕೊಂಡಿರುವುದನ್ನು ನೋಡಬಹುದಾಗಿದೆ. ತಲೆಮಾರುಗಳ ಹಿನ್ನೆಲೆಯಲ್ಲಿ ವೃತ್ತಿವಾಚಿ ವಾರ್ಗಿಕಗಳನ್ನು ಹೊಂದಿರುವ ಸಮುದಾಯದ ಪುರುಷ ಹಾಗೂ ಮಹಿಳೆಯರ ಹೆಸರುಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ಗೌಡರ ಯಲ್ಲಪ್ಪ

ಗೌಡರ ಕೊಳ್ಳಪ್ಪ

ದಳವಾಯಿ ದೊಡ್ಡ ಗೋಣೆಪ್ಪ

ದಳವಾಯಿ ಕೋದಂಡರಾಮಪ್ಪ

ದಳವಾಯಿ ಗೋಣೆಪ್ಪ

ಬಣಗಾರ ಅಂಜಿನಪ್ಪ

ಬಣಗಾರ ಹನುಮಂತಪ್ಪ

ಬಣಗಾರ ಅಮೃತಪ್ಪ

ಗೌಡರ ರೇವಣ್ಣ

ದಳವಾಯಿ ರಘುನಾಥ

ದಳವಾಯಿ ಸಿದ್ದಣ್ಣ

ಬಣಗಾರ ರಾಮಣ್ಣ

ದಳವಾಯಿ ರಾಮಪ್ಪ

ದಳವಾಯಿ ರಾಮಸಿದ್ದಪ್ಪ

ದಳವಾಯಿ ಸಣ್ಣರಾಮಪ್ಪ

ಗಣಾಚಾರಿ ಕೊಳ್ಳಪ್ಪ

ದಳವಾಯಿ ರಾಮಕೃಷ್ಣಪ್ಪ

ದಳವಾಯಿ ಭರಮಪ್ಪ

ಗಣಾಚಾರಿ ಸಿದ್ದಪ್ಪ

ಭಂಡಾರಿ ಸಿದ್ದಪ್ಪ

ದಳವಾಯಿ ರಾಮಮೂರ್ತಿ

ಪೂಜಾರಿ ಸಿದ್ದಪ್ಪ

ದಳವಾಯಿ ಹನುಮಂತಪ್ಪ

ಗೌಡ ಸಿದ್ದಯ್ಯ

ಗೌಡ ಸಿದ್ದಪ್ಪ

ದಳವಾಯಿ ಅಮೃತಪ್ಪ

ದಳವಾಯಿ ಚಂದ್ರಪ್ಪ

ದಳವಾಯಿ ರಾಮಪ್ಪ

ದಳವಾಯಿ ಅರ್ಜುನಪ್ಪ

ದಳವಾಯಿ ರಾಮಸ್ವಾಮಿ

ದಳವಾಯಿ ಅರ್ಜುನ

ಬಣಗಾರ ಸಣ್ಣ ಹನುಮಂತಪ್ಪ

ದಳವಾಯಿ ಸಿದ್ದಪ್ಪ

ಗೌಡರ ಸಿದ್ದಯ್ಯ

ಭಂಡಾರಿ ಸಿದ್ದಪ್ಪ

ಪೂಜಾರಿ ಸಿದ್ದಪ್ಪ

ಗಣಾಚಾರಿ ಸಿದ್ದಪ್ಪ

ದಳವಾಯಿ ಸಿದ್ದಣ್ಣ

ದಳವಾಯಿ ಗುರುಮೂರ್ತಿ

ದಳವಾಯಿ ಸಾಂಭಶಿವ

**ವೃತ್ತಿವಾಚಿ ಮಹಿಳೆಯರ ಹೆಸರುಗಳು (ಮೊದಲನೇ ತಲೆಮಾರು)**

ದಳವಾಯಿ ಯಲ್ಲಮ್ಮ

ಗೌಡರ ರೇಖಮ್ಮ

ಗೌಡರ ಯಲ್ಲಮ್ಮ

ದಳವಾಯಿ ಶಕುಂತಲಾ

ದಳವಾಯಿ ಸುಶೀಲಮ್ಮ

ಗೌಡರ ಶಾಂತಾದೇವಿ

ದಳವಾಯಿ ಪದ್ಮಾವತಿ

ದಳವಾಯಿ ರೇಣುಕಮ್ಮ

ದಳವಾಯಿ ನಾಗಮ್ಮ

ಈ ಮೇಲಿನ ಹೆಸರುಗಳನ್ನು ಗಮನಿಸಿದರೆ ಹಂಡಿಜೋಗಿಗಳು ಸಮುದಾಯದಲ್ಲಿ ನಿರ್ವಹಿಸುತ್ತಿರುವ ಹುದ್ದೆ ಅಥವಾ ವೃತ್ತಿ ಏನೆಂದು ಗೋಚರಿಸುತ್ತದೆ. ಜೊತೆಗೆ ಸಮುದಾಯದಲ್ಲಿನ ಮಹಿಳೆಯರ ಹೆಸರುಗಳಲ್ಲೂ ವೃತ್ತಿವಾಚಿ ವಾರ್ಗಿಕಗಳಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ ಈ ಪರಂಪರೆ ಮೊದಲನೆ ತಲೆಮಾರಿನ ಪುರುಷ ಮತ್ತು ಮಹಿಳೆಯ ಹೆಸರುಗಳಲ್ಲಿ ಅಧಿಕವಾಗಿಯೂ, ಕಡಿಮೆ ಪ್ರಮಾಣದಲ್ಲಿ ಎರಡನೇ ತಲೆಮಾರಿನ ಪುರುಷ ಮಹಿಳೆಯರ ಹೆಸರುಗಳಲ್ಲಿ ಸ್ಥಾನ ಪಡೆದಿರುವುದನ್ನು ಗುರುತಿಸಬಹುದಾಗಿದೆ. ಇಲ್ಲಿ ದೈವಸಂಬಂಧಿ ಹೆಸರುಗಳ ಜೊತೆಗೆ ವೃತ್ತಿವಾಚಿ ವಾರ್ಗಿಕಗಳಿರುವುದು ಕಂಡುಬರುತ್ತದೆ. ಆಧುನಿಕ ಸಂದರ್ಭದಲ್ಲಿ ಸಮುದಾಯದ ಮೂರನೇ ತಲೆಮಾರಿನ ಪುರುಷ ಮತ್ತು ಮಹಿಳೆಯ ಹೆಸರುಗಳ ಬಳಕೆಯ ನೆಲೆಯಲ್ಲಿ ವೃತ್ತಿವಾಚಿ ವಾರ್ಗಿಕಗಳು ಸ್ಥಾನ ಪಡೆಯುತ್ತಿರುವುದನ್ನು ಗುರುತಿಸಬಹುದಾಗಿದೆ.

ಹೀಗೆ ಹಂಡಿಜೋಗಿಗಳ ವ್ಯಕ್ತಿನಾಮಗಳ ಜೊತೆಯಲ್ಲಿ ವೃತ್ತಿವಾಚಿ ವಾರ್ಗಿಕಗಳು ಬಳಕೆಯಾಗುತ್ತಿರುವುದನ್ನು ಗುರುತಿಸಬಹುದಾಗಿದೆ. ಸಮುದಾಯದಲ್ಲಿ ಕುಟುಂಬದವರು ಮಾಡುವ ವೃತ್ತಿ ಆ ಕುಟುಂಬದವರ ಹೆಸರುಗಳಲ್ಲಿ ಸ್ಥಾನ ಪಡೆದಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ ಕೆಲವು ಕುಟುಂಬದವರು ಪೂಜಾರಿಕೆ ವೃತ್ತಿಯನ್ನು ಮಾಡುವುದರೊಂದಿಗೆ ದೇವರ ಉತ್ಸವ ಪೂಜೆ ಕಾರ್ಯಕ್ರಮಗಳಲ್ಲಿ ಪೂಜಾ ಸೇವೆಯನ್ನು ಮಾಡುವ ಮನೆತನದವರಿಗೆ 'ಪೂಜಾರಿ' ಅಥವಾ

ಭಂಡಾರಿ ಎಂದು ಕರೆಯುತ್ತಾರೆ. ಭಂಡಾರಿಯ ಮುಖ್ಯ ವೃತ್ತಿ ಪೂಜಾರಿಕೆಯಾಗಿರುತ್ತದೆ. ನಂತರ ಕುಟುಂಬದಲ್ಲಿ ನ್ಯಾಯಪಂಚಾಯ್ತಿ ಇನ್ನಿತರೆ ಕಾರ್ಯಕ್ರಮಗಳ ಮುಖಂಡತ್ವವನ್ನು ವಹಿಸಿಕೊಂಡವನನ್ನು ಗೌಡ, (ಪಾಟೀಲ) ಎಂದು ಸಮುದಾಯದಲ್ಲಿ ಕರೆಯುತ್ತಾರೆ. ಇವನ ಮನೆತನದವರು ಸಮುದಾಯದಲ್ಲಿ 'ಗೌಡಿಕೆ' ವೃತ್ತಿಯನ್ನು ನಿರ್ವಹಿಸಿಕೊಂಡು ವಂಶಪಾರಂಪರ್ಯವಾಗಿ ಬಂದಿರುವುದರಿಂದ ಅವರ ಮನೆತನದವರಿಗೆ ಗೌಡರು (ಪಾಟೀಲರು) ಎಂದು ಸ್ಥಳೀಯವಾಗಿ ಕರೆಯುತ್ತಾರೆ. ಇದರ ಜೊತೆಗೆ ಸಮುದಾಯದ ನ್ಯಾಯ ಪಂಚಾಯಿತಿಗಳನ್ನು ತೀರ್ಮಾನಿಸುವಲ್ಲಿ ಗೌಡನಿಗೆ ಸಹಾಯಕನಾಗಿ 'ದಳವಾಯಿ' ಇರುತ್ತಾನೆ. ಇವನ ಮನೆತನದವರಿಗೆ ದಳವಾಯಿ 'ವಂಶಸ್ಥರು' ಎಂದು ಸಮುದಾಯದಲ್ಲಿ ಕರೆಯುತ್ತಾರೆ. ಇನ್ನೂ ಗಣಾಚಾರಿ ಮನೆತನದವರು ಸಮುದಾಯದಲ್ಲಿ ನಡೆಯುವ ನ್ಯಾಯಪಂಚಾಯ್ತಿ, ಧಾರ್ಮಿಕ ಕಾರ್ಯಕ್ರಮಗಳಿಗೆ ಸಮುದಾಯದ ಎಲ್ಲರನ್ನು ಒಟ್ಟುಗೂಡಿಸುವ ಕೆಲಸವನ್ನು ಇವನು ಮಾಡುತ್ತಾನೆ. ಹಾಗಾಗಿ ಇವನ ಮನೆತನದವರಿಗೆ ಗಣಾಚಾರಿಯವರು ಎಂದು ಹೆಸರಿಸುತ್ತಾರೆ. ಹೀಗೆ ಸಮುದಾಯದಲ್ಲಿ ಒಂದೊಂದು ಮನೆತನದವರು ಸಾಮಾಜಿಕ ಸಂರಚನೆಯಲ್ಲಿ ಒಂದೊಂದು ವೃತ್ತಿಗಳನ್ನು ನಿರ್ವಹಿಸುತ್ತಿರುವುದು ಕಂಡುಬರುತ್ತದೆ.

ಸಮುದಾಯದಲ್ಲಿ ಮನೆತನದ ಪುರುಷರ ವೃತ್ತಿಯು ಕುಟುಂಬದಲ್ಲಿನ ಮಹಿಳೆಯರ ಹೆಸರುಗಳಲ್ಲೂ ಬಳಕೆಯಾಗುತ್ತಿರುವುದು ಕಂಡುಬರುತ್ತದೆ. ಮಹಿಳೆಯರ ಹೆಸರುಗಳಲ್ಲಿ ಕಂಡುಬರುವ ವೃತ್ತಿವಾಚಿ ವಾರ್ಗಿಕಗಳು ತಮ್ಮ ಸಮುದಾಯದ ಕುಟುಂಬದ ಪುರುಷರ ವೃತ್ತಿಯ ಭಾಗವಾಗಿ ಸ್ಥಾನ ಪಡೆದುಕೊಂಡಿರುವುದನ್ನು ಗುರುತಿಸಬಹುದಾಗಿದೆ.

ಹಂಡಿಜೋಗಿ ಸಮುದಾಯದ ಮೂರನೇ ತಲೆಮಾರಿನ ಪುರುಷ ಮತ್ತು ಮಹಿಳೆಯರ ಹೆಸರುಗಳಲ್ಲಿ ವೃತ್ತಿವಾಚಿ ವಾರ್ಗಿಕಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ. ಈ ಪ್ರಕ್ರಿಯೆ ಮಕ್ಕಳ ಹೆಸರುಗಳಲ್ಲೂ ಸಹ ಕಂಡುಬರುತ್ತದೆ. ಸಮುದಾಯದ ಮೂರನೇ ತಲೆಮಾರಿನ ಪುರುಷ ಹಾಗೂ ಮಹಿಳೆಯರ ಹೆಸರುಗಳಲ್ಲಿನ ನಿರ್ಧಿಷ್ಟವೂ ಸಂಪೂರ್ಣವಾಗಿ ಆಧುನೀಕರಣದ ಪ್ರಭಾವಕ್ಕೆ ಒಳಗಾಗಿರುವುದು ಕಂಡುಬರುತ್ತದೆ. ದಾಖಲೆಗಳಲ್ಲಿ ಕೇವಲ ನಿರ್ಧಿಷ್ಟ ಭಾಗದಲ್ಲಿನ ಹೆಸರನ್ನು ಮಾತ್ರ ದಾಖಲಿಸುತ್ತಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ ಬಳಕೆಯ ನೆಲೆಯಲ್ಲಿ ಮಕ್ಕಳ ಹೆಸರುಗಳಲ್ಲಿ ವೃತ್ತಿವಾಚಿ ವಾರ್ಗಿಕಗಳು ಕಂಡುಬರುತ್ತಿರುವುದನ್ನು ಗುರುತಿಸಬಹುದಾಗಿದೆ. ಕುಟುಂಬದಲ್ಲಿನ ಪ್ರತಿಯೊಂದು ಮಕ್ಕಳ ಹೆಸರುಗಳ ಮುಂದೆ ವೃತ್ತಿವಾಚಿ ವಾರ್ಗಿಕಗಳನ್ನು ಬಳಸುವ ಪ್ರಕ್ರಿಯೆ ಇತ್ತೀಚೆಗೆ ಕಂಡುಬರುತ್ತದೆ ಎಂದು ಸಮುದಾಯದ ವಕ್ತೃಗಳು ವಿವರಿಸುತ್ತಾರೆ. ಅಂತಹ ವೃತ್ತಿವಾಚಿ ವಾರ್ಗಿಕಗಳಿಂದ ರಚನೆಗೊಂಡಿರುವ ಮಕ್ಕಳ ಹಾಗೂ ಯುವಕ-ಯುವತಿಯರ ಹೆಸರುಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ರಾಖೇಶ್ ದಳವಾಯಿ

ಶಶಿ ದಳವಾಯಿ

ಪೃಥ್ವಿ ದಳವಾಯಿ

ನಾಗರಾಜ ದಳವಾಯಿ

ಪ್ರದೀಪ್ ದಳವಾಯಿ

ಸಂಧ್ಯಾ ಮದುರ್‌ಕೋರ್

ಬಸವರಾಜ ಗಣಾಚಾರಿ

ವೀರೇಶ್ ಪಾಟೀಲ್

ದೀಪಾ ದಳವಾಯಿ

ವಿದ್ಯಾಧರ ಪಾಟೀಲ್

ಉತ್ಸವ್ ದಳವಾಯಿ

ಪಲ್ಲವಿ ಪ್ರಭಳ್ಕರ್

ಸೌಮ್ಯ ಪ್ರಭಳ್ಕರ್

ಲಕ್ಷ್ಮೀ ಪ್ರಭಳ್ಕರ್

ವರುಣ್ ದಳವಾಯಿ

ಕಾವೇರಿ ದಳವಾಯಿ

ಹರೀಶ್ ದಳವಾಯಿ

ಮೌನೇಶ್ ಬಣಗಾರ್

ಪ್ರಶಾಂತ್ ದಳವಾಯಿ

ಮಲ್ಲೇಶ ದಳವಾಯಿ

ಕಿರಣ್ ದಳವಾಯಿ

ಸುರೇಶ್ ದಳವಾಯಿ

ಆಶಾಲತಾ ದಳವಾಯಿ

ಕೊಟ್ರೇಶ ದಳವಾಯಿ

ಮಮತಾ ದಳವಾಯಿ

ಶ್ರೀಧರ ದಳವಾಯಿ

ರಾಜೇಶ್ ಭಂಡಾರಿ

ವಿಶ್ವನಾಥ ಭಂಡಾರಿ

ಪ್ರಜ್ವಲ್ ದಳವಾಯಿ ಮೊದಲಾದವು.

ಈ ಮೇಲಿನ ಹೆಸರುಗಳನ್ನು ಗಮನಿಸಿದರೆ ಆಧುನೀಕತೆಯ ಪ್ರಭಾವ ಹಂಡಿಜೋಗಿ ಸಮುದಾಯದ ಮೂರನೇ ತಲೆಮಾರುಗಳ ವ್ಯಕ್ತಿನಾಮಗಳ ಮೇಲಾಗಿರುವುದು ಸ್ಪಷ್ಟವಾಗುತ್ತದೆ. ಹೆಸರಿನ ನಿರ್ಧಿಷ್ಟ ಭಾಗ ಪೂರ್ಣವಾಗಿ ಆಧುನಿಕವಾಗಿದ್ದು, ವಾರ್ಗಿಕ ರೂಪ ಮಾತ್ರ ಸಮುದಾಯದ ವೃತ್ತಿವಾಚಿಗೆ ಸಂಬಂಧಿಸಿರುವುದು ಕಂಡುಬರುತ್ತದೆ. ವೃತ್ತಿವಾಚಿ ವಾರ್ಗಿಕದ ಬಳಕೆಯಿಲ್ಲದ, ಆಧುನೀಕತೆಗೆ ಒಳಗಾಗಿರುವ ಹಂಡಿಜೋಗಿ ಸಮುದಾಯದ ಮೂರನೇ ತಲೆಮಾರಿನ ಪುರುಷ ಹಾಗೂ ಮಹಿಳೆಯರ ಮತ್ತು ಮಕ್ಕಳ ಹೆಸರುಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ. ಆಧುನಿಕ ಹೆಸರುಗಳೆಲ್ಲವೂ ದೈವವಾಚಿ ಘಟಕಗಳನ್ನು ಕಳೆದುಕೊಂಡು ರಚನೆಯಾಗಿರುವುದು ಕಂಡುಬರುತ್ತದೆ. ಅಂತಹ ಆಧುನಿಕ ವ್ಯಕ್ತಿನಾಮಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ಅನುಷಾ, ಉಷಾ, ಸ್ವಪ್ನ, ಸುಷ್ಮಾ, ಸೌಂದರ್ಯ, ಸೃಷ್ಠಿ, ಸ್ನೇಹ, ನಯನ, ರಕ್ಷಿತ, ಪೂಜಾ, ಚೈತ್ರ, ಪುಷ್ಪ, ಸ್ವಾತಿ, ಶ್ವೇತ, ಸುಶ್ಮಿತ, ಸಹನಾ, ತೇಜಸ್ವಿನಿ, ಶಶಿಕಲಾ, ಚಂದನ, ಲತಾಂಜಲಿ, ಸುನೀತ, ಅರ್ಪಿತ, ಅನನ್ಯ, ಸಂಗೀತ, ಸಂಜನ, ಸುಕನ್ಯ, ಭುವನ, ಮೇಘನ, ಶಾಲಿನಿ, ಅಖಿಲ, ವಿಕಾಸ್, ಅರವಿಂದ, ಪುನೀತ್, ಸಚಿನ್, ರಾಹುಲ್, ಸಂದೇಶ, ಅಭಿಷೇಕ್, ಅಕ್ಷಯ್, ಸಂತೋಷ್, ಪ್ರಮೋದ್.

**ಜಾತಿವಾಚಿ ಅಥವಾ ಸಮುದಾಯವಾಚಿ**

ಹಂಡಿಜೋಗಿಗಳ ವ್ಯಕ್ತಿನಾಮಗಳ ಪೂರ್ವದಲ್ಲಿ ಜಾತಿವಾಚಿ ವಾರ್ಗಿಕಗಳು ಕಂಡುಬರುತ್ತವೆ. ಸಮುದಾಯದಲ್ಲಿ ಜಾತಿವಾಚಿ ವಾರ್ಗಿಕಗಳು ಪುರುಷ ಮತ್ತು ಮಹಿಳೆಯರಿಬ್ಬರ ಹೆಸರುಗಳಲ್ಲೂ ಬಳಕೆಯಲ್ಲಿರುವುದನ್ನು ಗುರುತಿಸಬಹುದಾಗಿದೆ. ಜಾತಿವಾಚಿ ವಾರ್ಗಿಕವು ಸಮುದಾಯದ ಎಲ್ಲಾ ವ್ಯಕ್ತಿಗಳ ಹೆಸರುಗಳ ಪೂರ್ವ ಮತ್ತು ಉತ್ತರ ಭಾಗದಲ್ಲಿ ಕಂಡುಬರುತ್ತವೆ. ಸಮುದಾಯದಲ್ಲಿ ಪುರುಷ ಹಾಗೂ ಮಹಿಳೆಯರ ಹೆಸರುಗಳಲ್ಲಿ ಒಂದೇ ವಿಧದ ಜಾತಿ ವಾರ್ಗಿಕಗಳು ಬಳಕೆಯಾಗುತ್ತಿರುವುದನ್ನು ಕಾಣಬಹುದಾಗಿದೆ. ಸಮುದಾಯದ ಪ್ರತಿಯೊಬ್ಬರ ಹೆಸರುಗಳ ಭಾಗವಾಗಿ ಜಾತಿವಾಚಿ ವಾರ್ಗಿಕಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ. ಜಾತಿವಾಚಿ ವಾರ್ಗಿಕ ಸಮುದಾಯದ ಮೂರು ತಲೆಮಾರಿನ ಪುರುಷ ಮತ್ತು ಮಹಿಳೆಯರ ಹಾಗೂ ಮಕ್ಕಳ ಹೆಸರುಗಳಲ್ಲಿ ಕಂಡುಬರುತ್ತದೆ. ಅಂತಹ ಜಾತಿವಾಚಿ ವಾರ್ಗಿಕದಿಂದ ಕೂಡಿದ ಸಮುದಾಯದ ವ್ಯಕ್ತಿನಾಮಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

**ಜಾತಿವಾಚಿ ವಾರ್ಗಿಕಗಳಿಂದ ಕೂಡಿದ ವ್ಯಕ್ತಿನಾಮಗಳು**

ಜೋಗೇರ ರಾಮಚಂದ್ರಪ್ಪ

ಜೋಗೇರ ಯಲ್ಲಪ್ಪ

ಜೋಗೇರ ಚಂದ್ರಪ್ಪ

ಜೋಗೇರ ಕೊಟ್ರೇಶಪ್ಪ

ಜೋಗೇರ ತಿಪ್ಪೇಸ್ವಾಮಿ

ಜೋಗೇರ ಹುಲಿಗೆಮ್ಮ

ಜೋಗೇರ ಗೋಣೆಪ್ಪ

ಜೋಗೇರ ಚಂದ್ರಶೇಖರ

ಜೋಗೇರ ಆಶಾ

ಜೋಗೇರ ಉಮಾದೇವಿ

ಜೋಗೇರ ಸುರೇಶ

ಜೋಗೇರ ಸೀತಮ್ಮ

ಜೋಗೇರ ಪವಿತ್ರ

ಜೋಗೇರ ಬಸವರಾಜ

ಜೋಗೇರ ಅಂಜಿನಪ್ಪ

ಜೋಗೇರ ನಿರ್ಮಲಮ್ಮ

ಜೋಗೇರ ಹನುಮಂತಪ್ಪ

ಜೋಗೇರ ರೇಣುಕಪ್ಪ

ಜೋಗೇರ ಕೊಳ್ಳಪ್ಪ

ಜೋಗೇರ ಬಸಮ್ಮ

ಜೋಗೇರ ರಘುಪತಿ

ಜೋಗೇರ ನಾಗೇಂದ್ರಪ್ಪ

ಜೋಗೇರ ದೇವೇಂದ್ರಪ್ಪ

ಜೋಗೇರ ಸೋಮಪ್ಪ

ಜೋಗೇರ ಶಾಂತಕುಮಾರ

ಜೋಗೇರ ಕರಿಯಪ್ಪ

ಜೋಗೇರ ರೇಣುಕಮ್ಮ

ಜೋಗೇರ ಗಂಗಮ್ಮ

ಜೋಗೇರ ರಾಮಪ್ಪ

ಜೋಗೇರ ಮಂಜಮ್ಮ

ಜೋಗೇರ ಪ್ರೇಮನಾಥ

ಜೋಗೇರ ಸಿದ್ದಮ್ಮ

ಜೋಗೇರ ನೀಲಮ್ಮ

ಜೋಗೇರ ಶೋಭ

ಜೋಗೇರ ಹುಲಿಗೆಮ್ಮ

ಜೋಗೇರ ಫಕ್ಕೀರಮ್ಮ

ಜೋಗೇರ ಪವಾಡಮ್ಮ

ಜೋಗೇರ ಉಡುಚಪ್ಪ

ಜೋಗೇರ ಹುಚ್ಚಪ್ಪ

ಜೋಗೇರ ಫಕ್ಕೀರಪ್ಪ

ಹಂಡಿಜೋಗಿ ಹನುಮಂತಪ್ಪ

ಜೋಗೇರ ಹೋಳಿಬಸಪ್ಪ

ಜೋಗೇರ ಶಂಕರಪ್ಪ

ಜೋಗೇರ ಮಲ್ಲಪ್ಪ

ಜೋಗೇರ ಪರಮೇಶ್

ಹಂಡಿಜೋಗಿ ಮಲ್ಲಪ್ಪ

ಜೋಗೇರ ಹೊಳಿಯಪ್ಪ

ಜೋಗೇರ ಮಂಜುನಾಥ

ಜೋಗೇರ ಗೀತಮ್ಮ

ಜೋಗೇರ ಶಿಲ್ಪಾ

ಜೋಗೇರ ರತ್ನಮ್ಮ

ಜೋಗೇರ ಭೀಮಕ್ಕ

ಜೋಗೇರ ದ್ಯಾಮಕ್ಕ

ಹೀಗೆ ಒಂದೊಂದು ನೆಲೆಗಳಲ್ಲಿ ಇವರನ್ನು ಜೋಗೇರು ಎಂದೇ ಸಂಬೋಧಿಸಿ ಬಳಕೆ ಮಾಡುತ್ತಿರುವುದು ಕಂಡುಬರುತ್ತದೆ. ಇತರೇ ಸಮುದಾಯದವರು ಇವರ ಹೆಸರುಗಳನ್ನು ಜಾತಿಯೊಂದಿಗೆ ಸೇರಿಸಿ ಬಳಕೆ ಮಾಡುತ್ತಿರುವುದು ಕಂಡುಬರುತ್ತದೆ. ಹಂಡಿಜೋಗಿಗಳು ದಾಖಲೆಗಳಲ್ಲೂ ಸಹ ತಮ್ಮ ಹೆಸರುಗಳ ಪೂರ್ವದಲ್ಲಿ ಜೋಗೇರು ಎಂಬ ಜಾತಿವಾಚಿ ವಾರ್ಗಿಕ ಬರೆಸಿರುವುದು ಕಂಡುಬರುತ್ತದೆ.

ಹಂಡಿಜೋಗಿಗಳಲ್ಲಿ ಜಾತಿವಾಚಿ ವಾರ್ಗಿಕಗಳನ್ನು ಹೆಸರಿನ ಉತ್ತರ ಭಾಗದಲ್ಲಿ ಸೇರಿಸಿಕೊಂಡಿರುವುದು ಕಂಡುಬರುತ್ತದೆ. ಬಳಕೆಯ ನೆಲೆಯಲ್ಲಿ ಹೆಸರಿನ ಉತ್ತರ ಭಾಗದಲ್ಲಿ ಜಾತಿವಾಚಿ ವಾರ್ಗಿಕವಾದ 'ಜೋಗಿ' ಹೆಸರನ್ನು ಬಳಸಿಕೊಂಡು ಪರಸ್ಪರ ವ್ಯಕ್ತಿನಾಮಗಳ ಬಳಕೆ ನಡೆಯುತ್ತಿರುವುದನ್ನು ಗುರುತಿಸಬಹುದಾಗಿದೆ. ಈ ಮಾದರಿಯು ಸಮುದಾಯದ ಮೂರು ತಲೆಮಾರಿನ ಪುರುಷರ ಹೆಸರುಗಳಲ್ಲಿ ಅಧಿಕವಾಗಿ ಬಳಕೆಯಲ್ಲಿರುವುದು ಕಂಡುಬರುತ್ತದೆ.

ಕೊಳ್ಳಪ್ಪ ಜೋಗಿ

ಸಿದ್ದಪ್ಪ ಜೋಗಿ

ಗುಡ್ಡಪ್ಪ ಜೋಗಿ

ಭರಮಪ್ಪ ಜೋಗಿ

ಭೈರಪ್ಪ ಜೋಗಿ

ಪ್ರತಾಪ್ ಜೋಗಿ

ರಮೇಶ್ ಜೋಗಿ

ಯಲ್ಲಪ್ಪ ಜೋಗಿ

ಅರುಣ್ ಜೋಗಿ

ಕಿರಣ್ ಜೋಗಿ

ವರುಣ್ ಜೋಗಿ

ಅರ್ಜುನ್ ಜೋಗಿ

ಮೌನೇಶ್ ಜೋಗಿ

ಬಸವರಾಜ ಜೋಗಿ

ಸುದರ್ಶನ್ ಜೋಗಿ

ವೀರೇಶ್ ಜೋಗಿ

ಪ್ರಸಾದ್ ಜೋಗಿ

ಸುರೇಶ್ ಜೋಗಿ

ಕಿಶೋರ್ ಜೋಗಿ

ಅಜಯ್ ಜೋಗಿ

ನಾಗರಾಜ ಜೋಗಿ

ಈ ಮಾದರಿಯ ಜಾತಿವಾಚಿ ವಾರ್ಗಿಕಗಳು ಸಮುದಾಯದಲ್ಲಿ ಮಹಿಳೆಯರ ಹೆಸರುಗಳಲ್ಲಿ ಕಂಡುಬರುವುದಿಲ್ಲ. ಪುರುಷರಲ್ಲಿ ಮೂರು ತಲೆಮಾರಿನವರಲ್ಲೂ ಬಳಕೆಯಲ್ಲಿರುವುದು ಕಂಡುಬರುತ್ತದೆ.

ಹಂಡಿಜೋಗಿ ಸಮುದಾಯದ ವ್ಯಕ್ತಿನಾಮಗಳು ಪ್ರಮುಖವಾಗಿ ಸಮುದಾಯದ ದೈವಕ್ಕೆ ಸಂಬಂಧಿಸಿದವುಗಳಾಗಿರುವುದು ಕಂಡುಬರುತ್ತದೆ. ಸಮುದಾಯದ ಪ್ರತಿಯೊಂದು ಕುಟುಂಬಗಳಲ್ಲಿಯೂ ದೈವ ಸಂಬಂಧಿಯಾದ ಒಂದೇ ಹೆಸರನ್ನು ಹಲವರಿಗೆ ನಾಮಕರಣ ಮಾಡಲಾಗಿರುತ್ತದೆ. ಈ ರೀತಿ ಒಂದೇ ಹೆಸರಿನವರು ಕುಟುಂಬದಲ್ಲಿ (ರಕ್ತ ಸಂಬಂಧಗಳಲ್ಲಿ) ಅನೇಕರಿದ್ದಾಗ, ಅವರ ಹೆಸರನ್ನು ಸ್ಪಷ್ಟವಾಗಿ ಗುರುತಿಸಲು ಸಹಾಯವಾಗುವಂತೆ ಕುಟುಂಬದಲ್ಲಿ ನಿರ್ದಿಷ್ಟ ಭಾಗವನ್ನು ಹಾಗೆಯೇ ಉಳಿಸಿಕೊಂಡು ವಾರ್ಗಿಕಗಳಲ್ಲಿ ಬದಲಾವಣೆಗಳನ್ನು ಮಾಡಿಕೊಂಡಿರುವುದು ಕಂಡುಬರುತ್ತದೆ. ಒಂದೇ ನಿರ್ದಿಷ್ಟ ದೈವಸಂಬಂಧಿ ಘಟಕವನ್ನು ಹಲವರು ಹೊಂದಿರುವುದರಿಂದ ಅದರ ಪೂರ್ವದಲ್ಲಿ ವಿಶೇಷಣಗಳನ್ನು ಬಳಕೆಮಾಡಿಕೊಂಡು ಹೆಸರಿಸಲಾಗುತ್ತದೆ. ಇವುಗಳು ಕುಟುಂಬದಲ್ಲಿ ಈ ವಾರ್ಗಿಕಗಳು ಬಹುತೇಕವಾಗಿ ಚಿಕ್ಕ, ಸಣ್ಣ, ದೊಡ್ಡ ಎಂಬ ಸಾಮಾನ್ಯ ಘಟಕಗಳಿಂದ ಆರಂಭವಾಗಿ ಹೆಸರಿನ ಜೊತೆಗೆ ಸ್ಥಾನ ಪಡೆದುಕೊಂಡಿರುವುದನ್ನು ಗುರುತಿಸಬಹುದಾಗಿದೆ. ಕುಟುಂಬದಲ್ಲಿ ಒಬ್ಬರಿಗಿಂತ ಹೆಚ್ಚಿನವರು ಒಂದೇ ನಿರ್ದಿಷ್ಟವನ್ನು ಹೊಂದಿದ ಹೆಸರುಗಳಿದ್ದರೆ ಅವರ ಹೆಸರಿನ ಜೊತೆಗೆ ಮೇಲಿನ ಸಾಮಾನ್ಯ ವಾರ್ಗಿಕಗಳನ್ನು ಸೇರಿಸಿಕೊಂಡು ಬಳಕೆ ಮಾಡಲಾಗುತ್ತದೆ. ಅಂತಹ ಸಾಮಾನ್ಯ ಘಟಕಗಳು ಹೆಸರಿನ ಮುಖ್ಯ ಭಾಗವಾಗಿ ಸ್ಥಾನಪಡೆದುಕೊಂಡಿರುವುದನ್ನು ಕಾಣಬಹುದಾಗಿದೆ.

ಹಂಡಿಜೋಗಿ ಸಮುದಾಯದಲ್ಲಿ ಬಳಕೆಯಲ್ಲಿರುವ ಪ್ರಸಿದ್ದ ದೈವಸಂಬಂಧಿ ನಿರ್ದಿಷ್ಟ ಘಟಕದಿಂದ ಕೂಡಿದ ಕೆಲವೇ ಹೆಸರುಗಳನ್ನು ಇಡೀ ಸಮುದಾಯದ ತುಂಬೆಲ್ಲಾ ಕಂಡು ಬರುವುದನ್ನು ನೋಡಬಹುದಾಗಿದೆ. ಈ ದೈವಸಂಬಂಧಿ ಹೆಸರುಗಳು ಸಮುದಾಯದ ಮನೆತನದ ಕುಲದೈವಗಳು, ಸಮುದಾಯದ ಸಂಸ್ಕೃತಿಯ ಆಚರಣೆಯ ಭಾಗವಾಗಿ ಕುಟುಂಬದಲ್ಲಿ ಸ್ಥಾನ ಪಡೆದಿರುವುದನ್ನು

ಗುರುತಿಸಬಹುದಾಗಿದೆ. ಅಂತಹ ಪ್ರಸಿದ್ಧ ಹೆಸರುಗಳನ್ನು ಈ ಕೆಳಗಿನಂತೆ ಗುರುತಿಸಲಾಗಿದೆ. ಅವುಗಳೆಂದರೆ,

ಸಿದ್ದಪ್ಪ

ಮಲೆಸಿದ್ದಪ್ಪ

ಭರಮಪ್ಪ

ಭೈರಪ್ಪ

ಯಲ್ಲಪ್ಪ

ಕೊಳ್ಳಪ್ಪ

ಗೋಣೆಪ್ಪ

ರಾಮಪ್ಪ

ಕೋದಂಡರಾಮಪ್ಪ

ರಾಮಸಿದ್ದಪ್ಪ

ಹನುಮಂತಪ್ಪ

ಈ ಮೇಲಿನ ಹೆಸರಿನ ವ್ಯಕ್ತಿಗಳು ಒಂದೇ ಕುಟುಂಬದಲ್ಲಿ ಇಬ್ಬರಿಗಿಂತ ಹೆಚ್ಚಿನವರು ಇರುವುದನ್ನು ಕಾಣಬಹುದಾಗಿದೆ. ಹಾಗಾಗಿ ಮೇಲಿನ ಪ್ರಸಿದ್ಧ ಹೆಸರುಗಳು ಸಮುದಾಯದ ಪ್ರಧಾನ ದೈವಗಳಿಗೆ ಸಂಬಂಧಿಸಿದವುಗಳಾಗಿದ್ದು, ಇವುಗಳನ್ನು ಹಾಗೆಯೇ ಹೆಸರಿನಲ್ಲಿ ಉಳಿಸಿಕೊಂಡು ಆ ಹೆಸರಿನ ಸಾಮಾನ್ಯ ವಾರ್ಗಿಕಗಳಾಗಿ ವಿಶೇಷಣಗಳನ್ನು ಬಳಸಿಕೊಂಡು ವ್ಯಕ್ತಿಗಳಿಗೆ ಹೆಸರಿಟ್ಟಿರುವುದು ಕಂಡುಬರುತ್ತದೆ. ಈ ಮಾದರಿಯ ಹೆಸರುಗಳು ಸಮುದಾಯದ ಮೊದಲನೇ ಮತ್ತು ಎರಡನೇ ತಲೆಮಾರಿನ ಪುರುಷರಲ್ಲಿ ಕಂಡುಬರುತ್ತದೆ. ವಿಶೇಷಣಗಳೊಡನೆ ಕೂಡಿದ ಸಮುದಾಯದ ಹೆಸರುಗಳನ್ನು ವಾರ್ಗಿಕಗಳ ಆಧಾರದ ಮೇಲೆ ಈ ಕೆಳಗಿನಂತೆ ಅವುಗಳ ರಚನೆಯನ್ನು ನೋಡಬಹುದಾಗಿದೆ.

**ವಾರ್ಗಿಕ + ನಿರ್ದಿಷ್ಟ + ವಾರ್ಗಿಕ = ವ್ಯಕ್ತಿನಾಮ**

ಸಣ್ಣ + ಸಿದ್ದ + ಅಪ್ಪ = ಸಣ್ಣಸಿದ್ದಪ್ಪ

ಚಿಕ್ಕ + ಸಿದ್ದ + ಅಪ್ಪ = ಚಿಕ್ಕಸಿದ್ದಪ್ಪ

ದೊಡ್ಡ + ಸಿದ್ದ + ಅಪ್ಪ = ದೊಡ್ಡಸಿದ್ದಪ್ಪ

ಸಣ್ಣ + ರಾಮ + ಅಪ್ಪ = ಸಣ್ಣರಾಮಪ್ಪ

ದೊಡ್ಡ + ರಾಮ + ಅಪ್ಪ = ದೊಡ್ಡರಾಮಪ್ಪ

ಸಣ್ಣ + ಹನುಮಂತ + ಅಪ್ಪ = ಸಣ್ಣಹನುಮಂತಪ್ಪ

ದೊಡ್ಡ + ಹನುಮಂತ + ಅಪ್ಪ = ದೊಡ್ಡಹನುಮಂತಪ್ಪ

ಸಣ್ಣ + ಯಲ್ಲ + ಅಪ್ಪ = ಸಣ್ಣಯಲ್ಲಪ್ಪ

ದೊಡ್ಡ + ಯಲ್ಲ + ಅಪ್ಪ = ದೊಡ್ಡಯಲ್ಲಪ್ಪ

ಸಣ್ಣ + ಕೊಳ್ಳ + ಅಪ್ಪ = ಸಣ್ಣಕೊಳ್ಳಪ್ಪ

ದೊಡ್ಡ + ಕೊಳ್ಳ + ಅಪ್ಪ = ದೊಡ್ಡಕೊಳ್ಳಪ್ಪ

ಸಣ್ಣ + ಭೈರ + ಅಪ್ಪ = ಸಣ್ಣಭೈರಪ್ಪ

ದೊಡ್ಡ + ಭೈರ + ಅಪ್ಪ = ದೊಡ್ಡಭೈರಪ್ಪ

ಸಣ್ಣ + ಗೋಣಿ + ಅಪ್ಪ = ಸಣ್ಣಗೋಣೆಪ್ಪ

ದೊಡ್ಡ + ಗೋಣಿ + ಅಪ್ಪ = ದೊಡ್ಡಗೋಣೆಪ್ಪ

ಈ ಮಾದರಿಯ ಹೆಸರುಗಳ ಪರಂಪರೆ ಸಮುದಾಯದಲ್ಲಿ ಎರಡನೇ ತಲೆಮಾರಿನವರೆಗೆ ಪ್ರವೇಶ ಪಡೆದಿದ್ದು, ನಂತರ ಹಿಂದೆ ಸರಿದಿರುವುದನ್ನು ಕಾಣಬಹುದಾಗಿದೆ.

ಹಂಡಿಜೋಗಿ ಸಮುದಾಯದಲ್ಲಿ ಎರಡೂ ನಿರ್ದಿಷ್ಟಗಳಿಂದ ಕೂಡಿದ ವ್ಯಕ್ತಿನಾಮಗಳು ಕಂಡುಬರುತ್ತವೆ. ಈ ಹೆಸರುಗಳು ಸಮುದಾಯದ ಎರಡನೇ ತಲೆಮಾರಿನ ಪುರುಷರಲ್ಲಿ ಅಧಿಕವಾಗಿರುವುದು ಕಂಡುಬರುತ್ತದೆ. ಇವುಗಳಿಗೆ ಯಾವುದೇ ಜಾತಿ, ವೃತ್ತಿವಾಚಿ ವಾರ್ಗಿಕಗಳು ದಾಖಲೆಗಳಲ್ಲಿ ಕಂಡುಬರುವುದಿಲ್ಲ. ಆದರೆ ಇತ್ತೀಚೆಗೆ ವೃತ್ತಿವಾಚಿ ವಾರ್ಗಿಕಗಳನ್ನು ಬಳಕೆ ಮಾಡಿಕೊಂಡು ಸಮುದಾಯದಲ್ಲಿ ಪ್ರಸಾರದಲ್ಲಿರುವುದನ್ನು ಗುರುತಿಸಬಹುದಾಗಿದೆ. ಎರಡೂ ನಿರ್ದಿಷ್ಟ ಘಟಕಗಳಿಂದ ಕೂಡಿದ ಹೆಸರುಗಳು ಸಮುದಾಯದಲ್ಲಿ ಅಧಿಕ ಸಂಖ್ಯೆಯಲ್ಲಿ ಬಳಕೆಯಲ್ಲಿರುವುದನ್ನು ಕಾಣಬಹುದಾಗಿದೆ. ಈ ನಿರ್ದಿಷ್ಟಗಳು ದೈವಸಂಬಂಧಿಯಾಗಿರುವುದು ಕಂಡುಬರುತ್ತದೆ. ಆದರೆ ವೃತ್ತಿ, ಜಾತಿವಾಚಿ ವಾರ್ಗಿಕಗಳಿಲ್ಲದೆ ಬಳಕೆಗೊಳ್ಳುತ್ತಿರುವುದನ್ನು ಗುರುತಿಸಬಹುದಾಗಿದೆ.

**ನಿರ್ದಿಷ್ಟ + ನಿರ್ದಿಷ್ಟ = ವ್ಯಕ್ತಿನಾಮ**

ರೇವಣ + ಸಿದ್ಧ = ರೇವಣಸಿದ್ಧ

ಮಲೆ + ಸಿದ್ಧ = ಮಲೆಸಿದ್ಧ

ರಾಮ + ಸಿದ್ಧ = ರಾಮಸಿದ್ಧ

ರಾಮ + ಮೂರ್ತಿ = ರಾಮಮೂರ್ತಿ

ರಾಮ + ಸ್ವಾಮಿ = ರಾಮಸ್ವಾಮಿ

ರಾಮ + ಕೃಷ್ಣ = ರಾಮಕೃಷ್ಣ

ಸಾಂಭ + ಶಿವ = ಸಾಂಭಶಿವ

ಕೋದಂಡ + ರಾಮ = ಕೋದಂಡರಾಮ

ಶಿವ + ಮೂರ್ತಿ = ಶಿವಮೂರ್ತಿ

ಗುರು + ಮೂರ್ತಿ = ಗುರುಮೂರ್ತಿ

ತಿಪ್ಪೆ + ಸ್ವಾಮಿ = ತಿಪ್ಪೇಸ್ವಾಮಿ

ಬಸವ + ರಾಜ = ಬಸವರಾಜ

ಶಿವ + ರಾಜ = ಶಿವರಾಜ

ಪ್ರಭು + ದೇವ = ಪ್ರಭುದೇವ

ಸೋಮ + ಶೇಖರ = ಸೋಮಶೇಖರ

ವಿಜಯ + ಇಂದ್ರ = ವಿಜೇಂದ್ರ

ಇಂಧೂ + ದರ = ಇಂಧೂದರ

ದೇವ + ಇಂದ್ರ = ದೇವೇಂದ್ರ

ನಾಗ + ಇಂದ್ರ = ನಾಗೇಂದ್ರ

ಸುರ + ಈಶ = ಸುರೇಶ

ಜಗತ್ + ಈಶ = ಜಗದೀಶ

ಶಂಕರ + ಮೂರ್ತಿ = ಶಂಕರಮೂರ್ತಿ

ಪರಮ + ಈಶ = ಪರಮೇಶ

ಶಿವ + ಶಂಕರ = ಶಿವಶಂಕರ

ರಾಮ + ಚಂದ್ರ = ರಾಮಚಂದ್ರ

ರಘು + ಪತಿ = ರಘುಪತಿ

ಈ ಮೇಲಿನ ಎಲ್ಲಾ ಹೆಸರುಗಳು ಹಂಡಿಜೋಗಿಗಳಲ್ಲಿ ಎರಡನೇ ತಲೆಮಾರಿನ ಪುರುಷರಲ್ಲಿ ಕಂಡುಬರುತ್ತವೆ. ಆದರೆ ಇತ್ತೀಚಿಗೆ ಆಧುನಿಕ ಸಂದರ್ಭದಲ್ಲಿ ಮೇಲಿನ ಹೆಸರುಗಳ ಜೊತೆಗೆ ಪುನಃ ಸಮುದಾಯದ ವೃತ್ತಿವಾಚಿ, ಜಾತಿವಾಚಿ, ವಾರ್ಗಿಕಗಳನ್ನು ಬಳಸಿಕೊಂಡು ಪ್ರಸಾರದಲ್ಲಿರುವುದನ್ನು ಕಾಣಬಹುದಾಗಿದೆ.

ಉದಾ. ಸಾಂಭಶಿವ ದಳವಾಯಿ, ರಾಮಸ್ವಾಮಿ ದಳವಾಯಿ, ಕೋದಂಡರಾಮ ದಳವಾಯಿ ಹೀಗೆ ಸಮುದಯಾದಲ್ಲಿ ಅವರವರ ವೃತ್ತಿಗನುಗುಣವಾಗಿ ದಳವಾಯಿ, ಗೌಡ, ಪಾಟೀಲ, ಭಂಡಾರಿ, ಪೂಜಾರಿ, ಗಣಚಾರಿ ಎಂದು ಮುಂತಾಗಿ ಸಾಮಾನ್ಯ ವೃತ್ತಿವಾಚಿ ವಾರ್ಗಿಕಗಳನ್ನು ಬಳಕೆಮಾಡಿಕೊಂಡಿರುವುದನ್ನು ಕಾಣಬಹುದಾಗಿದೆ. ಈ ವೃತ್ತಿವಾಚಿ ವಾರ್ಗಿಕಗಳು ಪುನಃ ಮೂರನೇ ತಲೆಮಾರಿನ ವ್ಯಕ್ತಿನಾಮಗಳಲ್ಲೂ ಸಹ ಸ್ಥಾನ ಪಡೆಯುತ್ತಿರುವುದನ್ನು ಆಧುನಿಕ ಸಂದರ್ಭದಲ್ಲಿ ಗುರುತಿಸಬಹುದಾಗಿದೆ.

ಹಂಡಿಜೋಗಿ ಸಮುದಾಯ ನಾತಪಂಥಿ ಸಮುದಾಯವಾಗಿದ್ದು, ಸಮುದಾಯದಲ್ಲಿ 'ನಾಥ' ವಾರ್ಗಿಕದಿಂದ ಕೂಡಿದ ವ್ಯಕ್ತಿನಾಮಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ ಪುರುಷರ ಹೆಸರಿನ ಜೊತೆಗೆ 'ನಾಥ' ಪದವು ವಾರ್ಗಿಕವಾಗಿ ಬಳಕೆಯಲ್ಲಿರುವುದನ್ನು ಗುರುತಿಸಬಹುದಾಗಿದೆ. ಈ ವಾರ್ಗಿಕದ ಬಳಕೆ ಸಮುದಾಯದ ಮೊದಲನೇ ತಲೆಮಾರಿನ ಪುರುಷರಲ್ಲಿ ಹೆಚ್ಚು ಬಳಕೆಯಲ್ಲಿದ್ದು, ಎರಡನೇ ತಲೆಮಾರಿನವರ ಹೆಸರಿನಲ್ಲಿ ಇದರ ಬಳಕೆ ಅಲ್ಪಮಟ್ಟಿಗೆ ಹಿಂದೆ ಸರಿದಿದ್ದು ಮೂರನೇ ತಲೆಮಾರಿನವರಲ್ಲಿ ಸಂಪೂರ್ಣವಾಗಿ ನಿಂತುಹೋಗಿರುವುದು ಕಂಡುಬರುತ್ತದೆ. 'ನಾಥ' ವಾರ್ಗಿಕವು ಉತ್ತರ ಭಾರತದ ನಾಥ ಮತಪಂಥದ ಪ್ರಭಾವದಿಂದಾಗಿ ಸಮುದಾಯದಲ್ಲಿ ಬಳಕೆಯಲ್ಲಿರುವುದನ್ನು ಗುರುತಿಸಬಹುದಾಗಿದೆ. ವಾಸ್ತವವಾಗಿ ಹಂಡಿಜೋಗಿಗಳು ನಾಥಪಂಥ ಸಮುದಾಯಕ್ಕೆ ಸೇರಿದವರಾಗಿದ್ದು, ನಾಥ ಪಂಥದ ಮತವೊಂದರಿಂದ ಜೋಗಿದೀಕ್ಷೆ ಪಡೆದು ಸಮುದಾಯದ ಮೂಲವೃತ್ತಿಯ ಆಚರಣೆಯಲ್ಲಿ ತೊಡಗಿರುವುದು ಕಂಡುಬರುತ್ತದೆ. ನಾಥ ಪಂಥವು ಪುರುಷ ಪ್ರಧಾನವಾಗಿದ್ದು, ಇಲ್ಲಿನ ಬಹುತೇಕ ಆಚರಣೆಗಳು ಪುರುಷ ಸಂಬಂಧಿಯಾಗಿರುವುದನ್ನು ಕಾಣಬಹುದಾಗಿದೆ. ಅಂತಹ ನಾಥ ವಾರ್ಗಿಕದಿಂದ ಕೂಡಿದ ಸಮುದಾಯದ ಹೆಸರುಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

**'ನಾಥ' ವಾರ್ಗಿಕದಿಂದ ಕೂಡಿದ ವ್ಯಕ್ತಿನಾಮಗಳು**

ಸಿದ್ಧನಾಥ

ಬ್ರಹ್ಮೋಜಿನಾಥ

ಪವಾಡನಾಥ

ಗೋಣಿನಾಥ

ಶಂಕರನಾಥ

ಪ್ರೇಮನಾಥ

ಆನಂದನಾಥ

ಸಾರಂಗನಾಥ

ರಘುನಾಥ

ಕೇಶವನಾಥ

ಮಂಜುನಾಥ

ವಿಶ್ವನಾಥ

ಡೊಂಗರನಾಥ

ಕೇರನಾಥ

ಶಾಂತನಾಥ

ಜಗನ್ನಾಥ ಮೊದಲಾದ ಹೆಸರುಗಳನ್ನು ಗುರುತಿಸಬಹುದಾಗಿದೆ.

**ಸ್ಥಳನಾಮವಾಚಿ ವಾರ್ಗಿಕಗಳಿಂದ ಕೂಡಿದ ವ್ಯಕ್ತಿನಾಮಗಳು**

ಹಂಡಿಜೋಗಿ ಸಮುದಾಯದಲ್ಲಿ ಊರಿನ ಹೆಸರುಗಳು ವ್ಯಕ್ತಿನಾಮಗಳ ಜೊತೆಗೆ ಸ್ಥಾನ ಪಡೆದುಕೊಂಡಿರುವುದು ಕಂಡುಬರುತ್ತದೆ. ಹೆಸರಿನ ಜೊತೆಯಲ್ಲಿರುವ ಊರಿನ ಹೆಸರು ಆ ಕುಟುಂಬದ ಮೂಲ ನೆಲೆಯ ಹೆಸರಾಗಿರುವುದು ತಿಳಿದುಬರುತ್ತದೆ. ಹಂಡಿಜೋಗಿಗಳ ಹೆಸರಿನ ಜೊತೆಗೆ ಬಳಕೆಯಲ್ಲಿರುವ ಊರುಗಳ ಹೆಸರು ಹಂಡಿಜೋಗಿಗಳ ನೆಲೆಗಳಲ್ಲಿ ಯಾವುದಾದರೂ ಒಂದು ನೆಲೆಯ ಹೆಸರಾಗಿರುತ್ತದೆ. ಕಾಲಾನಂತರದಲ್ಲಿ ಕುಟುಂಬವೊಂದು ಒಂದು ನೆಲೆಯಿಂದ ಮತ್ತೊಂದು ನೆಲೆಗೆ ವಲಸೆ ಬರುವುದು ಅಲೆಮಾರಿಗಳಾದ ಇವರಲ್ಲಿ ಸಹಜವಾದುದಾಗಿದೆ. ಇವರು ಒಂದು ನೆಲೆಯಿಂದ ವಲಸೆ ಬಂದು ಬೇರೆ ಊರಿನಲ್ಲಿ ಆ ಕುಟುಂಬ ಶಾಶ್ವತವಾಗಿ ನೆಲೆಯೂರಿದರೂ ಆ ಕುಟುಂಬದವರನ್ನು ಮೂಲ ನೆಲೆಯ ಹೆಸರಿನಿಂದಲೇ ಗುರುತಿಸುತ್ತಾರೆ. ಮೂಲ ನೆಲೆಯ ಹೆಸರು ಮುಂದೆ ಸಮುದಾಯದಲ್ಲಿ ಆ ಮನೆತನದ ಹೆಸರಾಗಿ ಬಳಕೆಯಲ್ಲಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ ವ್ಯಕ್ತಿಯ ಹೆಸರಿನೊಡನೆ ಇರುವ ಊರಿನ ಹೆಸರು ಆ ವ್ಯಕ್ತಿಯ ಹಾಗೂ ಆ ಕುಟುಂಬದ (ಮನೆತನ) ಮೂಲ ನೆಲೆಯ ಹೆಸರಾಗಿರುತ್ತದೆ. ಇಲ್ಲಿ ಹೆಸರಿಸುವ ವ್ಯಕ್ತಿನಾಮಗಳ ಜೊತೆಯಲ್ಲಿರುವ ಸ್ಥಳನಾಮದಲ್ಲಿ ಆ ವ್ಯಕ್ತಿ ಹಾಗೂ ಅವನ ಕುಟುಂಬ ನೆಲೆಸಿರುವುದಿಲ್ಲ. ಬದಲಾಗಿ ಸಮುದಾಯದಲ್ಲಿ ಇವರ ಮನೆತನವನ್ನು ಮೂಲ ನೆಲೆಯ ಹೆಸರಿನಿಂದಲೇ ಗುರುತಿಸಲಾಗುತ್ತದೆ.

ಬಿಷ್ಣಹಳ್ಳಿಯ ಹಂಡಿಜೋಗಿ ಸಮುದಾಯದಲ್ಲಿ ಒಬ್ಬ ವ್ಯಕ್ತಿಯ ಹೆಸರಿನೊಂದಿಗೆ ಸ್ಥಳನಾಮ ಬಳಕೆಯಲ್ಲಿರುವ ಕ್ರಮವನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ. ಆ ಹೆಸರು ಹುಲಿಕೆರೆ ಸಾರಂಗನಾಥ. ಈತನ ತಂದೆಯ ಹೆಸರು ಕೂಡ ಇದೇ ಮಾದರಿಯಲ್ಲಿದೆ. ಹುಲಿಕೆರೆ ಪವಾಡಪ್ಪ. ಬಿಷ್ಣಹಳ್ಳಿ ನೆಲೆಯಲ್ಲಿ ಈ ಕುಟುಂಬ ನೆಲೆಸಿದೆ. ಇವರ ತಾತ-ಮುತ್ತಾತಂದಿರು ಹುಲಿಕೆರೆಯವರು ಕಾಲಾನಂತರದಲ್ಲಿ ಈ ನೆಲೆಗೆ ಬಂದು ನೆಲೆಸಿದ್ದಾರೆ. ಹಾಗಾಗಿ ಅವರನ್ನು ಹುಲಿಕೆರೆಯವರು ಎಂದು ಸ್ಥಳನಾಮದೊಡನೆ ಗುರುತಿಸುತ್ತಾರೆ. ಇಡೀ ಆ ಮನೆತನದವರ ಹೆಸರುಗಳಲ್ಲಿ ಹುಲಿಕೆರೆ

ಸ್ಥಳನಾಮದ ಹೆಸರು ಬಳಕೆಯಲ್ಲಿರುವುದನ್ನು ಕಾಣಬಹುದಾಗಿದೆ. ಅಂತಹ ಇನ್ನು ಕೆಲವು ಹೆಸರುಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

ಹುಲಿಕೆರೆ ಸಾರಂಗನಾಥ

ಹುಲಿಕೆರೆ ಪವಾಡಪ್ಪ

ಕುರುಗೋಡು ಸಿದ್ದಪ್ಪ

ಕವಲೂರು ರಾಮಣ್ಣ

ಕವಲೂರು ಸಿದ್ದಪ್ಪ

ದೇವರಹಳ್ಳಿ ದೊಡ್ಡ ಯಲ್ಲಪ್ಪ

ದೇವರಹಳ್ಳಿ ಯಲ್ಲಪ್ಪ

ಉಪ್ಪಾರಹಳ್ಳಿ ಬಂಗಾರಪ್ಪ

ಉಪ್ಪಾರಹಳ್ಳಿ ಸಣ್ಣಭೈರಪ್ಪ

ನೀರ್ಲಿಗಿ ಸಿದ್ದಪ್ಪ

ಕವಲೂರು ಸಿದ್ದಪ್ಪ

ಉಪ್ಪಾರಹಟ್ಟಿ ಹನುಮಂತಪ್ಪ

ಕೂಲಹಳ್ಳಿ ಸಿದ್ದಪ್ಪ

ರಾಮಕ್ಕನಹಳ್ಳಿ ಚಂದ್ರಪ್ಪ

ಮತ್ತೀಹಳ್ಳಿ ಕೊಟ್ರೇಶಪ್ಪ

ಹರಾಳು ಮಾರುತಿ

ದೇವರಹಳ್ಳಿ ಯಲ್ಲಮ್ಮ

ಕವಲೂರು ಭೈರಪ್ಪ

ಮತ್ತೀಹಳ್ಳಿ ಕೊಟ್ರೇಶಪ್ಪ

ಭಿಷ್ಮಹಳ್ಳಿ ಕೊಳ್ಳಪ್ಪ

ಕೂಲಹಳ್ಳಿ ರಾಮಚಂದ್ರಪ್ಪ

ಮತ್ತೀಹಳ್ಳಿ ರಾಮಪ್ಪ

ದೇವಗೊಂಡನಹಳ್ಳಿ ಸಿದ್ದಪ್ಪ

ದೇವರಹಳ್ಳಿ ತಿಪ್ಪೇಸ್ವಾಮಿ

ಶಿವಪುರ ಅಂಜಿನಪ್ಪ

ಮತ್ತೀಹಳ್ಳಿ ಗೋಣೆಪ್ಪ

ಹರಾಳು ಹುಲಿಗೆಮ್ಮ

ಹರಾಳು ಯಲ್ಲಮ್ಮ

ಹರಾಳು ಕೊಟ್ರೇಶಪ್ಪ ಮೊದಲಾದವುಗಳನ್ನು ಗುರುತಿಸಬಹುದಾಗಿದೆ.

**ಅಡ್ಡ ಹೆಸರುಗಳು**

ಹಂಡಿಜೋಗಿ ಸಮುದಾಯದ ವ್ಯಕ್ತಿನಾಮಗಳ ಜೊತೆಗೆ ಅಡ್ಡ ಹೆಸರುಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ. ಅಡ್ಡ ಹೆಸರುಗಳು ಸಾಮಾನ್ಯವಾಗಿ ವ್ಯಕ್ತಿಯ ಆಕಾರ(ರೂಪ) ನಡೆ-ನುಡಿ ಇತ್ಯಾದಿಗಳನ್ನು ಅವಲಂಬಿಸಿ ರೂಪಗೊಂಡಿರುವುದನ್ನು ಗುರುತಿಸಬಹುದಾಗಿದೆ. ಅಡ್ಡ ಹೆಸರುಗಳಲ್ಲೆಲ್ಲಾ ವಿಶೇಷಣಗಳ ಬಳಕೆ ಹೆಚ್ಚಾಗಿ ಕಂಡುಬರುತ್ತದೆ. ಸಮುದಾಯದಲ್ಲಿ ವ್ಯಕ್ತಿಯ ಹೆಸರಿಗೂ ಅಡ್ಡ ಹೆಸರಿಗೂ ಯಾವುದೇ ಸಂಬಂಧ ಇರುವುದಿಲ್ಲ. ಸಮುದಾಯದಲ್ಲಿ ಅಡ್ಡ ಹೆಸರುಗಳು ಕೆಲವೊಮ್ಮೆ ಸ್ವತಂತ್ರವಾಗಿ ನಿರ್ಧಿಷ್ಟದಂತೆ ಬಳಕೆಯಾಗುತ್ತವೆ. ಅಧಿಕವಾಗಿ ಹೆಸರಿನ ಮೊದಲು ಅಡ್ಡ ಹೆಸರು ನಿರ್ಧಿಷ್ಟವಾಗಿ ಬಂದು ಸೇರಿರುವುದನ್ನು ಕಾಣಬಹುದಾಗಿದೆ (ಭಂಗಿಸಿದ್ದ, ಬೀಡಿಸಿದ್ದ ಇತ್ಯಾದಿ).

ಹಂಡಿಜೋಗಿ ಸಮುದಾಯದಲ್ಲಿ ಒಂದೇ ರೀತಿಯ ಹೆಸರನ್ನು ಹೊಂದಿರುವವರು ಒಂದು ನೆಲೆಯಲ್ಲಿ ಅನೇಕರಿರುವುದು ಕಂಡುಬರುತ್ತದೆ. ಅಂತಹ ಸಂದರ್ಭಗಳಲ್ಲಿ ವ್ಯಕ್ತಿಯನ್ನು ಸ್ಪಷ್ಟವಾಗಿ ಗುರುತಿಸಲು ಅಡ್ಡ ಹೆಸರುಗಳು ಹೆಚ್ಚು ಸಹಾಯ ಮಾಡುತ್ತವೆ. ಹಂಡಿಜೋಗಿಗಳ ಹೆಸರುಗಳಲ್ಲಿನ ಅಡ್ಡ ಹೆಸರುಗಳು ಕುಟುಂಬದಲ್ಲಿ ವ್ಯಕ್ತಿಯು ಬಳಸುತ್ತಿರುವ ವಸ್ತುಗಳ ಹಿನ್ನೆಲೆಯಲ್ಲಿ ಹಾಗೂ ಕುಟುಂಬದಲ್ಲಿ ವ್ಯಕ್ತಿಗಳು ಮಾಡುವ ವೃತ್ತಿಗಳ ಹಿನ್ನೆಲೆಯಲ್ಲಿ ಸ್ಥಾನಪಡೆದುಕೊಳ್ಳುತ್ತವೆ. ಹೆಚ್ಚಿನವುಗಳು ವ್ಯಕ್ತಿಯ ಗುಣ-ಸ್ವಭಾವಗಳನ್ನು ವರ್ಣಿಸುವಂತಹವುಗಳಾಗಿರುತ್ತವೆ. ವ್ಯಕ್ತಿಯ ಶಾರೀರಿಕ ಅವಯವಗಳಿಗೆ ಸಂಬಂಧಿಸಿದಂತೆ ಹೆಚ್ಚು ಬಳಕೆಯಲ್ಲಿರುವುದು ಕಂಡುಬರುತ್ತದೆ. (ಕಿವುಡ ಸಿದ್ದಪ್ಪ, ಕುಂಟ ಸಿದ್ದಯ್ಯ) ಜೊತೆಗೆ ಸಮುದಾಯದಲ್ಲಿ ವ್ಯಕ್ತಿಯು ಮಾಡುವ ವೃತ್ತಿಗೆ ಸಂಬದಿಸಿದವುಗಳಾಗಿರುತ್ತದೆ. ಕುಟುಂಬದಲ್ಲಿನ ವ್ಯಕ್ತಿ ಸೇಂದಿಯನ್ನು ಮಾರಾಟ ಮಾಡುತ್ತಿದ್ದರೆ ಅವನನ್ನು ಶೇಂದಿ ಸಿದ್ದಪ್ಪ ಎಂದು ಕರೆಯುತ್ತಿರುವುದು ಕಂಡುಬರುತ್ತದೆ. ಇದು ಪುರುಷ ಮಹಿಳೆಯರಿಬ್ಬರ ಹೆಸರುಗಳಲ್ಲೂ ಕಂಡುಬರುತ್ತದೆ. ಅಡ್ಡ ಹೆಸರುಗಳು ಹೆಚ್ಚಿನ ಭಾರಿ ಒಬ್ಬ ವ್ಯಕ್ತಿಯನ್ನೇ ವರ್ಣಿಸುತ್ತವೆ. ಕೆಲವೊಮ್ಮೆ ಕುಟುಂಬ ಅಥವಾ ಮನೆತನವನ್ನು ವರ್ಣಿಸುತ್ತವೆ. ಅಂತಹ ಅಡ್ಡ ಹೆಸರುಗಳ ಸ್ವರೂಪವನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ. ಅಡ್ಡ ಹೆಸರುಗಳಲ್ಲಿ ಶಾರೀರಿಕ ಅವಯವಗಳಿಗೆ ಸಂಬಂಧಿಸಿದ ಹೆಸರುಗಳೇ

ಅಧಿಕ ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ. ಮುಖ್ಯವಾಗಿ ಇವು ಒಬ್ಬ ವ್ಯಕ್ತಿಯ ಗುಣ, ಸ್ವಭಾವವನ್ನು ವಿವರಿಸುವಂತಹುಗಳಾಗಿರುತ್ತವೆ. ಅಂತಹ ಪ್ರಮುಖ ಹೆಸರುಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

**ಅಡ್ಡ ಹೆಸರು + ಹೆಸರು (ನಿಜನಾಮ)**

ಪಾವಲಿ ಸಿದ್ದಪ್ಪ

ಬೋಡ ಸಿದ್ದಪ್ಪ

ಜಟ್ಟಿ ಸಿದ್ದಪ್ಪ

ಕಂಬಳಿ ಸಿದ್ದಪ್ಪ

ಪುಲ್ಲಗಾರ ಸಿದ್ದಪ್ಪ

ತುಂಡು ಸಿದ್ದಪ್ಪ

ಹುಳ್ಳಿಕಾಳು ಸಿದ್ದಪ್ಪ

ಗುಡ್ಲುಮನೆ ಸಿದ್ದಪ್ಪ

ನಡುವುಲಮನೆ ಸಿದ್ದಪ್ಪ

ದಾಡಿ ಸಿದ್ದಪ್ಪ

ಮೀಸೆ ಸಿದ್ದಪ್ಪ

ಮೀಸೆ ಕೊಳ್ಳಪ್ಪ

ಕುರಿ ಸಿದ್ದಪ್ಪ

ಕುರಿ ಹನುಮಂತಪ್ಪ

ಲಾರಿ ಸಿದ್ದಪ್ಪ

ರಾಟೆ ಸಿದ್ದಪ್ಪ

ಗುಳಿಗುಳಿ ಸಿದ್ದಪ್ಪ

ಗುಳಿಗುಳಿ ಶಿವಾಜಿ

ಜೀಡಿ ಸಿದ್ದಪ್ಪ

ಕಟ್ಟೆಮನೆ ಸಿದ್ದಪ್ಪ

ಕಟ್ಟೆಮನೆ ಕೊಳ್ಳಪ್ಪ

ಕಿವುಡ ಸಿದ್ದಪ್ಪ

ಕುಲ್ಡ (ಕುರುಡ) ಸಿದ್ದಪ್ಪ

ಬೇಳೆ ಭೀಮಪ್ಪ

ಬೇಳೆ ಭೀಮಕ್ಕ

ಬಂದೂಕ ಸಿದ್ದಪ್ಪ

ಗುಡ್ಲು ಸಿದ್ದಪ್ಪ

ಮೂಸಂಡಿ ಸಿದ್ದಪ್ಪ

ತುಂಡು ಕೊಳ್ಳಪ್ಪ

ಅಂಗಡಿ ಕೊಳ್ಳಪ್ಪ

ಅಂಗಡಿ ಶಂಕರನಾಥ

ಅಂಗಡಿ ಭರಮಪ್ಪ

ಅಂಗಡಿ ವೀರೇಶ

ಕಂಶಿ ಸಿದ್ದಣ್ಣ

ಕಂಶಿ ಜಯಣ್ಣ

ಕಂಶಿ ದೇವಕ್ಕ

ಶೇಂದಿ ನಾಗಮ್ಮ

ಶೇಂದಿ ಹನುಮಂತಪ್ಪ

ಶೇಂದಿ ಸಿದ್ದಪ್ಪ

ಅಂಗಡಿ ಯಲ್ಲಪ್ಪ

ಅಂಗಡಿ ಸಿದ್ದಪ್ಪ

ಡಬ್ಬ ಸಿದ್ದಪ್ಪ

ಶೇಂದಿ ನಾಗರಾಜು

ಶೇಂದಿ ಪವಾಡಪ್ಪ

ಭಂಗಿ ಸಿದ್ದಪ್ಪ

ಭಂಗಿ ರೇಣುಕಪ್ಪ

ಉಳ್ಳಿ ಸಿದ್ದಪ್ಪ

ಬೆಳ್ಳಿ ಸಿದ್ದಪ್ಪ

ಕಂಶಿ ರಾಜಣ್ಣ

ಗುಳಿಗುಳಿ ಭರಮಪ್ಪ

ಶೇಂದಿ ಚಂದ್ರಪ್ಪ

ಕಂಶಿ ಮಹಾಸ್ವಾಮಿ

ಮಲ್ನಾಡ್ ಸಿದ್ದಪ್ಪ

ಕುಂಟ ಸಿದ್ದಪ್ಪ

ಗುಳಿಗುಳಿ ರೇವಣಸಿದ್ದಪ್ಪ

ಗುಳಿಗುಳಿ ಅಮೃತಪ್ಪ

ಹುರಳಿಕಾಳ್ ಸಿದ್ದಪ್ಪ

ಗುಳಿಗುಳಿ ರಾಮಮೂರ್ತಿ

ಗುಳಿಗುಳಿ ಸಣ್ಣರಾಮಪ್ಪ

ಕಂಶಿ ಭರಮಪ್ಪ

ಪೋಟೋ ತಿಪ್ಪೇಸ್ವಾಮಿ

ಈ ಮೇಲಿನ ಹೆಸರುಗಳನ್ನು ಗಮನಿಸಿದರೆ ಅನೇಕ ಅಂಶಗಳು ಗೋಚರಿಸುತ್ತವೆ. ಹೆಸರಿನ ಜೊತೆಯಲ್ಲಿ ಬಳಕೆಯಲ್ಲಿರುವ ಅಡ್ಡ ಹೆಸರುಗಳಲ್ಲಿ ಹೆಚ್ಚಿನವು ಸಮುದಾಯದಲ್ಲಿ ವ್ಯಕ್ತಿ ಮಾಡುವ ವೃತ್ತಿ ಸಂಬಂಧಿಯಾಗಿ ಬಳಕೆಯಲ್ಲಿರುವುದು ಕಂಡುಬರುತ್ತದೆ. ಶೇಂದಿ ಮಾರಾಟ, ಅಂಗಡಿ ವ್ಯಾಪಾರ, ಡಬ್ಬ ರಿಪೇರಿ ಹೀಗೆ ಅನೇಕ ಉಪವೃತ್ತಿಗಳಿಗೆ ಸಂಬಂಧಿಸಿದ ಅಡ್ಡ ಹೆಸರುಗಳು ಅಧಿಕವಾಗಿರುವುದು ಕಂಡುಬರುತ್ತದೆ.

**ವಿವರಣಾತ್ಮಕ ಮಾದರಿಯ ಹೆಸರುಗಳು**

ಹಂಡಿಜೋಗಿ ಸಮುದಾಯದಲ್ಲಿ ವಿವರಣಾತ್ಮಕ ಹೆಸರುಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ. ಸಮುದಾಯದಲ್ಲಿ ವ್ಯಕ್ತಿಯ ಹೆಸರಿನ ಜೊತೆಗೆ ಅವನ ಪೂರ್ವಜರ ಹೆಸರು ಬಳಕೆಯಲ್ಲಿರುತ್ತದೆ. (ಕೊಳ್ಳಪ್ಪರ ವೀರೇಶ, ಉಡಚಪ್ಪಗಳ ಸಿದ್ದಪ್ಪ, ಹುಚ್ಚಪ್ಪರ ಸಿದ್ದಪ್ಪ) ಸಮುದಾಯದಲ್ಲಿ ವ್ಯಕ್ತಿಯ ಹೆಸರಿನ ಜೊತೆಗೆ ಪೂರ್ವಜರ ಹೆಸರು ಆಧುನಿಕ ಸಂದರ್ಭದಲ್ಲೂ ಬಳಕೆಯಲ್ಲಿರುವುದು ಕಂಡುಬರುತ್ತದೆ.

ಸಮುದಾಯದಲ್ಲಿ ಕುಟುಂಬದಲ್ಲಿನ ಪೂರ್ವಜರ ಹೆಸರು (ಹಿರಿಯರ ಹೆಸರು) ಇಡೀ ಮನೆತನವನ್ನು ಪ್ರತಿನಿಧಿಸುತ್ತದೆ. ಅವನ ಕುಟುಂಬಕ್ಕೆ ಸೇರಿದ ಎಲ್ಲಾ ವ್ಯಕ್ತಿಯ ಹೆಸರುಗಳಲ್ಲಿ ಪೂರ್ವಜರ ಹೆಸರು ಸ್ಥಾನ ಪಡೆದಿರುವುದು ಕಂಡುಬರುತ್ತದೆ. ಅಂತಹ ವಿವರಣಾತ್ಮಕ ಮಾದರಿಯ ಹೆಸರುಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ. ಅವುಗಳೆಂದರೆ,

ಕೊಳ್ಳಪ್ಪರ ವೀರೇಶ

ಉಡುಚಪ್ಪಗಳ ಅಮೃತಪ್ಪ

ಉಡುಚಪ್ಪಗಳ ಸಿದ್ದಪ್ಪ

ಚಿಕ್ಕ ಸಿದ್ದಪ್ಪಗಳ ವನಿತಾ

ಸಣ್ಣ ಯಲ್ಲಪ್ಪರ ಸಿದ್ದೇಶ

ಗೌಡ್ರು ಯಲ್ಲಪ್ಪರ ರೇಖಮ್ಮ

ಈ ಮಾದರಿಯಲ್ಲಿ ಒಬ್ಬ ವ್ಯಕ್ತಿಯ ಹೆಸರು ಇಡೀ ಕುಟುಂಬದವರ ಹೆಸರಿನ ಜೊತೆಗೆ ಬಳಕೆಯಲ್ಲಿರುವುದನ್ನು ನೋಡಬಹುದಾಗಿದೆ. ಸಮುದಾಯದ ಮೂರನೇ ತಲೆಮಾರಿನ ವ್ಯಕ್ತಿಗಳ ಹೆಸರುಗಳು ಹಾಗೂ ಎರಡನೇ ತಲೆಮಾರಿನ ವ್ಯಕ್ತಿಗಳ ಹೆಸರುಗಳಲ್ಲಿ ಈ ಮಾದರಿಯ ಹೆಸರುಗಳಿರುವುದು ಕಂಡುಬರುತ್ತದೆ. ಒಟ್ಟಾರೆ ಹಂಡಿಜೋಗಿ ಸಮುದಾಯದ ವ್ಯಕ್ತಿನಾಮಗಳ ಅಧ್ಯಯನದಿಂದ ಈ ಕೆಳಗಿನ ಅಂಶಗಳನ್ನು ಗುರುತಿಸಲಾಗಿದೆ. ಅವುಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

ಹಂಡಿಜೋಗಿ ಸಮುದಾಯದ ವ್ಯಕ್ತಿನಾಮಗಳಲ್ಲಿನ ಪುರುಷರ ಹೆಸರುಗಳು ಅಧಿಕವಾಗಿ ದೈವಸಂಬಂಧಿಯಾಗಿರುವುದನ್ನು ಕಾಣಬಹುದಾಗಿದೆ. ಸಮುದಾಯದ ವ್ಯಕ್ತಿಗಳ ಹೆಸರಿನ ಮೇಲೆ ಕನ್ನಡದ ಪ್ರಭಾವವು ಅಧಿಕವಾಗಿರುವುದನ್ನು ಗುರುತಿಸಬಹುದಾಗಿದೆ. ಹಂಡಿಜೋಗಿಗಳು ಕನ್ನಡೇತರ ಮನೆಮಾತುಳ್ಳ ಸಮುದಾಯವಾಗಿದ್ದು, ತಮ್ಮ ಸಮುದಾಯದ ಮೂಲ ಭಾಷೆಗೆ ಸಂಬಂಧಿಸಿದ ಕೆಲವು ಹೆಸರುಗಳನ್ನು ಮಾತ್ರ ಸಮುದಾಯದಲ್ಲಿ ಗುರುತಿಸಬಹುದಾಗಿದೆ. ಅವುಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ. ಅವುಗಳೆಂದರೆ,

ಶಿವಾಜಿ

ಭವಾನಿ

ಶಾಂತಬಾಯಿ

ಮೇಸಾಯಿ (ಮೇಸಮ್ಮ)

ತುಕ್ಕಾಯಿ (ತುಕ್ಕಮ್ಮ)

ತುಳಸಮ್ಮ

ತುಳಸಪ್ಪ

ಎಂಬ ಹೆಸರುಗಳನ್ನು ಹೊರತುಪಡಿಸಿದರೆ ಮಿಕ್ಕೆಲ್ಲಾ ಹೆಸರುಗಳ ಮೇಲೆ ಕನ್ನಡ ಪ್ರಭಾವವಾಗಿರುವುದನ್ನು ಗುರುತಿಸಬಹುದಾಗಿದೆ.

ಸಮುದಾಯದಲ್ಲಿನ ಪುರುಷರ ಹೆಸರುಗಳು ದೈವಸಂಬಂಧಿಯಾಗಿದ್ದು, ಅವುಗಳನ್ನು ತಲೆಮಾರಿನಿಂದ ತಲೆಮಾರಿಗೆ ವಂಶಪಾರಂಪರ್ಯವಾಗಿ ಇಂದಿಗೂ ಸಂರಕ್ಷಿಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಸಮುದಾಯದ ಮೂಲ ಪುರುಷರಿಗೆ ಸಂಬಂಧಿಸಿದ ಹೆಸರುಗಳು ಸಹ ಬಳಕೆಯಲ್ಲಿರುವುದನ್ನು ಕಾಣಬಹುದಾಗಿದೆ. ಹಂಡಿಜೋಗಿ ಸಮುದಾಯದ ಸಂಸ್ಕೃತಿಯ ನಾಯಕನಾದ 'ಅರ್ಜುನ'ನ ಹೆಸರನ್ನು ಈ ಸಮುದಾಯದ ಪ್ರತಿಯೊಂದು ನೆಲೆಯಲ್ಲಿಯೂ ಕಾಣಬಹುದಾಗಿದೆ. ನಂತರ ಇವರು ಪರಮೇಶ್ವರನನ್ನು (ಶಿವನನ್ನು) ಸಿದ್ದ, ಸಿದ್ದಪ್ಪ, ಭೈರವ ಎಂದು ಕರೆಯುತ್ತಾರೆ. ಶಿವನಿಂದಲೇ ಸಮುದಾಯದ ಕುಲಸಂಕೇತಗಳನ್ನು ಪಡೆದುಕೊಳ್ಳಲಾಯಿತು ಎನ್ನುವ ಇವರಲ್ಲಿ ಸಿದ್ಧ, ಭೈರವ ಎಂಬ ಹೆಸರುಗಳು ಅಧಿಕ ಸಂಖ್ಯೆಯಲ್ಲಿರುವುದನ್ನು ಕಾಣಬಹುದಾಗಿದೆ.

ಜೊತೆಗೆ ಹಂಡಿಜೋಗಿ ಸಮುದಾಯದ ವ್ಯಕ್ತಿನಾಮಗಳಲ್ಲಿನ ಶಂಕರನಾಥ, ಪವಾಡನಾಥ, ಪ್ರೇಮನಾಥ, ಸಾರಂಗನಾಥ ಎಂಬ ಹೆಸರುಗಳು ನಾಥ ಪಂಥಕ್ಕೂ ಹಾಗೂ ಹಂಡಿಜೋಗಿ ಸಮುದಾಯಕ್ಕೂ ಇರುವ ಧಾರ್ಮಿಕ ಸಂಬಂಧವನ್ನು ಕುರಿತು ವಿವರಿಸುವ ಹೆಸರುಗಳಾಗಿವೆ. ಸಮುದಾಯದ ಪುರುಷರ ಹೆಸರಿನ ಪೂರ್ವದಲ್ಲಿ ಹಾಗೂ ಹೆಸರಿನ ಅಂತ್ಯದಲ್ಲಿ ಬರುವ ವೃತ್ತಿ, ಜನಾಂಗವಾಚಿಗಳಾದ ಜೋಗಿ, ದಳವಾಯಿ, ಗೌಡ, ಪಾಟೀಲ, ಪೂಜಾರಿ ಎಂಬ ರೂಪಗಳು ಕನ್ನಡದ ವಾರ್ಗಿಕಗಳಾಗಿದ್ದು ಇವುಗಳ ಪ್ರಭಾವ ಸಮುದಾಯದ ವ್ಯಕ್ತಿನಾಮಗಳ ಮೇಲೆ ಆಗಿರುವುದನ್ನು ಗುರುತಿಸಬಹುದಾಗಿದೆ.

ಸಮುದಾಯದ ಮಹಿಳೆಯರ ಹೆಸರಿನ ಮೇಲೆ ಕನ್ನಡದ ಪ್ರಭಾವವು ಅಧಿಕವಾಗಿರುವುದನ್ನು ಗುರುತಿಸಬಹುದಾಗಿದೆ. ಜೊತೆಗೆ ಸಮುದಾಯದ ಮಹಿಳೆಯರ ಹೆಸರುಗಳು ಹೆಚ್ಚು ಸ್ಥಳೀಯ ಕನ್ನಡ ಪರಿಸರಕ್ಕೆ ಸಂಬಂಧಿಸಿದವುಗಳಾಗಿರುವುದು ಕಂಡುಬರುತ್ತದೆ.

ಹಂಡಿಜೋಗಿ ಸಮುದಾಯದ ವ್ಯಕ್ತಿನಾಮಗಳನ್ನು ಗಮನಿಸಿದರೆ ಇನ್ನೂ ಅನೇಕ ಮಹತ್ವದ ಅಂಶಗಳು ದೊರೆಯುತ್ತವೆ. ಸಮುದಾಯದ ಸಂಸ್ಕೃತಿ, ಆಚರಣೆಗೆ ಸಂಬಂಧಿಸಿದ ಅನೇಕ ವಿವರಗಳು ಹೆಸರುಗಳಿಂದ ದೊರೆಯುತ್ತವೆ. ನಂತರ ತಲೆಮಾರುಗಳ ಹಿನ್ನೆಲೆಯಲ್ಲಿ ವ್ಯಕ್ತಿನಾಮಗಳ ಸ್ವರೂಪವನ್ನು ಇವುಗಳ ಮೂಲಕ ತಿಳಿದುಕೊಳ್ಳಬಹುದಾಗಿದೆ. ಅಂತಹ ಕೆಲವು ಸಾಂಸ್ಕೃತಿಕ ವಿವರಗಳನ್ನು ಈ ಕೆಳಗಿನಂತೆ ವಿವರಿಸಬಹುದಾಗಿದೆ.

ಹಂಡಿಜೋಗಿ ಸಮುದಾಯದ ವ್ಯಕ್ತಿನಾಮಗಳು ವಂಶಪಾರಂಪರ್ಯವಾಗಿ ತಲೆಮಾರಿನಿಂದ ತಲೆಮಾರಿಗೆ ಬಳಕೆಯಲ್ಲಿರುವುದು ಕಂಡುಬರುತ್ತದೆ. ವ್ಯಕ್ತಿನಾಮಗಳ ಈ ಪರಂಪರೆಯು ಎರಡನೇ ತಲೆಮಾರಿಗೆ ಸ್ವಲ್ಪ ಪ್ರಮಾಣದಲ್ಲಿ ಹಿಂದೆ ಸರಿದಿದ್ದು, ಮೂರನೇ ತಲೆಮಾರಿನ ಹೆಸರುಗಳು ಸಂಪೂರ್ಣವಾಗಿ ಭಿನ್ನವಾಗಿರುವುದನ್ನು ಗುರುತಿಸಬಹುದಾಗಿದೆ. ಈ ಪಾರಂಪರಿಕ ವ್ಯಕ್ತಿನಾಮಗಳ

ಪ್ರಕ್ರಿಯೆಯು ಮಹಿಳೆಯರ ಹೆಸರುಗಳಲ್ಲೂ ಕಂಡುಬರುತ್ತದೆ. ಮೊದಲನೇ ಮತ್ತು ಎರಡನೇ ತಲೆಮಾರಿನ ಮಹಿಳೆಯರ ಹೆಸರುಗಳು ವೃತ್ತಿವಾಚಿ, ಸಮುದಾಯವಾಚಿ, ದೈವವಾಚಿಗೆ ಸಂಬಧಿಸಿದವುಗಳಾಗಿದ್ದು, ಮೂರನೇ ತಲೆಮಾರಿನ ಮಹಿಳೆಯರ ಹೆಸರುಗಳು ಹೆಚ್ಚು ಆಧುನೀಕರಣಗೊಂಡಿರುವುದನ್ನು ಕಾಣಬಹುದಾಗಿದೆ.

ಸಮುದಾಯದಲ್ಲಿನ ಮೂರು ತಲೆಮಾರುಗಳಲ್ಲಿನ ಹೆಸರುಗಳನ್ನು ಗಮನಿಸಿದರೆ ವ್ಯಕ್ತಿನಾಮಗಳು ತಲೆಮಾರಿನಿಂದ ತಲೆಮಾರಿಗೆ ಹೆಸರಿನ ನಿರ್ಧಿಷ್ಟ ಘಟಕದಲ್ಲಿ ಬದಲಾವಣೆಗಳಾಗಿರುವುದು ಕಂಡುಬರುತ್ತದೆ. ಈ ಬದಲಾವಣೆ ಮೊದಲನೇ ಮತ್ತು ಎರಡನೇ ತಲೆಮಾರಿನವರ ಹೆಸರುಗಳಲ್ಲಿ ಅಲ್ಪಪ್ರಮಾಣದಲ್ಲಿದ್ದು, ಮೂರನೇ ತಲೆಮಾರಿನವರ ಹೆಸರುಗಳು ಸಂಪೂರ್ಣವಾಗಿ ಭಿನ್ನತೆಯಿಂದ ಕೂಡಿರುವುದನ್ನು ಗುರುತಿಸಬಹುದಾಗಿದೆ. ಈ ಬದಲಾವಣೆಯ ಪ್ರಕ್ರಿಯೆಯನ್ನು ಸಮುದಾಯದ ಪುರುಷ ಹಾಗೂ ಮಹಿಳೆಯರಿಬ್ಬರ ಹೆಸರುಗಳಲ್ಲಿ ಗುರುತಿಸಬಹುದಾಗಿದೆ.

ಹೀಗೆ ಸಮುದಾಯದ ಮೊದಲನೇ ತಲೆಮಾರಿನ ವಾರ್ಗಿಕಗಳಲ್ಲಿನ ಹೆಚ್ಚಿನ ಘಟಕಗಳು ಸಮುದಾಯದಲ್ಲಿನ ವ್ಯಕ್ತಿಗಳ ವೃತ್ತಿ, ಅಧಿಕಾರ ಹಾಗೂ ಜಾತಿಗೆ ಸಂಬಂಧಿಸಿದವುಗಳಾಗಿರುವುದು ಕಂಡುಬರುತ್ತದೆ. ಸಮುದಾಯದ ವ್ಯಕ್ತಿಗಳ ಹೆಸರಿನಲ್ಲಿರುವ ಈ ವೃತ್ತಿವಾಚಿ, ಜಾತಿವಾಚಿ, ಸಮುದಾಯವಾಚಿ ವಾರ್ಗಿಕಗಳ ಬಳಕೆ ಎರಡನೇ ತಲೆಮಾರಿನ ಹೆಸರುಗಳಲ್ಲಿ ಸ್ವಲ್ಪ ಪ್ರಮಾಣದಲ್ಲಿ ಹಿಂದೆ ಸರಿದಿರುವುದು ಕಂಡುಬರುತ್ತದೆ.

**೫.೬. ಸ್ಥಳನಾಮಗಳು**

ಸ್ಥಳನಾಮಗಳನ್ನು ಕುರಿತ ಅಧ್ಯಯನವನ್ನು ಆಂಗ್ಲ ಭಾಷೆಯಲ್ಲಿ Toponymy ಎಂದು ಕರೆಯುತ್ತಾರೆ. Toponymy ಎಂಬ ಪದವು ಮೂಲತಹ ಗ್ರೀಕ್ ಪದವಾಗಿದ್ದು ಇದು Topos (ಟೋಪೊಸ್) ಮತ್ತು Nomos (ನೋಮೋಸ್) ಎಂಬ ಎರಡು ಪದಗಳಿಂದ ಕೂಡಿದ್ದುದಾಗಿದೆ. Topos (ಟೋಪೋಸ್) ಎಂದರೆ ಸ್ಥಳವೆಂದೂ, Nomos (ನೋಮೋಸ್) ಎಂದರೆ ಅದನ್ನು ಕುರಿತಾದ ಅಧ್ಯಯನ ಎಂದು ವಿದ್ವಾಂಸರು ಗುರುತಿಸಿದ್ದಾರೆ

ಸಾಮಾನ್ಯವಾಗಿ ಸ್ಥಳನಾಮಗಳು ಸಂಯುಕ್ತ ಪದಗಳಾಗಿದ್ದು, ಎರಡಕ್ಕಿಂತ ಹೆಚ್ಚು ಪದಗಳಿಂದ ಕೂಡಿರುವುದು ಕಂಡುಬರುತ್ತದೆ. ಸ್ಥಳನಾಮಗಳು ಪುರಾತನ (ಪ್ರಾಚೀನ) ಕಾಲದಿಂದಲೂ ಸಕ್ರಿಯವಾಗಿ ಬಳಕೆಯಲ್ಲಿರುವುದು ಕಂಡುಬರುತ್ತದೆ. ಭಾಷಾವಿಜ್ಞಾನಿಗಳು ಸ್ಥಳನಾಮಗಳನ್ನು ರಾಚನಿಕವಾಗಿ ಪೂರ್ವಪದ ಮತ್ತು ಉತ್ತರಪದ ಎಂಬ ಎರಡು ಘಟಕಗಳಿಂದ ಕೂಡಿರುತ್ತದೆ ಎಂದು ವಿವರಿಸಿದ್ದಾರೆ. ಭಾಷಾವಿಜ್ಞಾನಿಗಳು ಸ್ಥಳನಾಮದಲ್ಲಿನ ಪೂರ್ವಪದವನ್ನು 'ಪ್ರಿಫಿಕ್ಸ್' ಎಂದೂ ಉತ್ತರ ಪದವನ್ನು 'ಸಫಿಕ್ಸ್' ಎಂದು ಗುರುತಿಸಿದ್ದಾರೆ. ಸ್ಥಳನಾಮದಲ್ಲಿನ ಪೂರ್ವಪದವು ವಿಶಿಷ್ಟ ಅರ್ಥದಿಂದ ಕೂಡಿದ್ದು, ಇದು ಊರನ್ನು ಖಚಿತವಾಗಿ ಗುರುತಿಸುವಲ್ಲಿ ಪ್ರಮುಖವಾಗಿರುತ್ತದೆ. ಹಾಗಾಗಿ ಸ್ಥಳನಾಮದಲ್ಲಿನ ಈ ಘಟಕವನ್ನು ನಿರ್ಧಿಷ್ಟ ಘಟಕ (ಸ್ಪೆಸಿಫಿಕ್ ಯೂನಿಟ್) ಎಂದು ಕರೆಯುತ್ತಾರೆ. ಇನ್ನು

ಸ್ಥಳನಾಮದ ಉತ್ತರ ಪದದಲ್ಲಿ ಕಂಡುಬರುವ ಗ್ರಾಮನಾಮ ಸೂಚಿಗಳಾದ ಪುರ, ಊರು, ಹಳ್ಳಿ, ಕೋಟೆ, ದುರ್ಗ, ಬೆಟ್ಟ, ಗುಡ್ಡ, ಗಿರಿ, ಕಟ್ಟೆ, ಬಾವಿ, ಕೊಳ್ಳ, ದಿನ್ನೆ, ವಾಡೆ, ಹೊಳೆ, ಪಟ್ಟಣ, ಪೇಟೆ, ನಗರ, ಕುಂಟೆ, ಕೆರೆ, ಮರಡಿ, ಕುಪ್ಪೆ, ಕೊಪ್ಪ ಇನ್ನೂ ಮೊದಲಾದ ಘಟಕಗಳಿಂದ ಕೂಡಿದ ಉತ್ತರ ಪದವನ್ನು 'ವಾರ್ಗಿಕ' ಘಟಕ ಎಂದು ಕರೆಯುತ್ತಾರೆ.

ಸ್ಥಳನಾಮಗಳು ಪ್ರಾದೇಶಿಕ ಮತ್ತು ಸಾಂಸ್ಕೃತಿಕವಾಗಿ ಅನೇಕ ವಿವರಗಳನ್ನು ಅರಿಯಲು ಹೆಚ್ಚು ಸಹಕಾರಿಯಾಗಿರುವುದು ಕಂಡುಬರುತ್ತದೆ. ಸ್ಥಳನಾಮಗಳು ಪ್ರಾಕೃತಿಕ ಲಕ್ಷಣಗಳಿಗೆ ಸಂಬಂಧಿಸಿದ ಮಹತ್ವದ ವಿವರಗಳನ್ನು ಒದಗಿಸುವಂತಹವುಗಳಾಗಿವೆ. ಒಂದು ಪ್ರದೇಶದ ನಿಸರ್ಗ ಸಂಪತ್ತು, ಅದರಲ್ಲೂ ಪ್ರಮುಖವಾಗಿ ಭೂಸ್ಥಿರವಾಚಿ, ಜಲವಾಚಿ, ಶಿಲಾವಾಚಿ (ಬೆಟ್ಟಗುಡ್ಡ), ಸಸ್ಯಸಂಪತ್ತು, ಪ್ರಾಣಿಸಂಕುಲ, ಅರಣ್ಯ ಸಂಪತ್ತು ಮೊದಲಾದ ವಿಷಯಗಳ ಕುರಿತಾದ ಮಾಹಿತಿಯನ್ನು ಒದಗಿಸುವ ಪ್ರಧಾನ ಆಕರಗಳಾಗಿವೆ. ಜೊತೆಗೆ ಸ್ಥಳನಾಮಗಳು ಸಾಂಸ್ಕೃತಿಕವಾಗಿ ಒಂದು ಜನಾಂಗದ (ಜಾತಿ) ಒಂದು ಪ್ರದೇಶದ ಆಚರಣೆ, ಸಂಪ್ರದಾಯ ಮೊದಲಾದವುಗಳ ಜೊತೆಗೆ ಸಮುದಾಯವೊಂದರ ವೃತ್ತಿ ಮತ್ತು ದೈವಗಳಿಗೆ ಸಂಬಂಧಿಸಿದ ವಿವರಗಳನ್ನು ಒದಗಿಸುವ ಮಹತ್ವದ ಆಕರಗಳಾಗಿವೆ. ಅಲ್ಲದೆ ಪುರಾಣ, ಚಾರಿತ್ರಿಕ ವ್ಯಕ್ತಿಗಳಿಗೆ ಸಂಬಂಧಿಸಿದ ಅನೇಕ ವಿವರಗಳನ್ನು ಸಹ ಸ್ಥಳನಾಮಗಳು ಒದಗಿಸುತ್ತವೆ. ಪ್ರಮುಖವಾಗಿ ಒಂದು ಪ್ರದೇಶದ ಭಾಷಿಕ ವಿವರಗಳನ್ನು ತಿಳಿಯಲು ಸ್ಥಳನಾಮಗಳು ಹೆಚ್ಚು ಸಹಕಾರಿಯಾಗಿರುವುದು ಕಂಡುಬರುತ್ತದೆ. ಒಂದು ಭಾಷೆಗೆ ಸಂಬಂಧಿಸಿದ ಚಾರಿತ್ರಿಕ ವಿವರಗಳನ್ನು ಅರಿಯಲು ಸ್ಥಳನಾಮಗಳು ಪ್ರಧಾನ ಆಕರಗಳಾಗಿರುತ್ತವೆ. ಚಾರಿತ್ರಿಕವಾಗಿ ಒಂದು ಭಾಷೆಯಲ್ಲಾದ ಬದಲಾವಣೆಯನ್ನು ಗುರುತಿಸಲು ಇವು ಹೆಚ್ಚು ಸಹಕಾರಿಯಾಗುತ್ತವೆ.

ಪ್ರಸ್ತುತ ಈ ಪ್ರಬಂಧದಲ್ಲಿ ಹಂಡಿಜೋಗಿ ಸಮುದಾಯದ ದೈವಗಳನ್ನು ಕುರಿತಾದ ಸ್ಥಳನಾಮಗಳು ಮತ್ತು ಸಮುದಾಯದ ಜನಾಂಗದ ಹೆಸರನ್ನು ಕುರಿತಾದ ಸ್ಥಳನಾಮಗಳನ್ನು ಮಾತ್ರ ವಿವರಿಸಲಾಗಿದೆ. ಈಗಾಗಲೇ ವಿದ್ವಾಂಸರು ಸ್ಥಳನಾಮಗಳನ್ನು ವರ್ಗೀಕರಿಸಿರುವ ಕ್ರಮದಲ್ಲಿಯೇ ಸ್ಥಳನಾಮಗಳನ್ನು ವರ್ಗೀಕರಿಸಿಕೊಂಡು ಅಭ್ಯಸಿಸಲಾಗಿದೆ. ಇಲ್ಲಿ ಪ್ರಧಾನವಾಗಿ ಹಂಡಿಜೋಗಿ ಸಮುದಾಯದ ಸಾಂಸ್ಕೃತಿಕ ಕೇಂದ್ರವಾದ ಶ್ರೀ ನುಂಕೆಮಲೆ ಸಿದ್ದೇಶ್ವರ ಮಠದ ಪರಿಸರದಲ್ಲಿನ ಪ್ರಧಾನ (ಪ್ರಮುಖ ದೈವಸಂಬಂಧಿ, ಜಾತಿಸಂಬಂಧಿ) ಸ್ಥಳನಾಮಗಳನ್ನು ಮಾತ್ರ ಆಯ್ದುಕೊಳ್ಳಲಾಗಿದೆ. ಅಂತಹ ಪ್ರಧಾನ ಸ್ಥಳನಾಮಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

ನುಂಕೆಮಲೆ – (ಮೊಳಕಾಲ್ಮೂರು ತಾಲೂಕಿನಲ್ಲಿದೆ)

ದೇವರಹಟ್ಟಿ – (ಮೊಳಕಾಲ್ಮೂರು ತಾಲೂಕಿನಲ್ಲಿದೆ)

ಸಿದ್ದಾಪುರ – (ಈ ಹೆಸರಿನ ಗ್ರಾಮಗಳು ಮೊಳಕಾಲ್ಮೂರು, ಚಳ್ಳಕೆರೆ, ಕೂಡ್ಲಿಗಿ ಮತ್ತು ಜಗಳೂರು ತಾಲೂಕಿನಲ್ಲಿವೆ)

ಜೋಗಿಮಟ್ಟಿ – (ಚಿತ್ರದುರ್ಗ ತಾಲೂಕಿನಲ್ಲಿದೆ)

ಭೈರಾಪುರ – (ಮೊಳಕಾಲ್ಮೂರು ತಾಲೂಕಿನಲ್ಲಿದೆ)

ಭೈರನಕಲ್ – (ಚಿತ್ರದುರ್ಗ ತಾಲೂಕಿನಲ್ಲಿದೆ)

ಭೈರವತೀರ್ಥ – (ಸಂಡೂರು ತಾಲೂಕಿನಲ್ಲಿದೆ)

ಜೋಗಿಕಲ್ – (ಸಂಡೂರು ತಾಲೂಕಿನಲ್ಲಿದೆ)

ಜೋಗಿಹಳ್ಳಿ – (ಜಗಳೂರು ತಾಲೂಕಿನಲ್ಲಿದೆ)

ಜೋಗಿಹಟ್ಟಿ – (ಚಳ್ಳಕೆರೆ ತಾಲೂಕಿನಲ್ಲಿದೆ)

ದೇವರಹಳ್ಳಿ – (ಚಳ್ಳಕೆರೆ ತಾಲೂಕಿನಲ್ಲಿದೆ)

ಸಿದ್ದಯ್ಯನ ಕೋಟೆ – (ಈ ಹೆಸರಿನ ಗ್ರಾಮಗಳು ಮೊಳಕಾಲ್ಮೂರು, ಜಗಳೂರು ಮತ್ತು ಕೂಡ್ಲಿಗಿ ತಾಲೂಕಿನಲ್ಲಿವೆ)

ಸಿದ್ದೇಶ್ವರದುರ್ಗ – (ಚಳ್ಳಕೆರೆ ತಾಲೂಕಿನಲ್ಲಿದೆ)

ಪುರಬೋರನಹಳ್ಳಿ – (ಮೊಳಕಾಲ್ಮೂರು ತಾಲೂಕಿನಲ್ಲಿದೆ)

ಭೈರನಾಯಕನಹಳ್ಳಿ – (ಜಗಳೂರು ತಾಲೂಕಿನಲ್ಲಿದೆ)

ರಾಮಜೋಗಿಹಳ್ಳಿ – (ಚಳ್ಳಕೆರೆ ತಾಲೂಕಿನಲ್ಲಿದೆ)

ವಾರಿಜೋಗಿಹಳ್ಳಿ – (ಚಳ್ಳಕೆರೆ ತಾಲೂಕಿನಲ್ಲಿದೆ)

ಯರಪೋತ ಜೋಗಿಹಳ್ಳಿ – (ಮೊಳಕಾಲ್ಮೂರು ತಾಲೂಕಿನಲ್ಲಿದೆ)

ಮಠದ ಜೋಗಿಹಳ್ಳಿ – (ಮೊಳಕಾಲ್ಮೂರು ತಾಲೂಕಿನಲ್ಲಿದೆ)

ಚಿಕ್ಕಜೋಗಿಹಳ್ಳಿ – (ಕೂಡ್ಲಿಗಿ ತಾಲೂಕಿನಲ್ಲಿದೆ)

ಅಮರದೇವರಗುಡ್ಡ – (ಕೂಡ್ಲಿಗಿ ತಾಲೂಕಿನಲ್ಲಿದೆ)

ಭೈರದೇವರಗುಡ್ಡ – (ಕೂಡ್ಲಿಗಿ ತಾಲೂಕಿನಲ್ಲಿದೆ)

ದೇವಗೊಂಡನಹಳ್ಳಿ – (ಹಡಗಲಿ ತಾಲೂಕಿನಲ್ಲಿದೆ)

ಮೇಲೆ ಹೆಸರಿಸಿದ ಸ್ಥಳನಾಮಗಳನ್ನೇ ಅಧ್ಯಯನಕ್ಕೆ ಆಯ್ದುಕೊಳ್ಳಲು ಕಾರಣವೆಂದರೆ, ಮೇಲಿನ ಸ್ಥಳನಾಮಗಳ ಹೆಸರುಗಳೆಲ್ಲವೂ ಸಹ ಹಂಡಿಜೋಗಿ ಸಮುದಾಯದ ದೈವ ಹಾಗೂ ಸಮುದಾಯ ವಾಚಿಗಳಾಗಿರುವುದು ಮತ್ತು ಕೆಲವು ಸ್ಥಳನಾಮಗಳು ಹಂಡಿಜೋಗಿಗಳ ನೆಲೆಗಳೇ ಆಗಿರುವುದು. ಅವುಗಳೆಂದರೆ,

ದೇವರಹಳ್ಳಿ (ಚಳ್ಳಕೆರೆ)

ದೇವಗೊಂಡನಹಳ್ಳಿ (ಹಡಗಲಿ)

ಚಿಕ್ಕಜೋಗಿಹಳ್ಳಿ (ಕೂಡ್ಲಿಗಿ)

ಮೇಲೆ ಹೆಸರಿಸಿದ ಗ್ರಾಮಗಳಲ್ಲಿ ಲಿಂಗಾಯತರು, ಕುರುಬರು, ಗೊಲ್ಲರು, ಜೋಗಿಗಳು, ದಲಿತರು, ಮ್ಯಾಸಬೇಡರು ಮುಂತಾದ ಸಮುದಾಯದವರು ಅಧಿಕ ಸಂಖ್ಯೆಯಲ್ಲಿ ನೆಲೆಸಿರುವುದು ಕಂಡುಬರುತ್ತದೆ. ಮೇಲೆ ಹೆಸರಿಸಿದ ಎಲ್ಲಾ ಸಮುದಾಯದವರೂ ಸಹ ನುಂಕೆಮಲೆ ಸಿದ್ದಪ್ಪನ ಭಕ್ತರಾಗಿರುವುದು ಕಂಡುಬರುತ್ತದೆ. ಮೇಲಿನ ಸಮುದಾಯದವರು ನುಂಕೆಮಲೆಸಿದ್ದೇಶ್ವರನನ್ನು ಒಂದೊಂದು ಸಮುದಾಯದವರು ಒಂದು ಹೆಸರಿನಲ್ಲಿ ಪೂಜಿಸುತ್ತಿರುವುದನ್ನು ಗುರುತಿಸಬಹುದಾಗಿದೆ.

ಕುರುಬ ಸಮುದಾಯ, ಲಿಂಗಾಯತ ಸಮುದಾಯ ಮತ್ತು ಗೊಲ್ಲ ಸಮುದಾಯದವರು ನುಂಕೆಮಲೆ ಸಿದ್ದೇಶ್ವರನನ್ನು 'ಸಿದ್ದಪ್ಪ' ಎಂಬ ಹೆಸರಿನಿಂದ ಕರೆಯುತ್ತಿರುವುದು (ಪೂಜಿಸುತ್ತಿರುವುದು) ಕಂಡುಬರುತ್ತದೆ. ನುಂಕೆಮಲೆ ಪರಿಸರದಲ್ಲಿ ನೆಲೆಸಿರುವ ಕಾಪಾಲಿಕರು ಮತ್ತು ಜೋಗಿಗಳು ಈ ದೈವವನ್ನು 'ಭೈರವ', ಕಾಲಭೈರವ ಎಂಬ ಹೆಸರಿನಲ್ಲಿ ಪೂಜಿಸುತ್ತಿರುವುದು ಕಂಡುಬರುತ್ತದೆ. ಜೊತೆಗೆ ಜೋಗಿಗಳು ಭೈರವನನ್ನು 'ದೇವರು' ಎಂಬ ಹೆಸರಿನಿಂದಲೂ ಕರೆಯುವುದನ್ನು ಗುರುತಿಸಬಹುದಾಗಿದೆ.

ಇನ್ನೂ ಮ್ಯಾಸಬೇಡರು ಮತ್ತು ದಲಿತರು ನುಂಕೆಮಲೆ ಸಿದ್ದೇಶ್ವರನನ್ನು ಸಿದ್ದಪ್ಪ, ನುಂಕಪ್ಪ ಎಂಬ ಹೆಸರುಗಳಿಂದ ಪೂಜಿಸುತ್ತಿರುವುದು ಕಂಡುಬರುತ್ತದೆ. ಮೇಲಿನ ಬಹುತೇಕ ಸ್ಥಳನಾಮಗಳ ಹೆಸರುಗಳು ಭೈರವ ದೈವ ಸಂಬಂಧಿಯಾಗಿರುವುದನ್ನು ಗುರುತಿಸಬಹುದಾಗಿದೆ.

ಮೇಲಿನ ಸ್ಥಳನಾಮಗಳನ್ನು ರಾಚನಿಕವಾಗಿ ಈ ಕೆಳಗಿನಂತೆ ವಿವರಿಸಬಹುದಾಗಿದೆ. ರಾಚನಿಕವಾಗಿ ಸ್ಥಳನಾಮಗಳಲ್ಲಿನ ನಿರ್ದಿಷ್ಟ ಮತ್ತು ವಾರ್ಗಿಕಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

**೧. ನಿರ್ದಿಷ್ಟ + ವಾರ್ಗಿಕ = ಸ್ಥಳನಾಮ**

ನುಂಕೆ + ಮಲೆ = ನುಂಕೆಮಲೆ

ದೇವರ + ಗುಡ್ಡ = ದೇವರಗುಡ್ಡ

ದೇವರ + ಬೆಟ್ಟ = ದೇವರಬೆಟ್ಟ

ಭೈರವ + ಪುರ = ಭೈರಾಪುರ

ದೇವರ + ಹಟ್ಟಿ = ದೇವರಹಟ್ಟಿ

ಸಿದ್ದ + ಪುರ = ಸಿದ್ದಾಪುರ

ಭೈರನ + ಕಲ್ = ಭೈರನಕಲ್

ಜೋಗಿ + ಕಲ್ = ಜೋಗಿಕಲ್

ಭೈರವ + ತೀರ್ಥ = ಭೈರವತೀರ್ಥ

ಜೋಗಿ + ಮಟ್ಟಿ = ಜೋಗಿಮಟ್ಟಿ

ಜೋಗಿ + ಹಟ್ಟಿ = ಜೋಗಿಹಟ್ಟಿ

ಜೋಗಿ + ಹಳ್ಳಿ = ಜೋಗಿಹಳ್ಳಿ

ದೇವರ + ಹಳ್ಳಿ = ದೇವರಹಳ್ಳಿ

**೨. ನಿರ್ದಿಷ್ಟ + ವಾರ್ಗಿಕ + ವಾರ್ಗಿಕ = ಸ್ಥಳನಾಮ**

ಸಿದ್ದ + ಅಯ್ಯ + ಕೋಟೆ = ಸಿದ್ದಯ್ಯನಕೋಟೆ

ಭೈರ + ನಾಯಕ + ಹಳ್ಳಿ = ಭೈರನಾಯಕನಹಳ್ಳಿ

ವಾರಿ + ಜೋಗಿ + ಹಳ್ಳಿ = ವಾರಿಜೋಗಿಹಳ್ಳಿ

ರಾಮ + ಜೋಗಿ + ಹಳ್ಳಿ = ರಾಮಜೋಗಿಹಳ್ಳಿ

ಮಠದ + ಜೋಗಿ + ಹಳ್ಳಿ = ಮಠದಜೋಗಿಹಳ್ಳಿ

ಚಿಕ್ಕ + ಜೋಗಿ + ಹಳ್ಳಿ = ಚಿಕ್ಕಜೋಗಿಹಳ್ಳಿ

ಯರಪೋತ + ಜೋಗಿ + ಹಳ್ಳಿ = ಯರಪೋತಜೋಗಿಹಳ್ಳಿ

**೩. ನಿರ್ದಿಷ್ಟ ಮತ್ತು ನಿರ್ದಿಷ್ಟ ಹಾಗೂ ವಾರ್ಗಿಕ ಘಟಕಗಳಿಂದ ಕೂಡಿದ ಸ್ಥಳನಾಮಗಳನ್ನು ಈ ಕೆಳಗಿನಂತೆ ವಿಭಾಗಿಸಲಾಗಿದೆ.**

**ನಿರ್ದಿಷ್ಟ + ನಿರ್ದಿಷ್ಟ + ವಾರ್ಗಿಕ = ಸ್ಥಳನಾಮ**

ಸಿದ್ದ + ಈಶ್ವರ + ದುರ್ಗ = ಸಿದ್ದೇಶ್ವರದುರ್ಗ

ಭೈರ + ದೇವರು + ಗುಡ್ಡ = ಭೈರದೇವರಗುಡ್ಡ

ಅಮರ + ದೇವರು + ಗುಡ್ಡ = ಅಮರದೇವರಗುಡ್ಡ

ಈ ಮೇಲಿನ ಎಲ್ಲಾ ಸ್ಥಳನಾಮಗಳು ಈಶ್ವರ (ಶಿವ) ಸಿದ್ದ (ಭೈರವ)ನಿಗೆ ಸಂಬಂಧಿಸಿದ ಹಾಗೂ ಆ ಸ್ಥಳದ ಪ್ರಾಕೃತಿಕ ಲಕ್ಷಣಗಳನ್ನು ವಿವರಿಸುವ ಸ್ಥಳನಾಮಗಳಾಗಿವೆ. ಇನ್ನೂ ಕೆಲವು ಸಮುದಾಯವಾಚಿ (ಜೋಗಿ) ಸ್ಥಳನಾಮಗಳಾಗಿರುವುದು ಕಂಡುಬರುತ್ತದೆ. ಮೇಲಿನ ಸ್ಥಳನಾಮಗಳನ್ನು ಈ ಕೆಳಗಿನಂತೆ ವರ್ಗೀಕರಿಸಿಕೊಂಡು ಅಭ್ಯಸಿಸಲಾಗುವುದು.

### ೫.೬.೧. ಸ್ಥಳನಾಮಗಳ ವರ್ಗೀಕರಣ

ಪ್ರಾಕೃತಿಕ ಸ್ಥಳನಾಮಗಳು

ಸಾಂಸ್ಕೃತಿಕ ಸ್ಥಳನಾಮಗಳು

**ಪ್ರಾಕೃತಿಕ ಸ್ಥಳನಾಮಗಳು**

ಗ್ರಾಮನಾಮಗಳಲ್ಲಿ ಹೆಚ್ಚು ಪುರಾತನ ಮತ್ತು ಪ್ರಾಚೀನವಾದ ಸ್ಥಳನಾಮಗಳೆಂದರೆ ಪ್ರಾಕೃತಿಕ (ನಿಸರ್ಗ) ಸ್ಥಳನಾಮಗಳು. ಪ್ರಾಚೀನ ಕಾಲದಲ್ಲಿ ಮಾನವನು ಗಿರಿ, ಪರ್ವತ, ಬೆಟ್ಟ, ಗುಡ್ಡ, ಕಣಿವೆ, ಕಲ್ಲು (ಬಂಡೆ) ಮೊದಲಾದ ಪ್ರದೇಶಗಳಲ್ಲಿ ವಾಸಿಸುತ್ತಿದ್ದರಿಂದ ಅವುಗಳ ಹೆಸರುಗಳೇ ಮಾನವನ ವಾಸದ ನೆಲೆಗಳ ಹೆಸರುಗಳಾಗಿರುವುದು ಕಂಡುಬರುತ್ತದೆ. ಭೌಗೋಳಿಕ ಲಕ್ಷಣಗಳಿಗನುಗುಣವಾಗಿ ತಾನು ನೆಲೆಸಿದ ನೆಲೆಗೆ ಹೆಸರನ್ನು ಕೊಡುವ ಕ್ರಮ ಮೊದಲು ಪ್ರಾರಂಭವಾಯಿತು. ಅಂತಹ ಪ್ರಾಕೃತಿಕ ಲಕ್ಷಣಗಳನ್ನು ಒಳಗೊಂಡಿರುವ ಹೆಸರುಗಳು ಭೂ ಮೇಲ್ಮೈಲಕ್ಷಣ, ಖನಿಜ ಸಂಪತ್ತು, ಶಿಲೆ, ನೀರು, ಸಸ್ಯವರ್ಗಕ್ಕೆ ಸಂಬಂಧಿಸಿದವುಗಳಾಗಿರುವುದನ್ನು ಗುರುತಿಸಬಹುದಾಗಿದೆ. ಪ್ರಾಕೃತಿಕ ಲಕ್ಷಣಗಳಿಗನುಗುಣವಾಗಿ ಮೇಲಿನ ಸ್ಥಳನಾಮಗಳನ್ನು ಪುನಃ ಕೆಲವು ವರ್ಗದಲ್ಲಿ ಈ ಕೆಳಗಿನಂತೆ ವರ್ಗೀಕರಿಸಿಕೊಳ್ಳಬಹುದಾಗಿದೆ.

ಭೂವಾಚಿ (ಶಿಲಾವಾಚಿ) ಸ್ಥಳನಾಮಗಳು

ಜಲವಾಚಿ ಸ್ಥಳನಾಮಗಳು.

**ಭೂವಾಚಿ (ಶಿಲಾವಾಚಿ) ಸ್ಥಳನಾಮಗಳು**

ಭೌಗೋಳಿಕ ಪ್ರದೇಶಕ್ಕನುಗುಣವಾಗಿ ಬೆಟ್ಟ, ಗುಡ್ಡ, ಶಿಲೆ, ಕಲ್ಲು, ಮರಡಿ, ಮಣ್ಣು, ಗಿರಿ ಮೊದಲಾದ ಹೆಸರುಗಳಲ್ಲಿರುವ ಸ್ಥಳನಾಮಗಳನ್ನು ಭೂವಾಚಿ ಅಥವಾ ಶಿಲಾವಾಚಿ ಸ್ಥಳನಾಮಗಳು ಎಂದು ಕರೆದಿದ್ದಾರೆ. ಅಂತಹ ಶಿಲಾವಾಚಿ ಸ್ಥಳನಾಮಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

**ಶಿಲಾವಾಚಿ (ಭೂವಾಚಿ) ಸ್ಥಳನಾಮಗಳು**

ಪ್ರಾಕೃತಿಕ ಲಕ್ಷಣಗಳನ್ನು ಸೂಚಿಸುವ ಸ್ಥಳನಾಮಗಳಲ್ಲಿ ಶಿಲಾವಾಚಿ ಸ್ಥಳನಾಮಗಳು ಅತ್ಯಂತ ಪುರಾತನವಾದವುಗಳಾಗಿವೆ. ಶಿಲೆಯ ಅರ್ಥ ಬರುವ ಕಲ್ಲು, ಬಂಡೆ, ಗುಡ್ಡ, ಬೆಟ್ಟ, ದುರ್ಗ, ಕೋಟೆ ಎಂಬ ಮೊದಲಾದ ಪದಗಳು ಶಿಲಾವಾಚಿ ಘಟಕಗಳಾಗಿವೆ. ಹಂಡಿಜೋಗಿ ಸಮುದಾಯಕ್ಕೆ ಸಂಬಂಧಿಸಿದ ಶಿಲಾವಾಚಿ ಸ್ಥಳನಾಮಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

ದೇವರಗುಡ್ಡ

ದೇವರಬೆಟ್ಟ

ನುಂಕೆಮಲೆ

ಜೋಗಿಮಟ್ಟಿ

ಜೋಗಿಕಲ್

ಭೈರನಕಲ್

ಸಿದ್ದೇಶ್ವರದುರ್ಗ

ಸಿದ್ದಯ್ಯನಕೋಟೆ

ಭೈರದೇವರಗುಡ್ಡ

ಅಮರದೇವರಗುಡ್ಡ

ಮೇಲಿನ ಸ್ಥಳನಾಮಗಳ ಉತ್ತರ ಪದದಲ್ಲಿನ ವಾರ್ಗಿಕಗಳಾದ ಗುಡ್ಡ, ಬೆಟ್ಟ, ಮಲೆ, ಮಟ್ಟಿ (ಮರಡಿ), ಕಲ್, ದುರ್ಗ, ಕೋಟೆ ಮೊದಲಾದವುಗಳು ಆ ಊರಿನ ಭೌಗೋಳಿಕ ಪರಿಸರವನ್ನು ವಿವರಿಸುವ ಘಟಕಗಳಾಗಿರುವುದನ್ನು ಗುರುತಿಸಬಹುದಾಗಿದೆ. ಮೇಲಿನ ಸ್ಥಳಗಳ (ಭೂಮೇಲ್ಮೈ ಲಕ್ಷಣಗಳು) ಭೌಗೋಳಿಕ ಲಕ್ಷಣಗಳನ್ನು ಈ ಕೆಳಗಿನಂತೆ ವಿವರಿಸಬಹುದಾಗಿದೆ.

**ನುಂಕೆಮಲೆ**

ಇದೊಂದು ಶಿಲಾವಾಚಿ ಸ್ಥಳನಾಮವಾಗಿದೆ. ನುಂಕೆಮಲೆಯು ಭೌಗೋಳಿಕವಾಗಿ ಅತ್ಯಂತ ಎತ್ತರವಾದ ಬೆಟ್ಟಗಳಿಂದ ಆವೃತವಾಗಿರುವುದು ಕಂಡುಬರುತ್ತದೆ. ಈ ಪ್ರದೇಶವು ಮೂರು ಭಾಗಗಳಿಂದ ದೊಡ್ಡ ದೊಡ್ಡ ಎತ್ತರವಾದ ಬೆಟ್ಟಗಳಿಂದ ಆವೃತವಾಗಿದೆ. ಹಾಗಾಗಿಯೇ ಈ ಬೆಟ್ಟವನ್ನು ಸ್ಥಳೀಯರು ತ್ರಿಕೂಟಾಚಲ, ಹಿರಾರಬೆಟ್ಟ ಎಂದು ಕರೆಯುತ್ತಾರೆ. ಇಲ್ಲಿನ ಹಾದಿಯು ಸಹ ತುಂಬಾ ನಿರ್ಜನವಾದ ಕಣಿವೆ ಮಾರ್ಗದಿಂದ ಕೂಡಿರುವುದನ್ನು ಗುರುತಿಸಬಹುದಾಗಿದೆ. ಇಲ್ಲಿನ ಭೌಗೋಳಿಕತೆಗನುಗುಣವಾಗಿ ಇದನ್ನು ಗುಡ್ಡ, ಬೆಟ್ಟ, ಮಲೆ, ತ್ರಿಕೂಟಾಚಲ ಎಂದು ಕರೆದಿದ್ದಾರೆ. ಈ ಬೆಟ್ಟದ ಪರಿಸರದಲ್ಲಿ ನೆಲೆಸಿರುವ ಸ್ಥಳೀಯರು ಈ ಬೆಟ್ಟವನ್ನು ನುಂಕೆಮಲೆ(ನುಂಕಪ್ಪನಬೆಟ್ಟ), ದೇವರಗುಡ್ಡ, ದೇವರಬೆಟ್ಟ ಎಂದು ಕರೆದಿದ್ದಾರೆ. ಈ ಹೆಸರುಗಳು ಸಹ ನುಂಕೆಮಲೆಯ ಭೌಗೋಳಿಕತೆಗೆ ಸಂಬಂಧಿಸಿದ ಹೆಸರುಗಳೇ ಆಗಿರುವುದನ್ನು ಗುರುತಿಸಬಹುದಾಗಿದೆ. ಶ್ರೀಮಠವು ಉತ್ತರ ಭಾರತದ 'ಬಾರಾಹ್ ಪಂಥ'ಕ್ಕೆ ಸೇರಿದ ನಾಥಮಠವಾಗಿದೆ. ನಾಥಪಂಥದ ದಾಖಲೆಗಳಲ್ಲಿ ಈ ಮಠವನ್ನು ಕಾಲಭೈರವ ಮಂದಿರ, ಲೋಕಿಮಠ ಎಂದು ಕರೆದಿದ್ದಾರೆ. ಸ್ಥಳೀಯ ಪರಿಸರದಲ್ಲಿನ ಲಿಂಗಾಯತರು, ಕುರುಬರು, ಕಾಪಾಲಿಕರು, ಜೋಗಿಗಳು, ಮ್ಯಾಸಬೇಡರು, ದಲಿತರು ಮತ್ತು ಗೊಲ್ಲ ಸಮುದಾಯದವರು ಶ್ರೀಮಠದ ಭಕ್ತರಾಗಿದ್ದಾರೆ. ಜೋಗಿಗಳು ಮತ್ತು ಕಾಪಾಲಿಕರು ತ್ರಿಶೂಲರೂಪಿಯಾದ ಸಿದ್ದಪ್ಪನನ್ನು 'ಭೈರವ', 'ಕಾಲಭೈರವ' ಎಂಬ ಹೆಸರಿನಿಂದ ಪೂಜಿಸುವುದು ಕಂಡುಬರುತ್ತದೆ. ಜೋಗಿಗಳು ಇಲ್ಲಿರುವ ಭೈರವನನ್ನು 'ದೇವರು' ಎಂದು ಕರೆಯುತ್ತಾರೆ. ಹಾಗಾಗಿ ಈ ಬೆಟ್ಟಕ್ಕೆ 'ದೇವರಬೆಟ್ಟ' 'ದೇವರಗುಡ್ಡ' ಎಂಬ ಹೆಸರುಗಳಿರುವುದನ್ನು ಗುರುತಿಸಬಹುದಾಗಿದೆ. ಜೊತೆಗೆ ಈ ದೇವರು ಹೆಸರಿನ ಪ್ರಭಾವ ಈ ಪರಿಸರದಲ್ಲಿನ ಅನೇಕ ಸ್ಥಳನಾಮಗಳ ಮೇಲೆ ಪ್ರಭಾವವಾಗಿರುವುದನ್ನು ಗುರುತಿಸಬಹುದಾಗಿದೆ. ಈ ಬೆಟ್ಟದ ಕೆಳಗಿರುವ ಒಂದು ಊರಿನ ಹೆಸರು ದೇವರಹಟ್ಟಿ ಎಂದಿದೆ. ನಂತರ ಈ ಬೆಟ್ಟದಿಂದ ಸುಮಾರು ೨೦ ಕಿ.ಮೀ. ಅಂತರದಲ್ಲಿ 'ದೇವರಹಟ್ಟಿ' ಎಂಬ ಮತ್ತೊಂದು

ಗ್ರಾಮವಿದೆ. ಈ ಗ್ರಾಮದಲ್ಲಿ ಯೋಗಿ ಜೋಗೇಶ್ವರ ಎಂಬ ದೇವಾಲಯವಿದೆ. ಈ ದೈವದ ಹಿನ್ನೆಲೆಯಲ್ಲಿ ಆ ಗ್ರಾಮಕ್ಕೆ 'ದೇವರಹಟ್ಟಿ' ಎಂದು ನಾಮಕರಣ ಮಾಡಿರುವುದಾಗಿ ಸ್ಥಳೀಯರು ವಿವರಿಸುತ್ತಾರೆ. ಒಟ್ಟಾರೆ ಭೈರವ, ದೇವರು, ಸಿದ್ಧ, ಜೋಗಿ ಇವು ಸಾಂಸ್ಕೃತಿಕವಾಗಿ ಒಂದರೊಳಗೊಂದು ಪ್ರವೇಶ ಪಡೆದಿರುವುದನ್ನು ಗುರುತಿಸಬಹುದಾಗಿದೆ.

ಇಡೀ ನುಂಕೆಮಲೆ ಪ್ರದೇಶ ದುರ್ಗಮವಾಗಿದ್ದು ಕಾಪಾಲಿಕ ಶಾಕ್ತ ಮತ್ತು ನಾಥ ಪರಂಪರೆಯಿಂದ ತುಂಬಿರುವುದನ್ನು ಗುರುತಿಸಬಹುದಾಗಿದೆ.

**ಜೋಗಿಮಟ್ಟಿ:** ಇದೊಂದು ಶಿಲಾವಾಚಿ ಸ್ಥಳನಾಮವಾಗಿದೆ. ಈ ಬೆಟ್ಟವು ಚಿತ್ರದುರ್ಗದ ಸಮೀಪದಲ್ಲಿದೆ. ಎತ್ತರವಾದ ಬೆಟ್ಟದಲ್ಲಿ ನಾಥಜೋಗಿಯೊಬ್ಬರ ದೊಡ್ಡ ಸಮಾಧಿ ಇದೆ. ಹಾಗಾಗಿ ಈ ಬೆಟ್ಟವನ್ನು ಜೋಗಿಮಟ್ಟಿ ಎಂದು ಸ್ಥಳೀಯರು ಕರೆಯುತ್ತಾರೆ.

**ಭೈರನಕಲ್:** ಇದೊಂದು ಶಿಲಾವಾಚಿ ಸ್ಥಳನಾಮವಾಗಿದೆ. ಈ ಬೆಟ್ಟ ಚಿತ್ರದುರ್ಗ ಕೋಟೆಯ ಪರಿಸರದಲ್ಲಿದೆ. ಈ ಬೆಟ್ಟದ ಮಧ್ಯದಲ್ಲಿ ಸಂಪಿಗೆ ಸಿದ್ದೇಶ್ವರ ಎಂಬ ಮಠವಿದೆ. ಈ ಗುಡಿಯು ಮೂಲತಹ ಬೆಟ್ಟದಲ್ಲಿ ಗುಹೆಯಂತಿದೆ. ಮಠದಲ್ಲಿ ಅನೇಕ ಕೋಣೆಗಳಿರುವುದು ಕಂಡುಬರುತ್ತದೆ. ಈ ಮಠವು ಒಂದು ಕಾಲದಲ್ಲಿ ನಾಥರು ಮತ್ತು ಕಾಪಾಲಿಕರ (ಸಿದ್ದರು) ಮಠವಾಗಿತ್ತು ಎಂದು ಸ್ಥಳೀಯರು ವಿವರಿಸುತ್ತಾರೆ. ಇಲ್ಲಿರುವ ಸಂಪಿಗೆ ಸಿದ್ದೇಶ್ವರನೆಂದರೆ ಭೈರವನೆ ಎಂದು ಹೇಳುತ್ತಾರೆ. ಜೊತೆಗೆ ಸಂಪಿಗೆ ಸಿದ್ದೇಶ್ವರ ಗುಡಿಯಲ್ಲಿ ನಾಥರ ಮುಖ್ಯ ಕುರುಹಾದ ಧುನಿಯ ಚಿತ್ರಣಗಳಿರುವುದು ಕಂಡುಬರುತ್ತದೆ. ಇಲ್ಲಿನ ಶ್ರೀ ಗುರೂಭ್ಯನಮಃ ಎಂದು ಆರಂಭವಾಗುವ ಶಾಸನವು ಮಠದಲ್ಲಿದ್ದ ನಾಥ ಗುರುಗಳನ್ನು ಕುರಿತು ಹೇಳಿದ್ದಾಗಿರಬಹುದೆಂದು (ಕರ್ನಾಟಕ ನಾಥಮಠಗಳು–ಪು.ಸ. ೧೪೬)ರಲ್ಲಿ ರಹಮತ್ ತರೀಕೆರೆ ಅವರು ವಿವರಿಸಿದ್ದಾರೆ.

**ಜೋಗಿಕಲ್:** ಇದೊಂದು ಶಿಲಾವಾಚಿ ಸ್ಥಳನಾಮವಾಗಿದ್ದು, ಸಂಡೂರು ತಾಲೂಕಿನಲ್ಲಿದೆ. ಕೂಡ್ಲಿಗಿ ಪರಿಸರದಲ್ಲಿ ಈ ಸ್ಥಳನಾಮ ಕಂಡುಬರುತ್ತದೆ. ಊರಿನ ಪಕ್ಕದಲ್ಲಿ ಒಂದು ಎತ್ತರವಾದ ಕಲ್ಲಿನ (ಶಿಲೆ) ದೊಡ್ಡ ಬೆಟ್ಟವಿದೆ. ಈ ಬೆಟ್ಟದ ಕೆಳಭಾಗದಲ್ಲಿ ಚಿನ್ನಾಪುರದಯ್ಯನ ಗುಡಿ ಇದೆ. ಗುಡಿಯ ಪಕ್ಕದಲ್ಲಿ ಜೋಗಿಕಲ್ ಗ್ರಾಮವಿದೆ. ಈ ಗ್ರಾಮದ ಮೌಖಿಕ ಪರಂಪರೆಯನ್ನು ದಾಖಲಿಸಿಲ್ಲ. ಒಟ್ಟು ಈ ಗ್ರಾಮನಾಮ ಶಿಲಾವಾಚಿಯಾಗಿರುವುದನ್ನು ಗುರುತಿಸಬಹುದಾಗಿದೆ.

**ಭೈರದೇವರಗುಡ್ಡ:** ಇದೊಂದು ಶಿಲಾವಾಚಿ ಸ್ಥಳನಾಮವಾಗಿದೆ. ಇದು ಕೂಡ್ಲಿಗಿ ಪರಿಸರದಲ್ಲಿನ ಗ್ರಾಮನಾಮವಾಗಿದೆ. ಊರಿನ ಪಕ್ಕದಲ್ಲಿ ಎತ್ತರವಾದ ಒಂದು ಬೆಟ್ಟವಿದೆ. ಈ ಬೆಟ್ಟದಲ್ಲಿ ಭೈರವನ ಗುಡಿ ಇದ್ದು, ಇಂದು ಅಲ್ಲಿನ ಭೈರವನ ಮೂರ್ತಿ ಭಗ್ನಗೊಂಡಿರುವುದನ್ನು ಗುರುತಿಸಬಹುದಾಗಿದೆ. ಈ ಗುಡ್ಡದ ಸಮೀಪದಲ್ಲಿ ಸಿದ್ಧಕೇಂದ್ರವಾದ ಉಜ್ಜಯಿನಿ ಇದೆ. ಇಲ್ಲಿ ಶ್ರೀ ಮರುಳಸಿದ್ದೇಶ್ವರನ ಮಠವಿದೆ. ಸ್ಥಳೀಯರು ಭೈರವ ಗುಡ್ಡದಲ್ಲಿರುವ ಸಿದ್ದಪ್ಪ ಗುಡ್ಡದ ಕೆಳಗೆ (ಉಜ್ಜಯಿನಿಗೆ) ಬಂದು ನೆಲೆಸಿರುವುದಾಗಿ ಹೇಳುತ್ತಾರೆ. ಒಟ್ಟಾರೆ ಬೆಟ್ಟದಲ್ಲಿರುವ ಭೈರವ ದೇವರ ಹೆಸರನ್ನು ಈ ಗ್ರಾಮಕ್ಕೆ

ಇಡಲಾಗಿದೆ. ಸ್ಥಳೀಯರು ಬಳಕೆಯಲ್ಲಿ ಈ ಗ್ರಾಮನಾಮವನ್ನು 'ಗುಡ್ಡ' ಎಂದು ಕರೆಯುತ್ತಾರೆ. ಇದೊಂದು ಶಿಲಾವಾಚಿ ಸ್ಥಳನಾಮವಾಗಿದೆ. ಈ ಗ್ರಾಮನಾಮವನ್ನು ಬಳಕೆಯ ನೆಲೆಯಲ್ಲಿ ಸಂಕ್ಷೇಪಗೊಳಿಸಿ ಬಿ.ಡಿ. ಗುಡ್ಡ ಎಂದು ಕರೆಯುವುದು ಕಂಡುಬರುತ್ತದೆ. ಈ ಗ್ರಾಮದಲ್ಲಿ ಅಲೆಮಾರಿ ಸಮುದಾಯಕ್ಕೆ ಸೇರಿದ 'ಬಾಲಬಸವ'ರು ನೆಲೆಸಿದ್ದಾರೆ. ಇವರು ಗೋಣಿಬಸವೇಶ್ವರನ ಕಾವ್ಯ ಮತ್ತು ಮರುಳಸಿದ್ದನ ಕಾವ್ಯವನ್ನು ಹಾಡುವುದರೊಂದಿಗೆ ಸಮುದಾಯದ ಮೂಲವೃತ್ತಿಯಾದ ಹಾಡುಗಾರಿಕೆಯಲ್ಲಿ 'ಕಾಲಜ್ಞಾನ'ವನ್ನು ಹೇಳುತ್ತಾರೆ. ವೀಣೆ ಇವರ ಪ್ರಮುಖ ವಾದ್ಯಪರಿಕರವಾಗಿದೆ. ಜೊತೆಗೆ ಈ ಗ್ರಾಮದಲ್ಲಿ ಮ್ಯಾಸಬೇಡರು, ಭೋವಿ ಸಮುದಾಯದವರು ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿರುವುದು ಕಂಡುಬರುತ್ತದೆ.

**ಅಮರದೇವರ ಗುಡ್ಡ:** ಇದೊಂದು ಶಿಲಾವಾಚಿ ಗ್ರಾಮನಾಮವಾಗಿದೆ. ಇದು ಕೂಡ್ಲಿಗಿ ಪಟ್ಟಣದ ಸಮೀಪದಲ್ಲಿದೆ (೨ ಕಿ.ಮೀ.) ಸ್ಥಳೀಯರು ಈ ಗ್ರಾಮವನ್ನು 'ಗುಡ್ಡ' ಎಂಬ ಹೆಸರಿನಿಂದ ಕರೆಯುವುದು ಕಂಡುಬರುತ್ತದೆ. ಊರಿನ ಪಕ್ಕದಲ್ಲಿ ಒಂದು ಎತ್ತರವಾದ ಬೆಟ್ಟವಿದೆ. ಆ ಬೆಟ್ಟದಲ್ಲಿ ಬಸವೇಶ್ವರ ನಂದಿ–ಈಶ್ವರನ ಗುಡಿ ಇದೆ. ಇಲ್ಲಿರುವ ದೈವವನ್ನು ಅಮರದೇವರು, ಅಮರೇಶ್ವರ ದೇವರು ಎಂದು ಸ್ಥಳೀಯರು ಕರೆಯುತ್ತಾರೆ. ಬೆಟ್ಟದಲ್ಲಿನ ಅಮರದೇವರ ಹೆಸರನ್ನೇ ಈ ಊರಿಗೆ ನಾಮಕರಣ ಮಾಡಲಾಗಿದೆ ಎಂದು ಸ್ಥಳೀಯರು ವಿವರಿಸುತ್ತಾರೆ. ಈ ಊರಿನ ಹೆಸರನ್ನು ಸಂಕ್ಷೇಪಗೊಳಿಸಿ ಎ.ಡಿ. ಗುಡ್ಡ ಎಂದು ಕರೆಯುವುದು ಕಂಡುಬರುತ್ತದೆ.

**ಜಲವಾಚಿ ಸ್ಥಳನಾಮಗಳು**

ನದಿ, ಕೆರೆ, ಹಳ್ಳ, ಬಾವಿ, ಕಟ್ಟೆ (ನೀರಿರುವ ತಾಣ) ಹೊಳೆ, ಹೊಂಡ ಮೊದಲಾದ ಜಲಸಂಬಂಧಿಯಾದ ವಾರ್ಗಿಕಗಳಿಂದ ಕೂಡಿರುವ ಸ್ಥಳನಾಮಗಳಿಗೆ ಜಲವಾಚಿ ಸ್ಥಳನಾಮಗಳು ಎಂದು ಕರೆಯುತ್ತಾರೆ. ನೀರು ಸಂಗ್ರಹವಾಗಿರುವ ತಾಣಗಳಿಗೆ ಸಂಬಂಧಿಸಿದ ಊರಿನ ಹೆಸರುಗಳನ್ನು ಜಲವಾಚಿ ಸ್ಥಳನಾಮಗಳು ಎನ್ನುತ್ತಾರೆ. ಕೆರೆ, ಕುಂಟೆ, ಹಳ್ಳ, ತೋಪು, ತೊರೆ, ಹೊಂಡ, ಝರಿ ಮೊದಲಾದವುಗಳು ಜಲವಾಚಿ ವಾರ್ಗಿಕಗಳಾಗಿರುವುದನ್ನು ಗುರುತಿಸಬಹುದಾಗಿದೆ.

**ಭೈರವತೀರ್ಥ:** ಇದೊಂದು ಜಲವಾಚಿ ಸ್ಥಳನಾಮವಾಗಿದೆ. ಇದು ಸಂಡೂರು ತಾಲೂಕಿನಲ್ಲಿದೆ. ತಾಲೂಕಿನ ತಾರಾನಗರ ಗ್ರಾಮದಿಂದ ೬ ಕಿ.ಮೀ. ದೂರದಲ್ಲಿ ಒಂದು ಎತ್ತರವಾದ ಬೆಟ್ಟವಿದೆ. ಆ ಬೆಟ್ಟದಲ್ಲಿ ಒಂದು ಮಠ ಇದೆ. ಇದನ್ನು ಭಕ್ತಗೋಪಾಲಸ್ವಾಮಿ ಮಠ ಎಂದು ಕರೆಯುತ್ತಾರೆ. ಬೆಟ್ಟದಲ್ಲಿರುವ ಈ ಮಠದ ಪಕ್ಕದಲ್ಲಿ ಒಂದು ಶಿಲೆಯೊಳಗೆ ಗುಹೆ ಇದೆ. ಗುಹೆಯ ಸಮೀಪದಲ್ಲಿ ಒಂದು ನೀರಿನ ಹೊಂಡವಿದೆ. ಈ ಹೊಂಡವನ್ನು ಸ್ಥಳೀಯರು ಕಾಲಭೈರವ ತೀರ್ಥ, ಭೈರವತೀರ್ಥ ಎಂದು ಎಂದು ಸ್ಥಳೀಯರು ವಿವರಿಸುವುದು ಕಂಡುಬರುತ್ತದೆ. ಬೆಟ್ಟದಲ್ಲಿರುವ ಹೊಂಡದ ಹಿನ್ನೆಲೆಯಲ್ಲಿಯೇ ಈ ಸ್ಥಳಕ್ಕೆ ಭೈರವತೀರ್ಥ ಎಂಬ ಹೆಸರನ್ನಿಡಲಾಗಿದೆ. ಮೇಲಿನ ಸ್ಥಳನಾಮದಲ್ಲಿನ 'ತೀರ್ಥ' ಎಂಬ ವಾರ್ಗಿಕವು ಜಲವಾಚಿ ಘಟಕವಾಗಿದೆ.

**ಸಾಂಸ್ಕೃತಿಕ ಸ್ಥಳನಾಮಗಳು**

ಸಮುದಾಯದ ಆಚರಣೆ, ಧರ್ಮ, ನಂಬಿಕೆ, ಸಂಪ್ರದಾಯ, ವೃತ್ತಿ, ಜಾತಿ (ಜನಾಂಗ) ಚಾರಿತ್ರಿಕ ವ್ಯಕ್ತಿಗಳಿಗೆ ಸಂಬಂಧಿಸಿದ ವಿವರಣೆಗಳನ್ನೊಳಗೊಂಡಿರುವ ಸ್ಥಳನಾಮಗಳಿಗೆ ಸಾಂಸ್ಕೃತಿಕ ಸ್ಥಳನಾಮಗಳು ಎಂದು ಕರೆಯುತ್ತಾರೆ. ಸಮುದಾಯದಲ್ಲಿನ ಆಚರಣೆ, ರೂಢಿ ಸಂಪ್ರದಾಯಗಳು ಮತ್ತು ಧಾರ್ಮಿಕತೆಗೆ ಸಂಬಂಧಿಸಿದ ಹೆಸರುಗಳನ್ನು ಹೊಂದಿರುವ ಗ್ರಾಮನಾಮಗಳೇ ಸಾಂಸ್ಕೃತಿಕ ಸ್ಥಳನಾಮಗಳು.

ಸಾಂಸ್ಕೃತಿಕ ಸ್ಥಳನಾಮಗಳನ್ನು ಗ್ರಾಮಗಳಲ್ಲಿನ ವಾರ್ಗಿಕಗಳಿಗನುಗುಣವಾಗಿ ಈ ಕೆಳಗಿನಂತೆ ವರ್ಗೀಕರಿಸಬಹುದಾಗಿದೆ.

೧. ದೈವವಾಚಿ ಸ್ಥಳನಾಮಗಳು

೨. ವೃತ್ತಿವಾಚಿ ಸ್ಥಳನಾಮಗಳು

೩. ಜನಾಂಗ (ಸಮುದಾಯ) ಜಾತಿವಾಚಿ ಸ್ಥಳನಾಮಗಳು

೪. ವ್ಯಕ್ತಿವಾಚಿ ಸ್ಥಳನಾಮಗಳು

೫. ವಸ್ತುವಾಚಿ ಸ್ಥಳನಾಮಗಳು

**೧. ದೈವವಾಚಿ ಸ್ಥಳನಾಮಗಳು**

ಸ್ಥಳನಾಮಗಳಿಗೆ ಭೌಗೋಳಿಕತೆಗನುಗುಣವಾಗಿ ಹೆಸರಿಡುವ ಪದ್ದತಿ ಕಾಲಾನಂತರದಲ್ಲಿ ಸಮುದಾಯ ನಿಷ್ಟವಾದುದನ್ನು ಗುರುತಿಸಬಹುದಾಗಿದೆ. ಗ್ರಾಮಸಮುದಾಯಗಳು ತಮ್ಮ ಗ್ರಾಮಗಳಿಗೆ ಅಥವಾ ನೆಲೆಗಳಿಗೆ ಹೆಸರಿಡುವ ಸಂದರ್ಭದಲ್ಲಿ ತಮ್ಮ ಸಮುದಾಯದ ಸಾಂಸ್ಕೃತಿಕ ನಾಯಕರ (ವೃತ್ತಿಗೆ) ಇಲ್ಲವೆ ತಮ್ಮ ಜನಾಂಗದ ಧಾರ್ಮಿಕ ವ್ಯಕ್ತಿಗಳ ಹೆಸರುಗಳನ್ನು ಇಡಲು ಮುಂದಾದುದು ಸ್ಥಳನಾಮಗಳ ಸಾಂಸ್ಕೃತಿಕ ಪರಂಪರೆಗೆ ಮನ್ನಣೆ ದೊರೆತಂತಾಯಿತು. ಆಗ ಸಮುದಾಯದ ನೆಲೆಗಳಿಗೆ ಮೊದಲು ಪ್ರಾರಂಭವಾದದ್ದು ತಮ್ಮ ದೈವಸಂಬಂಧಿ ಹೆಸರುಗಳನ್ನು ನಾಮಕರಣ ಮಾಡಿದ್ದುದು. ಇಲ್ಲಿ ಹಂಡಿಜೋಗಿ ಸಮುದಾಯ ದೈವಸಂಬಂಧಿಯಾದ ಸ್ಥಳನಾಮಗಳನ್ನು ಮಾತ್ರ ಗುರುತಿಸಲಾಗಿದೆ.

ಹಂಡಿಜೋಗಿ ಸಮುದಾಯದ ಕುಲದೈವ ಭೈರವನಾಗಿದ್ದು, ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಭೈರವನ ಹೆಸರಿನಲ್ಲಿ ಅನೇಕ ಸ್ಥಳನಾಮಗಳಿರುವುದು ಕಂಡುಬರುತ್ತದೆ. ಆದರೆ ಈ ಭಾಗದಲ್ಲಿ ಕೇವಲ ನುಂಕೆಮಲೆ ಪರಿಸರದಲ್ಲಿ ಕಂಡುಬರುವ ಹಂಡಿಜೋಗಿ ಸಮುದಾಯದ ದೈವಸಂಬಂಧಿಯಾದ ಸ್ಥಳನಾಮಗಳನ್ನು ಮಾತ್ರ ಗುರುತಿಸಬಹುದಾಗಿದೆ. ಅಂತಹ ಸ್ಥಳನಾಮಗಳು ಈ ಕೆಳಗಿನಂತಿವೆ.

೧. ಭೈರಾಪುರ

೨. ದೇವರಹಳ್ಳಿ

೩. ದೇವಗೊಂಡನಹಳ್ಳಿ

೪. ಭೈರನಾಯಕನಹಳ್ಳಿ

೫. ಸಿದ್ದಾಪುರ

೬. ದೇವರಹಟ್ಟಿ

ಮೇಲಿನ ಸ್ಥಳನಾಮಗಳ ಉತ್ತರ ಪದದಲ್ಲಿರುವ ಗ್ರಾಮಸೂಚಕ ಘಟಕಗಳಾದ ಪುರ, ಹಳ್ಳಿ, ಹಟ್ಟಿ ಮೊದಲಾದವು ಜನವಸತಿಯ ನೆಲೆಗಳನ್ನು ಸೂಚಿಸುವ ಸ್ಥಳನಾಮಗಳ ವಾರ್ಗಿಕಗಳಾಗಿರುವುದನ್ನು ಗುರುತಿಸಬಹುದಾಗಿದೆ.

**ಭೈರಾಪುರ:** ಇದೊಂದು ದೈವವಾಚಿ ಸ್ಥಳನಾಮವಾಗಿದೆ. ಈ ಗ್ರಾಮ ಮೊಳಕಾಲ್ಮೂರು ತಾಲೂಕಿನಲ್ಲಿದೆ. ಜೊತೆಗೆ ಇದು ನುಂಕೆಮಲೆ ಬೆಟ್ಟಕ್ಕೆ ತುಂಬಾ ಹತ್ತಿರದಲ್ಲಿರುವ ಗ್ರಾಮವಾಗಿದೆ. ಬೆಟ್ಟದಲ್ಲಿರುವ ಭೈರವ ದೈವದ ಹಿನ್ನೆಲೆಯಲ್ಲಿ ಈ ಗ್ರಾಮಕ್ಕೆ 'ಭೈರಾಪುರ' ಎಂದು ನಾಮಕರಣ ಮಾಡಲಾಗಿದೆ ಎಂದು ಗ್ರಾಮದ ಹಿರಿಯರು ವಿವರಿಸುತ್ತಾರೆ. ಭೈರವ ಹಂಡಿಜೋಗಿಗಳ ಕುಲ ದೈವವಾಗಿರುವುದರಿಂದ ಈ ಗ್ರಾಮನಾಮದ ಹೆಸರನ್ನು ಕುರಿತು ಈ ಭಾಗದಲ್ಲಿ ವಿವರಿಸಲಾಗಿದೆ.

ಇನ್ನು ಹಂಡಿಜೋಗಿಗಳು ಭೈರವನನ್ನು 'ದೇವರು' ಎಂದು ಕರೆಯುತ್ತಾರೆ. ಈ ಹೆಸರಿನಲ್ಲೇ ನುಂಕೆಮಲೆ ಪರಿಸರದಲ್ಲಿ ಕೆಲವು ಗ್ರಾಮನಾಮಗಳಿರುವುದು ಕಂಡುಬರುತ್ತದೆ. ದೇವರಹಟ್ಟಿ ಇದು ನುಂಕೆಮಲೆ ಬೆಟ್ಟದ ಕೆಳಭಾಗದಲ್ಲಿರುವ ಗ್ರಾಮವಾಗಿದ್ದು, ನುಂಕೆಮಲೆಯಲ್ಲಿನ ಭೈರವ ದೈವದ ಹಿನ್ನೆಲೆಯಲ್ಲಿ ಈ ಗ್ರಾಮಕ್ಕೆ ದೇವರಹಟ್ಟಿ ಎಂದು ನಾಮಕರಣ ಮಾಡಿರುವುದು ಕಂಡುಬರುತ್ತದೆ.

**ದೇವರಹಳ್ಳಿ:** ಇದೊಂದು ದೈವವಾಚಿ ಸ್ಥಳನಾಮವಾಗಿದೆ. ಇದು ನಾಯಕನಹಟ್ಟಿಯ ಸಮೀಪದಲ್ಲಿರುವ ಗ್ರಾಮವಾಗಿದೆ. ಈ ಗ್ರಾಮದ ಮೂಲ ನಿವಾಸಿಗಳು ಹಂಡಿಜೋಗಿಗಳು. ಈ ಗ್ರಾಮದಲ್ಲಿ ಹಂಡಿಜೋಗಿಗಳಲ್ಲದೆ ಮ್ಯಾಸಬೇಡರು, ಕಾಡುಗೊಲ್ಲರು ವಾಸಿಸುತ್ತಿರುವುದು ಕಂಡುಬರುತ್ತದೆ. ಗ್ರಾಮದಲ್ಲಿ ಹಂಡಿಜೋಗಿ ಸಮುದಾಯವೇ ಅಧಿಕ ಸಂಖ್ಯೆಯಲ್ಲಿರುವುದನ್ನು ಗುರುತಿಸಬಹುದಾಗಿದೆ. ಹಂಡಿಜೋಗಿಗಳು ತಮ್ಮ ಕಾಲೋನಿಯಲ್ಲಿ ಬೇವಿನಮರದ ಕಟ್ಟೆಯ ಮುಂಭಾಗದಲ್ಲಿ ಒಂದು ದೊಡ್ಡ ಕಲ್ಲಿನ ರಾಶಿಯ ಮಧ್ಯೆ ತ್ರಿಶೂಲವನ್ನಿರಿಸಿ ಇಡೀ ಸಮುದಾಯದವರು ಪೂಜೆ ಸಲ್ಲಿಸುತ್ತಿರುವುದನ್ನು ಗುರುತಿಸಬಹುದಾಗಿದೆ. ತ್ರಿಶೂಲವನ್ನೇ ಭೈರವ ಎಂದೂ ಪೂಜಿಸುವ ಇವರು ಭೈರವನನ್ನು ದೇವರು ಎಂದು ಕರೆಯುತ್ತಾರೆ. ಹಾಗಾಗಿ ಇವರು ತಮ್ಮ ನೆಲೆಗೆ 'ದೇವರಹಳ್ಳಿ' ಎಂದು ದೈವಸಂಬಂಧಿಯಾದ ಹೆಸರು ನಾಮಕರಣ ಮಾಡಿರುವುದು ಕಂಡುಬರುತ್ತದೆ. ಗ್ರಾಮದಲ್ಲಿ ಒಂದು ಮಾರಮ್ಮನ ಗುಡಿ ಇದೆ. ಹಂಡಿಜೋಗಿಗಳು ಮಾರಮ್ಮನಿಗೂ ಸಹ ಪೂಜೆ ಸಲ್ಲಿಸುತ್ತಿರುವುದು ಕಂಡುಬರುತ್ತದೆ.

**ದೇವಗೊಂಡನಹಳ್ಳಿ:** ಇದೊಂದು ದೈವವಾಚಿ ಸ್ಥಳನಾಮವಾಗಿದೆ. ಇದು ಹಡಗಲಿಯ ಸಮೀಪದಲ್ಲಿರುವ ಗ್ರಾಮವಾಗಿದೆ. ಈ ನೆಲೆಯಲ್ಲಿಯೂ ಸಹ ಹಂಡಿಜೋಗಿಗಳೇ ಅಧಿಕ ಸಂಖ್ಯೆಯಲ್ಲಿ ನೆಲೆಸಿರುವುದು ಕಂಡುಬರುತ್ತದೆ. ಹಾಗಾಗಿ ಇವರು ತಮ್ಮ ಸಮುದಾಯದ ಕುಲದೈವವಾದ ಭೈರವನ (ದೇವರು) ಹೆಸರನ್ನು ತಮ್ಮ ನೆಲೆಗೆ ನಾಮಕರಣ ಮಾಡಿರುವುದನ್ನು ಗುರುತಿಸಬಹುದಾಗಿದೆ.

**ಸಿದ್ದಾಪುರ:** ಇದೊಂದು ದೈವವಾಚಿ ಸ್ಥಳನಾಮವಾಗಿದೆ. ಈ ಹೆಸರಿನ ಗ್ರಾಮಗಳು ಮೊಳಕಾಲ್ಮೂರು, ಚಳ್ಳಕೆರೆ, ಜಗಳೂರು ಮತ್ತು ಕೂಡ್ಲಿಗಿ ತಾಲೂಕುಗಳಲ್ಲಿ ಕಂಡುಬರುತ್ತದೆ. ನುಂಕೆಮಲೆ ಸಿದ್ದೇಶ್ವರನನ್ನು ಸಿದ್ದ, ಸಿದ್ದಪ್ಪ ಎಂದು ಅನೇಕ ಹೆಸರುಗಳಿಂದ ಸ್ಥಳೀಯ ಸಮುದಾಯದವರು ಕರೆಯುವುದು ಕಂಡುಬರುತ್ತದೆ. ನುಂಕೆಮಲೆಯ ದೈವವಾದ ಸಿದ್ದಪ್ಪನ ಹೆಸರನ್ನು ಈ ಪರಿಸರದಲ್ಲಿನ ಅನೇಕ ಗ್ರಾಮಗಳಿಗೆ ಇಟ್ಟಿರುವುದು ಕಂಡುಬರುತ್ತದೆ. ಮೊಳಕಾಲ್ಮೂರು ತಾಲೂಕಿನ ಬ್ರಹ್ಮಗಿರಿಯ ಬೆಟ್ಟದ ಸಮೀಪದಲ್ಲಿ ಒಂದು ಸಿದ್ದಾಪುರ ಗ್ರಾಮವಿದೆ. ಇಲ್ಲಿ ಸಿದ್ದಪ್ಪನ ಗದ್ದುಗೆ ಇದ್ದು, ಇಲ್ಲಿ ನಾಥ ಯೋಗಿಗಳ ಸಮಾಧಿಗಳಿರುವುದು ಕಂಡುಬರುತ್ತದೆ. ಹಾಗಾಗಿ ಇದು ನಾಥರ, ಕಾಪಾಲಿಕರ ಸಿದ್ದರ ಕ್ಷೇತ್ರವಾಗಿತ್ತೆಂದು ಚರಿತ್ರಕಾರರು ವಿವರಿಸಿರುವುದು ಕಂಡುಬರುತ್ತವೆ. ಈ ಗ್ರಾಮದಲ್ಲಿ ಕುರುಬ ಸಮುದಾಯದವರು ಅಧಿಕ ಸಂಖ್ಯೆಯಲ್ಲಿದ್ದಾರೆ. ಸಿದ್ದಪ್ಪ ಈ ಸಮುದಾಯದ ದೈವವಾಗಿರುವುದು ಕಂಡುಬರುತ್ತದೆ.

**೨. ಜನಾಂಗ (ಜಾತಿ, ಸಮುದಾಯ) ವಾಚಿ ಸ್ಥಳನಾಮಗಳು**

ಸಮುದಾಯಗಳು ತಾವು ನೆಲೆಸಿರುವ ನೆಲೆಗಳಿಗೆ ಆರಂಭದಲ್ಲಿ ದೈವಗಳ ಹೆಸರುಗಳನ್ನು ಕರೆದರು. ನಂತರದ ಕಾಲಘಟ್ಟದಲ್ಲಿ ತಾವು ನೆಲೆಸಿರುವ ನೆಲೆಗೆ ತಮ್ಮ ತಮ್ಮ ಜನಾಂಗ (ಸಮುದಾಯದ) ಹೆಸರುಗಳನ್ನು ನಾಮಕರಣ ಮಾಡಲು ಆರಂಭಿಸಿದರು. ಅದರ ಫಲವೇ ಈ ಜಾತಿವಾಚಿ ಸ್ಥಳನಾಮಗಳು. ಹಂಡಿಜೋಗಿ ಸಮುದಾಯ ಸಂಬಂಧಿಯಾದ ಅಂತಹ ಪ್ರಮುಖ ಸ್ಥಳನಾಮಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ. ಈ ಕೆಳಗೆ ಹೆಸರಿಸಿದ ಪ್ರತಿಯೊಂದು ಗ್ರಾಮನಾಮಗಳಲ್ಲಿಯೂ ಸಹ ಜಾತಿವಾಚಿ ವಾರ್ಗಿಕ ಘಟಕವಿರುವುದು ಕಂಡುಬರುತ್ತದೆ.

ಜೋಗಿಹಳ್ಳಿ

ಜೋಗಿಕಲ್

ಜೋಗಿಹಟ್ಟಿ

ಜೋಗಿಮಟ್ಟಿ

ಚಿಕ್ಕ ಜೋಗಿಹಳ್ಳಿ

ಮಠದ ಜೋಗಿಹಳ್ಳಿ

ವಾರಿ ಜೋಗಿಹಳ್ಳಿ

ರಾಮ ಜೋಗಿಹಳ್ಳಿ

ಯರಪೋತ ಜೋಗಿಹಳ್ಳಿ

ಮೇಲಿನ ಸ್ಥಳನಾಮಗಳನ್ನು ನಿರ್ದಿಷ್ಟ ಮತ್ತು ವಾರ್ಗಿಕ ಘಟಕಗಳಿಗನುಗುಣವಾಗಿ ಈ ಕೆಳಗಿನಂತೆ ವಿಭಾಗಿಸಿಕೊಳ್ಳಲಾಗಿದೆ.

**೧. ಜಾತಿವಾಚಿ ನಿರ್ದಿಷ್ಟ + ವಾರ್ಗಿಕ = ಸ್ಥಳನಾಮಗಳು**

ಜೋಗಿ + ಕಲ್ = ಜೋಗಿಕಲ್

ಜೋಗಿ + ಹಟ್ಟಿ = ಜೋಗಿಹಟ್ಟಿ

ಜೋಗಿ + ಹಳ್ಳಿ = ಜೋಗಿಹಳ್ಳಿ

ಜೋಗಿ + ಮಟ್ಟಿ = ಜೋಗಿಮಟ್ಟಿ

**೨. ನಿರ್ದಿಷ್ಟ + ಜಾತಿವಾಚಿ + ವಾರ್ಗಿಕ = ಸ್ಥಳನಾಮ**

ಚಿಕ್ಕ + ಜೋಗಿ + ಹಳ್ಳಿ = ಚಿಕ್ಕ ಜೋಗಿಹಳ್ಳಿ

ಮಠದ + ಜೋಗಿ + ಹಳ್ಳಿ = ಮಠದ ಜೋಗಿಹಳ್ಳಿ

ವಾರಿ + ಜೋಗಿ + ಹಳ್ಳಿ = ವಾರಿ ಜೋಗಿಹಳ್ಳಿ

ರಾಮ + ಜೋಗಿ + ಹಳ್ಳಿ = ರಾಮಜೋಗಿಹಳ್ಳಿ

ಯರಪೋತ + ಜೋಗಿ + ಹಳ್ಳಿ = ಯರಪೋತ ಜೋಗಿಹಳ್ಳಿ

ಮೇಲೆ ಹೆಸರಿಸಿದ ಎಲ್ಲಾ ಸ್ಥಳನಾಮಗಳು ಸಹ ಜನಾಂಗವಾಚಿ ಸ್ಥಳನಾಮವಾಗಿರುವುದನ್ನು ಗುರುತಿಸಬಹುದಾಗಿದೆ. ಮೇಲಿನ ಗ್ರಾಮಗಳಲ್ಲಿ ಕೆಲವು ಗ್ರಾಮಗಳು ಹಂಡಿಜೋಗಿ ಸಮುದಾಯದ ನೆಲೆಗಳಾಗಿರುವುದನ್ನು ಗುರುತಿಸಬಹುದಾಗಿದೆ.

ಅವುಗಳೆಂದರೆ, ಚಿಕ್ಕಜೋಗಿಹಳ್ಳಿ (ಬಿಷ್ಣಹಳ್ಳಿ) ಜೊತೆಗೆ ಹಂಡಿಜೋಗಿಗಳು ಮೂಲತಃ ಅಲೆಮಾರಿ ಸಮುದಾಯವಾದ್ದರಿಂದ ಇವರು ಕಾಲಾನಂತರದಲ್ಲಿ ತಮ್ಮ ಮೂಲ ನೆಲೆಗಳನ್ನು ಬಿಟ್ಟು ಬೇರೊಂದು ನೆಲೆಗಳಿಗೆ ವಲಸೆ ಹೋಗಿರುವುದು ಸಹ ಕಂಡುಬರುತ್ತದೆ. ಒಂದು ಕಾಲದಲ್ಲಿ ಆ ಸಮುದಾಯ ಆ ಗ್ರಾಮದ ಮೂಲ ನಿವಾಸಿಗಳಾಗಿರುವುದರಿಂದಲೇ ಆ ಸಮುದಾಯದ (ಜಾತಿ) ಹೆಸರನ್ನು ಆ ನೆಲೆಗಳಿಗೆ ನಾಮಕರಣ ಮಾಡಿರುವುದು ಕಂಡುಬರುತ್ತದೆ.

ಕೂಡ್ಲಿಗಿ ಪರಿಸರದಲ್ಲಿನ ಬಿಷ್ಣಹಳ್ಳಿಯು ಸಂಪೂರ್ಣವಾಗಿ ಹಂಡಿಜೋಗಿ ಕುಟುಂಬಗಳಿಂದ ಕೂಡಿದ ಗ್ರಾಮವಾಗಿದೆ. ಇವರು ತಮ್ಮ ಮೂಲ ಗ್ರಾಮ ಇಲ್ಲಿಂದ ೩ ಕಿ.ಮೀ. ದೂರದಲ್ಲಿರುವ ಚಿಕ್ಕಜೋಗಿಹಳ್ಳಿ ಎಂದು ವಿವರಿಸುತ್ತಾರೆ. ಕಾಲಾನಂತರವಲ್ಲಿ ಇಲ್ಲಿ ಬಂದು (ಬಿಷ್ಣಹಳ್ಳಿ) ನೆಲೆಸಿದೆವು ಎಂದು ವಿವರಿಸುತ್ತಾರೆ. ಚಿಕ್ಕ ಜೋಗಿಹಳ್ಳಿಯಲ್ಲಿ ಈಗಲೂ ಕೆಲವು ಹಂಡಿಜೋಗಿ ಕುಟುಂಬಗಳು ನೆಲೆಸಿರುವುದು ಕಂಡುಬರುತ್ತದೆ.

ನಂತರ ಚಳ್ಳಕೆರೆ ತಾಲೂಕಿನ ನಾಯನಕಹಟ್ಟಿ ಪರಿಸರದಲ್ಲಿ 'ಜೋಗಿಹಟ್ಟಿ' ಎಂಬ ಗ್ರಾಮವಿದೆ. ಈ ಗ್ರಾಮದಲ್ಲಿ ಜೋಗಿಗಳೇ ಇಲ್ಲ. ಆದರೆ ಇಲ್ಲಿಂದ ೧೦ ಕಿ.ಮೀ. ಸಮೀಪದಲ್ಲಿ 'ದೇವರಹಳ್ಳಿ' ಎಂಬ ಗ್ರಾಮ ಇದೆ. ಈ ಗ್ರಾಮದ ತುಂಬ ಹಂಡಿಜೋಗಿ ಕುಟುಂಬಗಳು ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿರುವುದು ಕಂಡುಬರುತ್ತದೆ. ಜೋಗಿಹಟ್ಟಿಯ ಗ್ರಾಮದ ಹಿರಿಯರನ್ನು ಕೇಳಿದರೆ ಅವರು ಒಂದು ಕಾಲದಲ್ಲಿ ಮೊದಲು ಜೋಗಿಗಳು ಈ ಊರಿನಲ್ಲಿ ನೆಲೆಸಿದ್ದರು. ಕಾಲಾನಂತರ ಅವರು ಬೇರೆ ಊರುಗಳಿಗೆ ವಲಸೆ ಹೋದರು. ಹಾಗಾಗಿ ಅವರ ಸಮುದಾಯದ ಹೆಸರನ್ನೇ ತಮ್ಮ ಊರಿಗೆ ನಾಮಕರಣ ಮಾಡಲಾಗಿದೆ ಎಂದು ವಿವರಿಸುತ್ತಾರೆ. ಹೀಗೆ ಹಂಡಿಜೋಗಿ ಸಮುದಾಯದ ಹಿನ್ನೆಲೆಯಲ್ಲಿ ಅನೇಕ ಗ್ರಾಮಗಳಿಗೆ ಜೋಗಿ ಸಮುದಾಯದ ಹೆಸರನ್ನು ನಾಮಕರಣ ಮಾಡಿರುವುದನ್ನು ಗುರುತಿಸಬಹುದಾಗಿದೆ.

ಪ್ರಸ್ತುತ ಸಂದರ್ಭದಲ್ಲಿ ಹಂಡಿಜೋಗಿಗಳು ನೆಲೆಸಿರುವ ನೆಲೆಗೆ ಈಗಲೂ ಜಾತಿವಾಚಿ ವಾರ್ಗಿಕಗಳಿಂದ ಕರೆಯುತ್ತಿರುವುದನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ,

ಜೋಗೇರ ಓಣಿ

ಜೋಗೇರ ಕೇರಿ

ಜೋಗೇರ ಹಟ್ಟಿ

ಜೋಗೇರ ಕಾಲೋನಿ

ಜೋಗಿ ಕಾಲೋನಿ ಎಂದು ಕರೆಯುವುದು ಕಂಡುಬರುತ್ತದೆ. ಹಂಡಿಜೋಗಿಗಳು ಪ್ರತಿಯೊಂದು ನೆಲೆಗಳಲ್ಲಿಯೂ ಸಹ ಇಡೀ ಸಮುದಾಯದವರೆಲ್ಲರೂ ಒಂದೇ ಕಡೆ (ಭಾಗದಲ್ಲಿ) ನೆಲೆಸಿರುವುದನ್ನು ಗುರುತಿಸಬಹುದಾಗಿದೆ. ಹಾಗಾಗಿಯೇ ಇವರ ನೆಲೆಗೆ ಜೋಗಿ ಕ್ಯಾಂಪ್, ಜೋಗಿ ಕಾಲೋನಿ ಎಂದು ಆಧುನಿಕ ಸಂದರ್ಭದಲ್ಲಿ ಕರೆಯುತ್ತಿರುವುದನ್ನು ನೋಡಬಹುದಾಗಿದೆ.

ಹೀಗೆ ಸ್ಥಳನಾಮಗಳು ಸಮುದಾಯವೊಂದರ ಭಾಷಿಕ, ಸಾಂಸ್ಕೃತಿಕ, ಸಾಮಾಜಿಕ ವಿವರಗಳನ್ನು ಅರಿಯಲು ಅಗತ್ಯವಾದ ಮಾಹಿತಿಗಳನ್ನು ಒದಗಿಸುವ ಪ್ರಮುಖ ಆಕರಗಳಾಗಿರುವುದನ್ನು ಗುರುತಿಸಬಹುದಾಗಿದೆ. ಪ್ರತಿಯೊಂದು ಸ್ಥಳನಾಮವೂ ಸಹ ತನ್ನ ಹೆಸರಿನಲ್ಲಿ ಒಂದು ಚರಿತ್ರೆಯನ್ನು ಒಳಗೊಂಡಿರುವುದನ್ನು ಗುರುತಿಸಬಹುದಾಗಿದೆ. ಪ್ರಸ್ತುತ ಈ ಪ್ರಬಂಧದಲ್ಲಿ ಸ್ಥಳನಾಮಗಳ ಮೌಖಿಕ ಪರಂಪರೆಯನ್ನು ದಾಖಲಿಸಿರುವುದಿಲ್ಲ. ಅದು ಈ ಅಧ್ಯಯನದ ಮಿತಿಯೂ ಆಗಿದೆ. ಒಟ್ಟಾರೆ ಹಂಡಿಜೋಗಿ ಸಮುದಾಯದ ದೈವ ಮತ್ತು ಸಮುದಾಯ ಸಂಬಂಧಿಯಾದ ಸ್ಥಳನಾಮಗಳ ಭಾಷಿಕ, ಸಾಂಸ್ಕೃತಿಕ ಹಾಗೂ ಜನಾಂಗಿಕ ವಿವರಗಳನ್ನು ಕುರಿತು ಮಾತ್ರ ಈ ಭಾಗದಲ್ಲಿ ಚರ್ಚಿಸಲಾಗಿದೆ.



ಅಧ್ಯಾಯ ಆರು

# ಹಂಡಿಜೋಗಿಗಳ ಸಾಂಸ್ಕೃತಿಕ ಪದಕೋಶ

೬.೧ ಸಮುದಾಯದ ಪಾರಂಪರಿಕ ವೃತ್ತಿಗೆ ಸಂಬಂಧಿಸಿದ ಸಾಂಸ್ಕೃತಿಕ ಪದಕೋಶ

೬.೨ ಸಮುದಾಯದ ಮೂಲ ಭಾಷಾ ರೂಪಗಳಿಗೆ ಸಂಬಂಧಿಸಿದ ಪದಕೋಶ

# ಅಧ್ಯಾಯ: ಆರು

## ಹಂಡಿಜೋಗಿಗಳ ಸಾಂಸ್ಕೃತಿಕ ಪದಕೋಶ

ಭಾಷಿಕವಾಗಿ ಪ್ರತಿಯೊಂದು ಭಾಷಾ ಸಮುದಾಯ ತನ್ನದೇ ಆದ ಪದಕೋಶವನ್ನು ಹೊಂದಿರುತ್ತದೆ. ಈ ಪದಕೋಶ ಆ ಸಮುದಾಯದ ವೃತ್ತಿ, ಭಾಷೆ, ನಂಬಿಕೆ ಸಂಪ್ರದಾಯ ಮೊದಲಾದ ಸಾಂಸ್ಕೃತಿಕ ವಿವರಗಳನ್ನು ಒಳಗೊಂಡಿರುತ್ತದೆ. ಸಮುದಾಯದಲ್ಲಿನ ಸಾಂಸ್ಕೃತಿಕ ಆಚರಣೆಗಳು ಹಾಗೂ ಸಮುದಾಯದ ಪಾರಂಪರಿಕ ವೃತ್ತಿಯ ಬಗೆಗಿನ ನಂಬಿಕೆ, ರೂಢಿ ಸಂಪ್ರದಾಯ ಮೊದಲಾದ ಸಾಂಸ್ಕೃತಿಕ ವಿವರಗಳನ್ನು ಅರಿಯಲು ಸಾಂಸ್ಕೃತಿಕ ಪದಕೋಶ ತುಂಬಾ ಅಗತ್ಯವಾಗಿರುತ್ತದೆ. ಸಮುದಾಯದಲ್ಲಿನ ವೃತ್ತಿಗೆ ಸಂಬಂಧಿಸಿದ ಉಪಕರಣಗಳು, ಅವುಗಳ ಬಗೆಗೆ ಸಮುದಾಯದಲ್ಲಿರುವ ನಂಬಿಕೆ ಮೊದಲಾದವುಗಳನ್ನು ಪದಕೋಶ ವಿವರಿಸುವುದು ಕಂಡುಬರುತ್ತದೆ. ಪ್ರಸ್ತುತ ಈ ಅಧ್ಯಾಯದಲ್ಲಿ ಹಂಡಿಜೋಗಿ ಸಮುದಾಯದ ಸಾಂಸ್ಕೃತಿಕ ಆಚರಣೆಗಳು, ಪಾರಂಪರಿಕ ವೃತ್ತಿ, ವೃತ್ತಿ ಸಂಬಂಧಿಯಾದ ಉಪಕರಣಗಳು, ಸಮುದಾಯದಲ್ಲಿನ ಇತರೇ ವೃತ್ತಿಗಳಿಗೆ ಸಂಬಂಧಿಸಿದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪದಕೋಶವನ್ನು ವಿವರಿಸಲಾಗಿದೆ. ಜೊತೆಗೆ ಸಮುದಾಯದಲ್ಲಿ ಬಳಕೆಗೊಳ್ಳುವ ಬಂಧುತ್ವಸೂಚಿ ಪದಗಳು, ಕುಟುಂಬದಲ್ಲಿನ ಗೃಹಬಳಕೆಯ ವಸ್ತುಗಳು ಹೀಗೆ ಮೊದಲಾದ ವಿಷಯಗಳಿಗೆ ಸಂಬಂಧಿಸಿದ ಪದಕೋಶವನ್ನು ಈ ಭಾಗದಲ್ಲಿ ವಿವರಿಸಲಾಗಿದೆ. ಪ್ರಮುಖವಾಗಿ ಇಲ್ಲಿ ಸಮುದಾಯದ ಮೂಲ ಭಾಷಾ ರೂಪಗಳ ಪದಕೋಶವನ್ನು ವಿವರಿಸಲಾಗಿದೆ. ಆಚರಣೆಗೆ ಸಂಬಂಧಿಸಿದ ಪದಗಳನ್ನು ಕುರಿತು ಸಾಂಸ್ಕೃತಿಕ ವಿವರಗಳನ್ನು ಸಹ ನೀಡಲಾಗಿದೆ. ಉದಾ. 'ಕಿನ್ನೂರಿ' ಇದೊಂದು ಪಾರಂಪರಿಕ ಜನಪದ ತಂತೀವಾದ್ಯ. ಹಂಡಿಜೋಗಿ ಸಮುದಾಯದಲ್ಲಿ ಇದನ್ನು 'ಅನ್ನ ಕೊಡುವ ದೈವ' ಎಂದು ಪೂಜಿಸುವುದು ಕಂಡುಬರುತ್ತದೆ. ಜೊತೆಗೆ ಶಿವನ ಆಯುಧವಾದ 'ತ್ರಿಶೂಲ'ವನ್ನು ಹಂಡಿಜೋಗಿಗಳು ತಮ್ಮ ಸಮುದಾಯದ ಕುಲದೈವ ಹಾಗೂ 'ಭೈರವಸ್ವರೂಪಿ' (ಭೈರವಸಂಕೇತ) ಎಂದು ಪೂಜಿಸುವುದು ಕಂಡುಬರುತ್ತದೆ. ಹೀಗೆ ಸಮುದಾಯದ ವೃತ್ತಿಯ ಉಪಕರಣಗಳು ಹಾಗೂ ಸಮುದಾಯದ ಸಾಂಪ್ರದಾಯಿಕ ಆಚರಣೆಗಳಿಗೆ ಸಂಬಂಧಿಸಿದ ಪದಕೋಶವನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಆಧುನೀಕರಣ ಮತ್ತು ನಗರೀಕರಣದ ಪ್ರಭಾವದಿಂದಾಗಿ ಸಮುದಾಯದ ಪಾರಂಪರಿಕ ವೃತ್ತಿ ಕಸುಬುಗಳಾದ

